# ಭಕ್ತಿ ವಿಜಯ

ಸಂಗ್ರಾಹಕರು .
**ಯು. ಜಿ. ಹೂಗಾರ**



ಪ್ರಕಾಶಕರು
ಸಿಟಿ ಬುಕ್ ಸ್ಟಾಲ್, ಹುಬ್ಬಳ್ಳಿ.

**ಬೆಲೆ : ೧—೫೦**

# ಮುನ್ನುಡಿ

"ಭಕ್ತಿ" ಎಂದರೇನು ? "ಭಕ್ತಿ" ಇದರ ಅರ್ಥವು ಬಹು ವ್ಯಾಪಕವಾಗಿದ್ದು, ಈ ಭಕ್ತಿಯ ಅರ್ಥ ತಿಳಿದುಕೊಂಡರೆ ಈ ಭವ ಸಂಸಾರದಿಂದ ಬಹು ಸುಲಭವಾಗಿ ಪಾರಾಗಬಹುದು.

"ಭಕ್ತಿ" ಎಂದರೆ ಮುಖ್ಯವಾಗಿ "ವಿಶ್ವಾಸ ಅಥವಾ ನಂಬಿಗೆ" ಎಂದು ಅರ್ಥವಾಗುವದು. ಆದರೆ ವಿಶ್ವಾಸವಿದ್ದಲ್ಲಿ ಸಹನೆಯ ನೆಲೆಯೊಡೆಯುವದು. ಸಹನತೆ ಇದ್ದಲ್ಲಿ ವಿನಯ ಉದಯಿಸುವದು. ವಿನಯವಿದ್ದಲ್ಲಿ ಪ್ರೇಮ ಪಸರಿಸುವದು. ಪ್ರೇಮವಿದ್ದಲ್ಲಿ ಪ್ರೀತಿಯುಂಟಾಗುವದು ಪ್ರೀತಿಯಿದ್ದಲ್ಲಿ ಆತ್ಮೀಯತೆ ಬೆಳೆಯುವದು. ಆತ್ಮೀಯತೆಯಿದ್ದಲ್ಲಿ ಅನಂತತೆ ಆವರಿಸಿಕೊಳ್ಳುವದು. ಈ ಅನಂತತೆಯ ಸ್ವರೂಪಕ್ಕೆ ಬಂದ ಭಕ್ತನಿಗೆ ಭಗವಂತನ ದರ್ಶನವಾಗುವದು. ಆಗ ಆ ಭಕ್ತನಿಗೆ ಎಲ್ಲಿ ನೋಡಿದರಲ್ಲಿ ಭಗವಂತನು ಕಾಣಿಸಿಕೊಳ್ಳುವನು. ಕಲ್ಲು, ಮುಳ್ಳು, ಕಟ್ಟಿಗೆ ಮೊದಲಾದ ವಸ್ತುಗಳಲ್ಲಿಯೂ, ಮಾನವಾದಿ ಮೊದಲುಗೊಂಡು ಸಕಲ ಕ್ರಿಮಿಕೀಟಾದಿ ಜೀವಜಂತುಗಳಲ್ಲಿಯೂ ಭಗವಂತನು ಇರುವದನ್ನು ಕಂಡು ಸದಾ ಆನಂದಿಸುತ್ತ ಮುಕ್ತಿಯನ್ನು ಹೊಂದುವನು.

ಸಂಸಾರದ ಏರಿಳಿತಗಳ ಹೊಡೆತಕ್ಕೆ ಸಿಕ್ಕು ನವೆದು ಸಣ್ಣಾಗಿಯೂ ಬಳಲಿ ಬೆಂಡಾಗಿಯೂ, ತೊಳಲುತ್ತಿರುವ ಅನೇಕರು ಮುಕ್ತಿಗಾಗಿ ಹಾತೊರೆಯುತ್ತಿರುವದು ನಿಜ. ಆದರೆ ಇಂಥವರ ಮುಕ್ತಿಗಾಗಿ ಮಾರ್ಗದರ್ಶನವೊಂದು ಅವಶ್ಯವಿದೆಯಲ್ಲವೇ? ಇಂಥ ಮಾರ್ಗದರ್ಶನವನ್ನು ಈ "ಭಕ್ತಿ ವಿಜಯ"ವು ದೊರಕಿಸಿಕೊಡಬಲ್ಲದೆಂದು ನನ್ನ ಗ್ರಹಿಕೆ.

ಭಗವದ್ಭಕ್ತರು ತಮ್ಮ "ಭಕ್ತಿ" ಪ್ರಭಾವದಿಂದ ಸಂಸಾರದಲ್ಲಿ ವಿಜಯ ಭೇರಿಯನ್ನು ಬಾರಿಸಿದರು. ಅಂಥ ಮಹಾಭಕ್ತರ ಚರಿತ್ರೆಗಳ ಸಂಗ್ರಹವುಳ್ಳ ಈ ಹೊತ್ತಿಗೆ "ಭಕ್ತಿ ವಿಜಯ"ವೆಂಬ ಹೆಸರಿನಿಂದ ಜನ್ಮವೆತ್ತಿತು. ಇದರಲ್ಲಿ ಸಂಗ್ರಹಿಸಿದ ಪ್ರತಿಯೊಬ್ಬ ಭಗವದ್ಭಕ್ತರ ಚರಿತ್ರೆಯೊಂದೊಂದರಿಂದ ಒಂದೊಂದು ಗುಣ ವಿಶೇಷವುಳ್ಳ ಅನುಭವವನ್ನು ಅರಿತು ಅರಗಿಸಿಕೊಳ್ಳುತ್ತ ಹೋದಂತೆ ಭಕ್ತಿಮಾರ್ಗದಲ್ಲಿ ಮುನ್ನಡೆದು ಮುಕ್ತಿಯನ್ನು ಸಂಪಾದಿಸಲು ಶಕ್ಯವೆಂದು ಹೇಳಬಹುದು.

**ಹುಬ್ಬಳ್ಳಿ**
೧-೪-೧೯೫೧

ತಮ್ಮ ಆತ್ಮೀಯ
**ಯು. ಜಿ. ಹೂಗಾರ**

# ವಿಷಯಾನುಕ್ರಮಣಿಕೆ

# ೧. ಸಂತ ಜ್ಞಾನೇಶ್ವರ

ಗಂಗಾತೀರದಲ್ಲಿ ಆಪವೆಂಬ ಗ್ರಾಮದಲ್ಲಿ ಗೋವಿಂದನೆಂಬ ಪಂಡಿತನು ನಿರಾಬಾಯಿ ಎಂಬ ಸುದತಿಯೊಡನೆ ಸುಖ ಸಂಸಾರದಲ್ಲಿದ್ದನು. ಆತನು ಈ ಊರ ಕುಲಕರ್ಣಿಕೆಯನ್ನು ಮಾಡುತ್ತಿದ್ದನು. ಆದರೆ ಮಕ್ಕಳಿಲ್ಲದ್ದರಿಂದ ವ್ಯಸನಕ್ಕೊಂದು ಕಾರಣವಾಗಿದ್ದಿತು. ಆ ದಂಪತಿಗಳು ಪಂಢರಿಪುರ ಯಾತ್ರೆ ಮಾಡಿ ಬಂದದ್ದರಿಂದ ನಿರಾಬಾಯಿ ಗರ್ಭವತಿಯಾಗಿ ಒಂದು ಗಂಡು ಮಗುವನ್ನು ಹಡೆದಳು. ಆ ಮಗುವು ವಿಠ್ಠಲ ಪ್ರಸಾದದಿಂದ ಜನನವಾದನೆಂಬ ನಂಬಿಕೆಯಿಂದ ವಿಠ್ಠಲನೆಂಬ ನಾಮಕರಣ ಮಾಡಿದರು.

ವಿಠ್ಠಲನು ಶುಕ್ಲಪಕ್ಷದ ಚಂದ್ರನಂತೆ ಬೆಳೆಯತೊಡಗಿದನು. ಅವನಿಗೆ ಸಕಾಲದಲ್ಲಿ ವಿದ್ಯಾವ್ಯಾಸಂಗ, ಉಪನಯನಾದಿಗಳನ್ನು ಮಾಡಿದರು. ಇಂತು ಕೆಲ ದಿನ ಕಳೆಯುತ್ತಿರಲು ಒಂದು ದಿನ ವಿಠ್ಠಲನು ತೀರ್ಥಯಾತ್ರೆಗಾಗಿ ತಂದೆ-ತಾಯಿಗಳ ಅಪ್ಪಣೆ ಪಡೆದು ಹೊರಟು ಅನೇಕ ದೇಶಗಳನ್ನು ಸಂಚರಿಸುತ್ತಲೂ, ತೀರ್ಥಗಳನ್ನು ಸಂದರ್ಶಿಸುತ್ತಲೂ, ಒಂದು ದಿನ ಅಲಕಾವತಿಗೆ ಬಂದು ಮುಟ್ಟಿದನು. ಅಲ್ಲಿದ್ದ ಚಕ್ರತೀರ್ಥದಲ್ಲಿ ಸ್ನಾನ ಮಾಡಿ ಅಶ್ವತ್ಥಘಟ್ಟದಲ್ಲಿ ಕುಳಿತು ಧ್ಯಾನಯೋಗದಲ್ಲಿ ಮಗ್ನನಾದನು. ಅಲಕಾಪುರವಾಸಿಯಾದ ಸಿದ್ಧೋಪಂಡಿತನೆಂಬ ಸದ್ಬ್ರಾಹ್ಮಣನು ಚಕ್ರತೀರ್ಥದಲ್ಲಿ ಸ್ನಾನಮಾಡಿ ಶುಭವಸ್ತ್ರವನ್ನುಟ್ಟು ದೇವರ ಧ್ಯಾನ ಮಾಡುತ್ತ ಅಶ್ವತ್ಥಘಟ್ಟಕ್ಕೆ ಬಂದು ನಿತ್ಯದಂತೆ ಅತಿಥಿಗಳನ್ನು ಹುಡುಕುತ್ತಿರಲು ಅಲ್ಲಿಯೇ ಕುಳಿತಿದ್ದ ವಿಠ್ಠಲನನ್ನು ಕಂಡು, ಆತನ ಸಮೀಪಕ್ಕೆ ಹೋದನು. ಆಗ ವಿಠ್ಠಲನು ಧ್ಯಾನಯೋಗದಲ್ಲಿ ಮಗ್ನನಾಗಿದ್ದನ್ನು ಕಂಡು ಕೆಲವೇಳೆ ಅಲ್ಲಿಯೇ ನಿಂತುಕೊಂಡನು. ಅಷ್ಟೊತ್ತಿಗೆ ವಿಠ್ಠಲನು ಧ್ಯಾನಯೋಗದಿಂದ

ಬಹಿರ್ಮುಖನಾದನು. ಆಗ ಸಿದ್ಧೋಪಂತನು ಆತನನ್ನು ಮರ್ಯಾದೆಯಿಂದ ಮಾತನಾಡಿಸಿ ನಮ್ಮ ಮನೆಗೆ ಅತಿಥ್ಯಕ್ಕಾಗಿ ಬರಬೇಕೆಂದು ಬಿನ್ನೈಸಿಕೊಡನು. ವಿಠೋಬನು ಸಿದ್ಧೋಪಂತನ ಪ್ರಾರ್ಥನೆಯಂತೆ ಆತನ ಮನೆಗೆ ಹೋಗಿ ಮೃಷ್ಟಾನ್ನ ಭೋಜನವಾದನಂತರ ತಾಂಬೂಲವನ್ನು ತಂದಿಟ್ಟರು. ಆಗ ವಿಠೋಬನು ತಾನು ಬ್ರಹ್ಮಚಾರಿಯಾಗಿದ್ದುದರಿಂದ ತನಗದು ಬೇಡವೆಂದು ಹೇಳಿದನು. ವಿಠೋಬನ ಮಾತಿನಿಂದ ಸಿದ್ಧೋಪಂತನ ದಂಪತಿಗಳಿಗೆ ಬಹಳ ಆನಂದವಾಯಿತು. ಸಿದ್ಧೋಪಂತನ ಪ್ರಾರ್ಥನೆಯಂತೆ ವಿಠೋಬನು ಆ ದಿನ ಅಲ್ಲಿಯೇ ಉಳಿದುಕೊಂಡನು.

ಸಿದ್ಧೋಪಂತನಿಗೆ ರುಕ್ಮಾಬಾಯಿಯೆಂಬ ಕನ್ಯಾರತ್ನವುಂಟು. ಆಕೆ ವಿವಾಹಕ್ಕೆ ತಕ್ಕ ವಯಸ್ಕಳಾಗಿದ್ದರಿಂದ ವರನನ್ನು ಹುಡುಕುವದೊಂದು ದೊಡ್ಡ ಭಾರವಾಗಿದ್ದಿತು. ಅಂದು ರಾತ್ರಿ ಸಿದ್ಧೋಪಂತನು ವಿಠೋಬನೊಡನೆ ಊಟ ಮಾಡಿದ ನಂತರ ಮಾತನಾಡುತ್ತ ಕುಳಿತುಕೊಂಡನು. ಆಗ ವಿಠೋಬನ ಕುಲಗೋತ್ರಗಳನ್ನೆಲ್ಲ ಪರ್ಯಾಯದಿಂದ ಕೇಳಿ ತಿಳಿದುಕೊಂಡನು. ಪಾಂಡುರಂಗನಮೇಲೆ ಭಾರ ಹಾಕಿ ತನ್ನ ಮನೋಭಾವವನ್ನು ತಿಳಿಸಿ, ತನ್ನ ಮಗಳಾದ ರುಕ್ಮಾಬಾಯಿಯನ್ನು ಲಗ್ನವಾಗಬೇಕೆಂದು ಹೇಳಿದನು.

ವಿಠೋಬನಿಗೆ ಲಗ್ನವಾಗಿ ಭೋಗಭಾಗ್ಯಗಳನ್ನನುಭವಿಸಬೇಕೆಂಬ ಇಚ್ಛೆ ಇರಲಿಲ್ಲವಾದ ಕಾರಣ ಸಿದ್ಧೋಪಂತನು ಅಂದ ಮಾತುಗಳು ವಿಠೋಬನಿಗೆ ರುಚಿಸಲಿಲ್ಲ. ಅಲ್ಲಿಂದ ಹೇಗಾದರೂ ಪಾರಾಗಿ ಹೋಗಬೇಕೆಂಬ ಆತುರದಲ್ಲಿದ್ದನು. ಅಂದು ರಾತ್ರಿ ಎಲ್ಲರೂ ಮಲಗಿ ನಿದ್ರಿಸುತ್ತಿದ್ದಾಗ ವಿಠೋಬನು ಸಾವಕಾಶವಾಗಿ ಎದ್ದು ಸದ್ದಾಗದಂತೆ ಹೆಜ್ಜೆಯನ್ನಿಡುತ್ತ ಬೀದಿಯ ಬಾಗಿಲಿಗೆ ಬಂದನು, ಎಲ್ಲರೂ ನಿದ್ರಾಪರವಶರಾಗಿದ್ದರೂ ರುಕ್ಮಾಬಾಯಿಯು ಮಾತ್ರ ಎಚ್ಚರವಾಗಿಯೇ ಇದ್ದಳು. ರೂಪಲಾವಣ್ಯ, ಸವಿನಯ ಸ್ವಭಾವ, ವಿದ್ಯಾಸಂಪತ್ತುಗಳಿಂದ ಕೂಡಿದ ವಿಠೋಬನ ಮೇಲೆ ಮೋಹಗೊಂಡವಳಾಗಿ ತನ್ನನ್ನು ವರಿಸುವಂತೆ ಆ ಪಾಂಡುರಂಗನನ್ನು ಪ್ರಾರ್ಥಿಸುತ್ತಿದ್ದಳು. ಇಂತಿರುವಾಗ ಕದದ ಸಪ್ಪಳವಾಗಲು ಆ ಕಡೆ ನೋಡಲು ಮಿಣುಕು ದೀಪದ ಬೆಳಕಿನಲ್ಲಿ ವಿಠೋಬನು ಕದ ತೆಗೆಯುತ್ತಿರು

ವದನ್ನು ಕಂಡಳು. ಕೂಡಲೇ ಧೈರ್ಯದಿಂದ ಎದ್ದುಹೋಗಿ ಆತನನ್ನು ತಡೆದು ಸ್ವಾಮೀ ! ತಾವು ಈಗ ಎಲ್ಲಿಗೆ ತೆರಳುವಿರೆಂದು ಕೇಳಿದಳು. ಅದಕ್ಕೆ ವಿಠೋಬನು ಇನ್ನು ಈಕೆಯು ಹೋಗಗೊಡುವದಿಲ್ಲ. ಕಾರಣ ಆಕೆಯನ್ನು ಸ್ವಲ್ಪ ಬೆದರಿಸಿ ಹಿಂದೆ ಸರಿಸಿ ಹೋಗಬೇಕೆಂದು ಆಲೋಚಿಸಿ, ಎಲೌ ಮಾನವತಿಯೇ ! ನಿನಗಿದು ಒಳ್ಳೆಯದೇ ? ತಂದೆ-ತಾಯಿಗಳ ಆಧೀನದಲ್ಲಿರುವೆ ನೀನು ಸ್ವೇಚ್ಛೆಯಿಂದ ಪರಪುರುಷನಾದ ನನ್ನೊಡನೆ ಹೀಗೆ ಮಾತನಾಡುತ್ತಿರುವದನ್ನು, ಅದರಲ್ಲಿಯೂ ಇಂಥ ಮಧ್ಯರಾತ್ರಿಯಲ್ಲಿ ! ಸಾಕು ಸರಿ ಹಿಂದಕ್ಕೆ ಯಾರಾದರೂ ಹಿರಿಯರು ನೋಡಿದರೆ ಈ ನಿನ್ನ ನಡತೆಯನ್ನು ಮೆಚ್ಚುವರೆ ! ಎಂದು ಗದ್ದರಿಸಿದನು. ಈ ಗದ್ದಲದ ಸದ್ದಿಗೆ ಸಿದ್ಧೋಪಂತನು ಎಚ್ಚತ್ತು ಅಲ್ಲಿಗೆ ಬಂದು, ತನ್ನ ಮಗಳಿಂದ ಎಲ್ಲ ಸಂಗತಿ ತಿಳಿದವನಾಗಿ ವಿಠೋಬನನ್ನು ಕುರಿತು, ಮಹಾಶಯ ಹೀಗೆ ಮಧ್ಯ ರಾತ್ರಿಯಲ್ಲಿ ಕಳ್ಳರಂತೆ ಎದ್ದು ಸದ್ದಿಲ್ಲದೆ ಯಾರಿಗೂ ಕೇಳದೆ ಹೋಗುವದರಿಂದ ಜನರಲ್ಲಿ ಅಪಕೀರ್ತಿಗೆ ಪಾತ್ರನಾಗುವಿಯಾದ್ದರಿಂದ, ನಿನ್ನ ವಿಚಾರ ಏನೇ ಇರಲಿ ನೀನು ಮಾತ್ರ ಉದಯಕ್ಕೆ ಊರು ಬಿಡಬಹುದೆಂದು ಸವಿನಯದಿಂದ ಸಮಾಧಾನಪಡಿಸಿದ ನಂತರ ಎಲ್ಲರೂ ಮಲಗಿ ನಿದ್ರೆ ಹೋದರು. ಆಗ ವಿಠೋಬನ ಸಪ್ನದಲ್ಲಿ ಪಾಂಡುರಂಗನು ಪ್ರಸನ್ನನಾಗಿ ಸಿದ್ಧೋಪಂತನ ಮಗಳನ್ನು ತಪ್ಪದೆ ಲಗ್ನವಾಗು ಮುಂದೆ ಮಹೋತ್ತರ ಕಾರ್ಯಗಳು ಸರ್ವ ಲಕ್ಷಣ ಸಂಪನ್ನೆಯಿಂದ ಜರುಗತಕ್ಕವುಗಳಿವೆ. ಎಂದು ಹೇಳಿ ಅದೃಶ್ಯನಾದನು. ಅದೇ ವೇಳೆಗೆ ಸಿದ್ಧೋಪಂತನಿಗೂ ಪಾಂಡುರಂಗನು ಸ್ವಪ್ನದಲ್ಲಿ ಕಾಣಿಸಿಕೊಂಡು, ನಿನ್ನ ಮಗಳನ್ನು ವಿಠೋಬನಿಗೆ ಕೊಟ್ಟು ಕನ್ಯಾದಾನ ಮಾಡು. ಆ ದಂಪತಿಗಳು ಲೋಕವಿಖ್ಯಾತ ಮಕ್ಕಳನ್ನು ಹಡೆಯುತ್ತಾರೆ. ಎಂದು ಹೇಳಿ ಅದೃಶ್ಯನಾದನು. ಮರುದಿನ ಪ್ರಾತಃಕಾಲದಲ್ಲೆದ್ದು ಮುಖಮಾರ್ಜನೆಯಾದ ನಂತರ ಸಿದ್ಧೋಪಂತನು ತನ್ನ ಸ್ವಪ್ನದ ವಿಚಾರವನ್ನು ವಿಠೋಬನಿಗೆ ತಿಳಿಸಲು ವಿಠೋಬನು ಹಾಗೇ ಆಗಲಿಯೆಂದು ಸಮ್ಮತಿಯನ್ನು ಸೂಚಿಸಿದನು.

ಸಿದ್ಧೋಪಂತನು ವಿವಾಹಕ್ಕೆ ಬೇಕಾದ ಸೌಕರ್ಯಗಳನ್ನು ಸಿದ್ಧಪಡಿಸಿಕೊಂಡು ತನ್ನೆಲ್ಲ ಗುರು-ಹಿರಿಯರನ್ನೂ, ಬಂಧು ಬಳಗದವರನ್ನೂ

ಕರೆಸಿಯಿಕೊಂಡು ಮಂಗಳಗೀತಾ ವಾದ್ಯಗಳೊಂದಿಗೆ ರುಕ್ಮಾಬಾಯಿಯನ್ನು ವಿಠೋಬನಿಗೆ ಕೊಟ್ಟು ಕನ್ಯಾದಾನ ಮಾಡಿದನು. ಬಂದಿದ್ದ ಬಂಧು ಮಿತ್ರರೆಲ್ಲರೂ ಮೃಷ್ಟಾನ್ನ ಭೋಜನ ವಸ್ತ್ರ ಭೂಷಣಗಳಿಂದ ಸತ್ಕರಿಸಲ್ಪಟ್ಟು ಅವರವರ ಸ್ಥಳಗಳಿಗೆ ತೆರಳಿದರು,

ವಿಠೋಬಾ ಮಹಾರಾಜರು ನಾಲ್ಕಾರು ದಿನಗಳಲ್ಲಿದ್ದು ತನ್ನ ಜನನಿ ಜನಕರನ್ನು ಕಾಣಬೇಕೆಂಬ ಬಯಕೆಯನ್ನು ಮಾವನಿಗೆ ತಿಳಿಸಲು ಸಿದ್ಧೋಪಂತನು ತನ್ನ ಮಿತ್ರ ಪರಿವಾರದೊಂದಿಗೆ ನವ ದಂಪತಿಗಳನ್ನು ಕರೆದುಕೊಂಡು ಆಪ ಗ್ರಾಮಕ್ಕೆ ಬಂದರು.

ಗೋವಿಂದ ಪಂದಿತ ದಂಪತಿಗಳು ಮಗನು ಬಂದದ್ದನ್ನು ಕಂಡು ಅತಿ ಆನಂದಭರಿತರಾದರು. ಆಗ ಮಗ ಸೊಸೆಯರು ನಮಸ್ಕರಿಸಲಾಗಿ ಮಂಗಳಾಶೀರ್ವಾದದಿಂದ ಹರಸಿದರು. ಆಗ ಸಿದ್ಧೋಪಂತನು ಶ್ರೀ ಪಾಂಡುರಂಗನಾಜ್ಞೆಯೇ ಮದುವೆಗೆ ಕಾರಣವಾಯಿತೆಂತಲೂ, ವಿಠೋಬನನ್ನು ಮೊದಲು ಕಂಡಂದಿನಿಂದ ವಿವಾಹದ ವರೆಗಿನ ಎಲ್ಲ ವೃತ್ತಾಂತವನ್ನೂ ಗೋವಿಂದ ದಂಪತಿಗಳಿಗೆ ತಿಳಿಸಲು ಆಗವರು ಸಂತೋಷದಿಂದ ತಮ್ಮ ಅಂಗೀಕಾರವನ್ನು ಸೂಚಿಸಿದರು.

ಇಂತು ಸುಖ ಸಂಸಾರದಲ್ಲಿ ವಿಠೋಬನು ಕಾಲಕಳೆಯುತ್ತಿರಲು ಬಂದ ಕೆಲ ದಿನಗಳಲ್ಲಿ ಸಿದ್ಧೋಪಂತ ದಂಪತಿಗಳು ಬೇಗರಿಂದ ಸತ್ಕಾರ ಹೊಂದಿ ಸ್ವಗ್ರಾಮಕ್ಕೆ ತೆರಳಿದರು. ವಿಠೋಬನು ಸತಿಯೊಡನೆ ಸುಖ ಸಂಸಾರದಲ್ಲಿ ಕಾಲ ಕಳೆಯುತ್ತಿರಲು ಅವನ ಮಾತಾಪಿತೃಗಳೀರ್ವರೂ ಪರಲೋಕವನ್ನೈದಿ ಪರಂಧಾಮನ ಸನ್ನಿಧಿಯನ್ನು ಸೇರಿದರು. ವಿಠೋಬನ ಮಾತಾಪಿತೃಗಳು ಪರಲೋಕವನ್ನೈದಿದ ಸಮಾಚಾರವನ್ನು ಕೇಳಿ ಆಪ ಗ್ರಾಮಕ್ಕೆ ಬಂದು ಅಳಿಯನನ್ನೂ ಮಗಳನ್ನೂ ತಮ್ಮ ಗ್ರಾಮಕ್ಕೆ ಕರೆದೊಯ್ದನು. ಅಲ್ಲಿ ರುಕ್ಮಾಬಾಯಿಯು ಪತಿಸೇವೆಯಲ್ಲಿ ನಿರತಳಾಗಿ ಆತನಿಗೆ ಕೊಂಚವೂ ತ್ರಾಸಾಗದಂತೆ ಎಚ್ಚರಿಕೆಯಿಂದಿದ್ದರೂ ವಿಠೋಬನ ಮನಸ್ಸು ಸಂಸಾರದಲ್ಲಿರಲು ಒಪ್ಪದೆ ವೈರಾಗ್ಯದತ್ತ ಒಲಿಯತೊಡಗಿತು. ಆಗಾಗ್ಗೆ ರುಕ್ಮಾಬಾಯಿಯನ್ನು ತಾನು ಸನ್ಯಾಸಾಶ್ರಮಕ್ಕೆ ಹೋಗಲು ಸಮ್ಮತಿಯನ್ನು ಕೇಳುತ್ತಲೇ ಇದ್ದನು.

ಒಂದು ದಿನ ರುಕ್ಮಾಬಾಯಿಯು ನಿದ್ರೆಯಲ್ಲಿ ಸ್ವಸ್ಥವಿಲ್ಲದೆ ಮಲಗಿದ್ದಳು. ಆಗ ವಿಠೋಬನು ಆಕೆಯನ್ನು ಕುರಿತು, ಸುದತೀ ! ನನಗೆ ಸನ್ಯಾಸಕ್ಕಪ್ಪಣೆ ಕೊಡುವಿಯಾ ? ಎಂದು ಕೇಳಲು ಆಗ ರುಕ್ಮಾಬಾಯಿ ಅಸ್ವಸ್ಥತೆಯ ಮೂಲಕ ದಿಗ್ಭ್ರಾಂತಳಾದ ಕಾರಣ ಒಳ್ಳೇದು, ಎಂದಳು. ಆ ಕೂಡಲೇ ವಿಠೋಬನು ಮನೆಬಿಟ್ಟು ಹೊರಬಿದ್ದನು. ರುಕ್ಮಾಬಾಯಿಯು ನಿದ್ರೆಯಿಂದ ಎಚ್ಚೆತ್ತು ತನ್ನ ಪ್ರಾಣನಾಥನನ್ನು ಕಾಣದೆ ವ್ಯಾಕುಲಗೊಂಡಳು. ಅರೆನಿದ್ರೆಯಲ್ಲಿದ್ದ ತನ್ನ ಸಮ್ಮತಿ ಪಡೆದುದನ್ನು ನೆನೆಸಿಕೊಂಡು ಗಾಬರಿಗೊಂಡು ತಂದೆಗಾವಿಷಯವನ್ನು ತಿಳಿಸಲು ಆತನು ಅಳಿಯನನ್ನು ಎಲ್ಲ ಕಡೆಗಳಲ್ಲಿ ಹುಡುಕಿಸಿದನು, ಎಲ್ಲಿಯೂ ಆತನ ವಿಷಯವೇ ತಿಳಿಯಲಿಲ್ಲ. ಪತಿಯು ಖಂಡಿತವಾಗಿ ದೇಶಾಟನಕ್ಕೆ ತೆರಳಿದನೆಂದು ನಿಶ್ಚಯಿಸಿದ ರುಕ್ಮಾಬಾಯಿಯು ಏನೂ ತೋಚದವಳಾಗಿ ತನಗೊದಗಿದ ಕಷ್ಟವನ್ನು ಪರಿಹರಿಸತಕ್ಕವನು ಆ ಪಾಂಡುರಂಗನೇ ಎಂದು ನಂಬಿ ಚಕ್ರತೀರ್ಥದಲ್ಲಿರುವ ಅಶ್ವತ್ಥ ವೃಕ್ಷಗಳಿಗೆ ಪ್ರದಕ್ಷಿಣೆಮಾಡುತ್ತ ಅಶ್ವತ್ಥ ನಾರಾಯಣ ರೂಪಿಯಾದ ಪಾಂಡುರಂಗನನ್ನು ಧ್ಯಾನಿಸುತ್ತಿದ್ದಳು. ಇಂತು ಕೆಲದಿನ ಕಳೆಯುತ್ತಿರಲು ಒಂದು ದಿನ ಕೆಲ ದೇಶಸಂಚಾರಿಗಳು ಆಲಕಾಪುರಿಗೆ ಬಂದು ಸಿದ್ಧೋಪಂತನ ಮನೆಯಲ್ಲಿ ಭೋಜನ ಮಾಡುತ್ತಿರುವಾಗ ಮಾತಿಗೆ ಮಾತು ಹೊರಟು ವಿಠೋಬನೆಂಬಾತನು ಕಾಶಿಯಲ್ಲಿ ಸನ್ಯಾಸಿಯಾದನೆಂದು ಆ ಸಂಚಾರಿಗಳು ಹೇಳಿಹೋದರು. ಆಗ ರುಕ್ಮಾಬಾಯಿಯು ತನ್ನ ಪತಿಯು ಎಲ್ಲಿಯೇ ಆಗಲಿ ಜೀವಿಂತನಿರುವ ನಲ್ಲಾ ಎಂದು ಸಂತೋಷಗೊಂಡು ಹೇಗಾದರೂ ಮಾಡಿ ಇತನನ್ನು ಕರೆ ತ ರ ಬೇ ಕೆಂ ದು ತಂದೆಗೆ ಬಿನ್ನಹಮಾಡಿಕೊಂಡಳು. ಆತನೂ ಅದೇ ಪ್ರಯತ್ನದಲ್ಲಿದ್ದನು.

ಇವರ ವಿಚಾರವಿಂತಿರಲು ಮನೆಬಿಟ್ಟು ತೆರಳಿದ ವಿಠೋಬನು ಕಾಶಿಗೆ ಹೋಗಿ ಅಲ್ಲಿ ಶ್ರೀಪಾದ ಸ್ವಾಮಿಗಳ ಮೊರೆಹೊಕ್ಕು ಸನ್ಯಾಸಾಶ್ರಮವನ್ನು ಸ್ವೀಕರಿಸಿ ಅವರ ಶಿಷ್ಯನಾಗಿ ಶಿಷ್ಯಮಂಡಲಿಯಲ್ಲಿ ಸೇರಿದನು. ಅವನಿಗೆ ಶ್ರೀಪಾದ ಸ್ವಾಮಿಗಳು "ಚೈತನ್ಯ"ನೆಂದು ಹೆಸರು ಕೊಟ್ಟು ಆಶ್ರಮವಾಸಿಯನ್ನಾಗಿ ಮಾಡಿಕೊಂಡರು. ವಿಠೋಬನು ಗು ರು ಸೇ ವಾ ಸ ಕ್ತ ನಾ ಗಿ ಆಧ್ಯಾತ್ಮ ಸಾಧನೆಗಾಗಿ ಪ್ರಯತ್ನಪೂರ್ವಕ ಚಿಂತಿಸುತ್ತಲಿದ್ದನು. ಶ್ರೀಪಾದ

ಸ್ವಾಮಿಗಳು ದೇಶಾಟನೆಗಾಗಿ ಹೊರಟು ಅನೇಕ ತೀರ್ಥಕ್ಷೇತ್ರಗಳನ್ನು ಸಂದರ್ಶಿಸುತ್ತ ಅಲಕಾವತಿಗೆ ಬಂದು ಚಕ್ರತೀರ್ಥದಲ್ಲಿ ಸ್ನಾನ ಮಾಡಿ ಅಶ್ವತ್ಥಘಟ್ಟದ ಮೇಲೆ ಕುಳಿತು ಧ್ಯಾನಯೋಗದಲ್ಲಿದ್ದರು. ನಿತ್ಯದಂತೆ ರುಕ್ಮಾಬಾಯಿಯು ಪೂಜಾ ಸಾಮಾನುಗಳೊಂದಿಗೆ ಅಶ್ವತ್ಥ ಘಟಕ್ಕೆ ಬಂದು ಅಶ್ವತ್ಥನಾರಾಯಣ ಪೂಜಾ ಪ್ರದಕ್ಷಿಣೆಗಳನ್ನು ಮಾಡಿ ಹಿಂತಿರುಗುತ್ತಿರಲು, ಅಲ್ಲಿ ಧ್ಯಾನಯೋಗದಲ್ಲಿ ಕುಳಿತಿದ್ದ ಶ್ರೀಪಾದಸ್ವಾಮಿಗಳನ್ನು ಕಂಡಳು. ಇವರಾರೋ ಮಹಾನುಭಾವರಿರುವರೆಂದು ತಿಳಿದು ಅಲ್ಲಿಯೇ ನಿಂತುಕೊಂಡಳು. ಶ್ರೀಪಾದಸ್ವಾಮಿಗಳು ಧ್ಯಾನಯೋಗದಿಂದ ಬಹಿರ್ಮುಖರಾಗಲು ಕೂಡಲೇ ರುಕ್ಮಾಬಾಯಿಯು ಅವರ ಪಾದಸನ್ನಿಧಿಗೆ ನಮಸ್ಕರಿಸಲು ಆಗ ಆ ಸ್ವಾಮಿಗಳು ರುಕ್ಮಾಬಾಯಿಯನ್ನು ಕುರಿತು "ಅಮ್ಮಾ ನಿನಗೆ ಮಂಗಳವಾಗಲಿ, ನೀನು ಮೂವರು ಪುತ್ರರನ್ನೂ, ಓರ್ವ ಪುತ್ರಿಯನ್ನೂ ಪಡೆದು ಸುಖಿಸಮ್ಮಾ ! ಎಂದು ಆಶೀರ್ವದಿಸಿದರು. ಆದರೆ ಆ ಮಾತುಗಳು ರುಕ್ಮಾಬಾಯಿಗೆ ಸುಖ-ದುಃಖಗಳೆರಡನ್ನೂ ಏಕಕಾಲಕ್ಕುಂಟುಮಾಡಿದವು. ಅದರಿಂದಾಕೆಯು ಸ್ಥಗಿತಳಾಗಿ ನಿಂತುಕೊಂಡಳು. ಆಗ ಶ್ರೀಪಾದಸ್ವಾಮಿಗಳು ರುಕ್ಮಾಬಾಯಿಯನ್ನು ಕುರಿತು "ಏಕಮ್ಮಾ ! ನನ್ನ ಆಶೀರ್ವಾದವು ನಿನಗೆ ಹಿತವಲ್ಲವೇ ? ಎಂದರು. ಆಗ ರುಕ್ಮಾಬಾಯಿಯು ಸವಿನಯ ಸ್ವಭಾವದಿಂದ ಪೂಜ್ಯರೇ ! ತಮ್ಮಂಥ ಮಹಾನುಭಾವರ ಪಾದಧೂಳಿಯನ್ನ ಶಿರಸಾವಹಿಸತಕ್ಕವಳಾದ ನಾನು ತಮ್ಮ ಮಾತುಗಳನ್ನು ಗೌರವಿಸದೆ ಅಲಕ್ಷಿಸತಕ್ಕವಳಲ್ಲ. ಆದರೆ ತಮ್ಮ ಅಮೋಘ ಆಶೀರ್ವಾದವು ಹತಭಾಗ್ಯಳಾದ ನನ್ನ ವಿಚಾರದಲ್ಲಿ ನಿರರ್ಥಕವಾಯಿತಲ್ಲಾ ಎಂದು ಚಿಂತಿಸಿದೆನಷ್ಟೇ" ಎಂದಳು. ಸ್ವಾಮಿಗಳು ಅದೇನು ಕಾರಣವಮ್ಮಾ ಎನಲು ನನ್ನ ಪತಿಯು ದೇಶಸಂಚಾರಿಗಳಾಗಿ ಹೋಗಿ ಕಾಶಿಯಲ್ಲಿ ಸನ್ಯಾಸವನ್ನು ಸ್ವೀಕರಿಸಿರುವರೆಂಬ ವಾರ್ತೆಯನ್ನು ಕೇಳಿ ನನ್ನಲ್ಲಿ ನಾನೇ ಕೊರಗುತ್ತಿರಲು ನನಗೆ ಪುತ್ರ ಸಂತಾನವು ಎತ್ತಣದು ? ಎಂದೆನ್ನುತ್ತಲೇ ಸ್ವಾಮಿಗಳನು ಏನು ? ಯೌವನವತಿಯೂ ಅಪುತ್ರಿಯೂ ಆಗಿರುವ ಸತಿಯನ್ನು ಬಿಟ್ಟು ಸನ್ಯಾಸವನ್ನು ತಾಳಿದನೇ ? ಅವನೆಂತಹ .ಅವಿವೇಕಿಯು ? ಅಂಥವನಿಗೆ ಸನ್ಯಾಸ ದೀಕ್ಷೆಯನ್ನು ಕೊಟ್ಟ ಗುರುವಾದರೂ ಎಂಥವನು ? ಎಂದೆನ್ನುತ್ತ ತಮ್ಮಲ್ಲಿ

ತಾವೇ ಯೋಗದೃಷ್ಟಿಯಿಂದ ತಿಳಿದುಕೊಂಡು ವಿಸ್ಮಿತರಾದರು. ಅಮ್ಮಾ! ನಿನ್ನ ಪತಿಗೆ ಸನ್ಯಾಸವನ್ನು ಕೊಟ್ಟು ದೋಷಕ್ಕೆ ಪಾತ್ರನಾದವನು ನಾನೇ. ಆಗಲಿ, ಮಾಡುವದೇನು, ನಿನ್ನ ಮಾತಾ-ಪಿತೃಗಳಿರುವರೇ ? ಇದ್ದರೆ ಇಲ್ಲಿಗೆ ಕಳಿಸಿಕೊಡಮ್ಮಾ ಎನಲು ರುಕ್ಮಾಬಾಯಿಯು ಕೂಡಲೇ ಮನೆಗೆ ಹೋಗಿ ಸಿದ್ಧೋಪಂತನಿಗೆ ತಿಳಿಸಲು ಅವನು ಸಂತೋಷಭರಿತನಾಗಿ ಮಗಳೊಡನೆ ಶ್ರೀಪಾದಸ್ವಾಮಿಗಳಲ್ಲಿಗೆ ಬಂದು ನಮಸ್ಕರಿಸಿ ನಿಂತುಕೊಂಡನು. ಆಗ ಸ್ವಾಮಿಗಳು ಅಯ್ಯಾ! ನಿನ್ನ ಅಳಿಯನಿಗೆ ಸನ್ಯಾಸ ದೀಕ್ಷೆ ಕೊಟ್ಟವನು ನಾನೇ. ನಾನು ತಿಳಿಯದೇ ಹಾಗೆ ಮಾಡಿದೆನು. ಆತನು ನನಗೆ ಸುಳ್ಳು ಹೇಳಿದ್ದು ಇಷ್ಟೆಲ್ಲ ಅನರ್ಥಕ್ಕೆ ಕಾರಣವಾಯಿತು. ಒಳ್ಳೆಯದು, ನೀವು ಚಿಂತಿಸಬೇಡಿರಿ. ನೀವು ನನ್ನೊಡನೆ ಕಾಶೀಕ್ಷೇತ್ರಕ್ಕೆ ಬನ್ನಿರೆಂದು ತಮ್ಮೊಡನೆ ತಂದೆ-ಮಗಳನ್ನು ಕರೆದುಕೊಂಡು ಕಾಶಿಯಲ್ಲಿದ್ದ ತಮ್ಮ ಮಠಕ್ಕೆ ಮುಟ್ಟಿದರು.

ವಿಠೋಬನಿಗೆ ತಾವಿಟ್ಟ ಹೆಸರಾದ ಚೈತನ್ಯಾ ಎಂದು ಕೂಗಲಾಗಿ ಆತನು ಬಂದು ಗುರುಗಳಿಗೆ ನಮಸ್ಕರಿಸಿ ನಿಂತುಕೊಂಡನು. ಆಗ ಸ್ವಾಮಿಗಳು ಎಲೈ, ನೀನು ನನ್ನೆದುರು ಏನು ಹೇಳಿದಿ ? ಸಂಸಾರ ಸಂಬಂಧವಿಲ್ಲ. ತಾಯಿ – ತಂದೆಗಳಿಲ್ಲ, ಮಕ್ಕಳು – ಮರಿಗಳಿಲ್ಲ. ಎಂದು ಹೇಳಿದೆಯಲ್ಲಾ ! ಅದು ಸತ್ಯವೇ ? ಈಕೆ ಯಾರು ? ಎಂದು ರುಕ್ಮಾಬಾಯಿಯನ್ನು ತೋರಿಸಿ ಕೇಳಲು, ವಿಠೋಬನು ಭಯಭೀತನಾಗಿ, ಸ್ವಾಮಿ, ಸನ್ಯಾಸವನ್ನು ಸ್ವೀಕರಿಸಬೇಕೆಂಬ ತುಂಬಾ ಆಶೆಯಿಂದ ತಮ್ಮೆದುರು ಹಾಗೆ ಹೇಳಿದೆನೇ ಹೊರತು ಬೇರಲ್ಲ; ಕ್ಷಮಿಸಬೇಕು, ಎಂದು ಪ್ರಾರ್ಥಿಸಿದನು. ಆಗ ಸ್ವಾಮಿಗಳು ನೀನು ಈ ರೀತಿ ಸುಳ್ಳಾಡಬಾರದಿತ್ತು. ಆಗಲಿ, ಆದದ್ದಾಗಿ ಹೋತು. ಈಗ ನೀನು ನನ್ನ ಆಜ್ಞೆಯಂತೆ ನಡೆಯಬೇಕು. ಅದು ನಿನ್ನ ಕರ್ತವ್ಯ. ನೀನು ಏನನ್ನೂ ವಿಚಾರ ಮಾಡದೇ ಈ ಸಾಧ್ವಿಯೊಡನೆ ಗ್ರಹಸ್ಥ ಧರ್ಮದಲ್ಲಿ ನಿರತನಾಗು. ನಿನ್ನಿಂದ ಅನೇಕ ಮಹತ್ವದ ಕಾರ್ಯಗಳು ಘಟಿಸಿ ಲೋಕವಿಖ್ಯಾತಿಯನ್ನು ಪಡೆಯುವಿ. ಎಂದು ಆಶೀರ್ವದಿಸಿ ರುಕ್ಮಾಬಾಯಿಯೊಡನೆ ಅಲಕಾವತಿಗೆ ಕಳಿಸಿಕೊಟ್ಟನು.

ವಿಠೋಬನು ಗುರುಗಳ ಆಜ್ಞೆಯನ್ನು ಶಿರಸಾವಹಿಸಿ ಮಾವ, ಸತಿಯರೊಡನೆ ಅಲಕಾವತಿಗೆ ಬಂದು ಗ್ರಹಸ್ಥಾಶ್ರಮದಲ್ಲಿದ್ದುಕೊಂಡೇ ಆತ್ಮಾ

ನುಸಂಧಾನದಲ್ಲಿ ನಿರತನಾಗಿದ್ದನು. ಇಂತು ವಿಠೋಬನು ಗೃಹಸ್ಥಾಶ್ರಮವನ್ನು ತೊರೆದು ಹೋಗಿ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಕೆಲ ದಿನಗಳ ನಂತರ ಪುನಃ ಬಂದು ಗೃಹಸ್ಥಾಶ್ರಮವನ್ನು ಸ್ವೀಕರಿಸಿದ್ದರಿಂದ ಪುರ ಜನರಲ್ಲಿ ಕೆಲವರು ಅವನು ಉಭಯಭ್ರಷ್ಟನು, ಧರ್ಮಬಾಹಿರನೆಂದು ದೂಷಿಸತೊಡಗಿದರು. ಈ ರೀತಿಯ ದೂಷಣೆಯು ಅಧಿಕವಾಗಿ ಕೊನೆಗಾತನನ್ನು ಕುಲದಿಂದ ಬಹಿಷ್ಕರಿಸಬೇಕೆಂದು ನಿರ್ಧರಿಸಿದರು. ಈಸಂಗತಿಯನ್ನು ತಿಳಿದು ವಿಠೋಬನು ತನಗಾಗಿ ವೃದ್ಧರಾದ ಅತ್ತೆಮಾವಂದಿರು ಸ್ವಕುಲದವರ ಸಿಟ್ಟಿಗೆ ಸಿಲುಕಬಾರದೆಂದೆಣಿಸಿ ತಾನೊಬ್ಬನೇ ಕಾಡಿಗೆ ತೆರಳಿದನು. ರುಕ್ಮಾಬಾಯಿಯು ದಿನಾಲೂ ಮನೆಯಿಂದ ಅನ್ನೋದಕಗಳನ್ನು ಒಯ್ದುಕೊಟ್ಟು ಆತನ ಸೇವೆ ಮಾಡಿ ಬರುತ್ತಿದ್ದಳು. ಇಂತು ಕೆಲ ದಿನಗಳು ಕಳೆಯುತ್ತಿರುವಲ್ಲಿ ರುಕ್ಮಾಬಾಯಿಯೂ ಗರ್ಭವತಿಯಾಗಿ ಒಂದು ಶುಭ ಮುಹೂರ್ತದಲ್ಲಿ ಮೂವರು ಪುತ್ರರನ್ನೂ, ಒಬ್ಬ ಪುತ್ರಿಯನ್ನೂ ಪತಿಯು ಬಳಿಯಲ್ಲಿಯೇ ಹೆತ್ತಳು. ದಂಪತಿಗಳು ಅತ್ಯಂತ ಸಂತೋಷದಿಂದ ಶಿಸುಗಳನ್ನೆತ್ತಿ ಮುದ್ದಾಡುತ್ತಿದ್ದರು. ದೇವಾಂಶದಿಂದ ಹುಟ್ಟಿದ ಆ ಶಿಸುಗಳಿಗೆ ಸೋಪಾನದೇವ, ಜ್ಞಾನದೇವ, ನಿವೃತ್ತಿದೇವ, ಮುಕ್ತಾಬಾಯಿ ಎಂದು ನಾಮಕರಣ ಮಾಡಿದರು. ಜನನಿ ಜನಕರಿಗಾಶಿಸುಗಳು ಬಾಲಲೀಲಾ ವಿಲಾಸಗಳನ್ನು ತೋರ್ಪಡಿಸುತ್ತ ಸಂತೋಷಪಡಿಸುತ್ತಿದ್ದರು. ಸಿದ್ಧೋಪಂಡಿತನು ಮೊಮ್ಮಕ್ಕಳನ್ನು ಕಂಡು ಅತ್ಯಾನಂದಭರಿತನಾಗಿ ಅವರನ್ನು ಬಿಟ್ಟಿರಲಾರದೆ ಅಳಿಯನನ್ನೂ ಮಗಳನ್ನೂ ಸಮಾಧಾನಪಡಿಸಿ ಮೊಮ್ಮಕ್ಕಳೊಡನೆ ಮನೆಗೆ ಕರೆತಂದನು.

ಒಂದು ದಿನ ಆ ನಗರದಲ್ಲೊಂದು ಅನ್ನ ಸಂತರ್ಪಣೆ ನಡೆಯಿತು. ಸಿದ್ಧೋಪಂಡಿತನು ಮೊಮ್ಮಕ್ಕಳನ್ನು ಕರೆದುಕೊಂಡು ಸಂತರ್ಪಣೆ ನಡೆಯುವಲ್ಲಿಗೆ ತೆರಳಿ ಎಲೆಯ ಮುಂದೆ ಕುಳಿತನು. ಅಲ್ಲಿದ್ದ ಬ್ರಾಹ್ಮಣರಲ್ಲಿ ಕೆಲವರು ಸಿದ್ಧೋಪಂಥನ ಮೊಮ್ಮಕ್ಕಳನ್ನು ಕಂಡು ಅಸೂಯೆಗೊಂಡು ಕುಲಭ್ರಷ್ಟನಾದವನ ಮಕ್ಕಳಾದಿವರನ್ನು ಪಂಕ್ತಿಗೆ ಸೇರಿಸಿಕೊಳ್ಳಕೂಡದು; ಇವರನ್ನು ಹೊರಕ್ಕೆ ಕಳಿಸಿಬಿಡಿರಿ ಎಂದು ಅರ್ಭಟಿಸಿದರು. ಆಗ ಸಿದ್ಧೋಪಂಡಿತನಿಗೂ ಅವರಿಗೂ ಮಾತುಕಥೆಗಳು ನಡೆದು ಕೆಲ ದುಷ್ಟರು ಆ ಮುದು

ಕನನ್ನು ಹೊಡೆದು ನೆಲಕ್ಕೆ ಕೆಡವಿದರು. ಆಗ ಜ್ಞಾನದೇವನು ಮುಂದುವರೆದು ಎಲವೋ ಮೂರ್ಖರಿರಾ! ವೃದ್ಧನೂ ಸಾಧುವೂ ಆಗಿದ್ದ ನಮ್ಮಜ್ಜನನ್ನು ಹೊಡೆಯಲು ನಿಮಗೆ ನಾಚಿಕೆ ಬರಲಿಲ್ಲವೇ? ಕೈಗಳಾದರೂ ಹೇಗೆದ್ದವು; ಎಂದುತ್ತರಿಸಲು ಅವರು ಮತ್ತಷ್ಟು ಸಿಟ್ಟೆಗೆದ್ದು ನೀನಾರೋ ನಮ್ಮನ್ನು ಕೇಳಲು; ನಿನ್ನ ಶೌರ್ಯವಾದರೂ ಎಷ್ಟೋ; ಎಂದು ಅನ್ನುತ್ತ ಅವನನ್ನು ಹೊಡೆಯ ಹೋದರು. ಆಗ ಬಾಲಕನಾದ ಜ್ಞಾನದೇವನು ಅಲ್ಲಿ ಬಿದ್ದಿದ್ದ ಕೋಲನ್ನೆತ್ತಿಕೊಂಡು ಆ ಗುಂಪಿನ ಮೇಲೆ ಬಿದ್ದು ಭೀಕರನಾಗಿ ಅನೇಕರಿಗೆ ಬಲವಾದ ಪೆಟ್ಟು ಕೊಟ್ಟು ಎಲ್ಲರನ್ನೂ ಓಡಿಸಿದನು. ಸಂತರ್ಪಣೆಯು ಅಷ್ಟಕ್ಕೇ ನಿಂತಿತು.

ಪೆಟ್ಟು ತಿಂದವರೆಲ್ಲರೂ ಒಟ್ಟುಗೂಡಿ ಆ ನಗರದ ರಾಜನಲ್ಲಿ ಮೊರೆಯಿಟ್ಟುಕೊಂಡರು. ರಾಜನು ಜ್ಞಾನದೇವಾದಿಗಳನ್ನು ಕರೆಯಿಸಿಕೊಂಡು ವಿಚಾರಿಸಲು ರಾಜೇಂದ್ರನ ಎದುರುನಿಂತೆಂದನು. ಪ್ರಭುವೇ! ನಮ್ಮ ತಂದೆ ಪರಮ ಸಾಧುವು. ಗುರುಮುಖವಾಗಿ ಆತ್ಮ ವಿದ್ಯೆಯನ್ನು ಪಡೆದ ಬ್ರಹ್ಮಜ್ಞಾನಿಯು. ಯಾರು ನಮ್ಮ ತಂದೆಗೆ ಪರಮೋಪದೇಶವನ್ನು ಮಾಡಿದರೋ ಅವರೇ ನಮ್ಮ ಜನಕನಿಗೆ ಗ್ರಹಸ್ಥಾಶ್ರಮವನ್ನಿರ್ವಹಿಸಬೇಕೆಂದು ಆಜ್ಞೆಮಾಡಿದರು. ಗುರುವಿನ ಆಜ್ಞೆಯಂತೆ ನಮ್ಮ ತಂದೆಯು ಗೃಹಸ್ಥಾಶ್ರಮವನ್ನು ಕೈಕೊಂಡನು. ಮಾನವರನ್ನು ಭವಸಾಗರದಿಂದ ಪಾರುಮಾಡಿ ಮೋಕ್ಷಸಾಮ್ರಾಜ್ಯವನ್ನು ಹೊಂದಿಸತಕ್ಕುದೆಂದರೆ ಜ್ಞಾನಯೋಗವೊಂದೇ ಇಂತಿರುವಾಗ, ಪಕ್ಷಪಾತ ದ್ವೇಷಾಸೂಯೆಗಳಿಂದ ಆತ್ಮಸ್ತುತಿ ಮಾಡಿಕೊಳ್ಳತಕ್ಕ ವಚನಗಳನ್ನು ವೇದವಾಣಿಯು ಎಂದೂ ಗೌರವಿಸಲಾರದು ಎಂಬುದು ಜ್ಞಾನಿಗಳಾದ ತಮಗೆ ಗೊತ್ತೇ ಇದೆ. ಹೀಗಿರುವಾಗ, ನಮ್ಮ ತಂದೆಯನ್ನು ವ್ಯಥಾ ದೂಷಿಸುತ್ತ ವೃದ್ಧನಾದ ನಮ್ಮಜ್ಜನನ್ನು ಹೊಡೆದು ಕೆಡವಿ ನಮ್ಮನ್ನೂ ಹೊಡೆಯಲು ಬಂದು, ಅನೇಕ ಕಷ್ಟನಷ್ಟಗಳಿಗೆ ಗುರಿಮಾಡಿ ಪುನಃ ಅವರೇ ತಮ್ಮಲ್ಲಿ ದೂರಿಕೊಳ್ಳುವದು ನ್ಯಾಯವೇ? ಆತ್ಮಜ್ಞಾನಿಗಳಿದ್ದವರು ಅನ್ಯರನ್ನು ದೂಷಿಸುವರೇ? ಇವೆಲ್ಲವನ್ನೂ ದೇವದೃಷ್ಟಿಯಿಂದ ಪರ್ಯಾಲೋಚಿಸಿ ನ್ಯಾಯದಾನ ಮಾಡಬೇಕೆಂದು ಬಿನ್ನೈಸಿಕೊಳ್ಳುತ್ತೇನೆ ಎಂದನು. ಜ್ಞಾನದೇವರ ಮಾತುಗಳನ್ನು

ಕೇಳುತ್ತಲೇ ರಾಜನಿಗಾತನಲ್ಲಿ ಗುರುಭಕ್ತಿಯುಂಟಾಯಿತು. ಆತನಾಡಿದ ಮಾತುಗಳು ಧರ್ಮಸಮ್ಮತವೆಂದು ತಿಳಿದುಕೊಂಡ ರಾಜೇಂದ್ರನು ಬ್ರಾಹ್ಮಣರನ್ನು ಕುರಿತು ಅಯ್ಯಾ, ಈತನು ಬಾಲಕನಿದ್ದಾಗ್ಯೂ ಸರ್ವ ಸಮ್ಮತ ಮಾತುಗಳನ್ನಾಡುತ್ತಿರುವನು. ಈತನ ಮುಖವಿಲಾಸವನ್ನು ನೋಡಿದರೆ ತ್ರಿಲೋಕಗಳನ್ನೂ ಶಾಸಿಸತಕ್ಕ ಗುರುಪದವಿಗರ್ಹನೆಂದೆಲ್ಲರಿಗೂ ಕಾಣದಿರದು. ಆದ ಕಾರಣ ನೀವು ಇವರನ್ನು ನಿಮ್ಮ ಪಂಕ್ತಿಗೆ ಸೇರಿಸಿಕೊಂಡು ದಯ ತೋರಿರಿ. ವ್ಯರ್ಥ ದ್ವೇಷಗಳನ್ನು ಬೆಳೆಸುವದರಿಂದ ಪ್ರಯೋಜನವಿಲ್ಲೆಂದನು. ಅದಕ್ಕಾ ಬ್ರಾಹ್ಮಣರು ರಾಜೇಂದ್ರಾ ! ಇವರನ್ನೂ ಇವರ ತಂದೆಯನ್ನೂ ಪ್ರಾಯಶ್ಚಿತ್ತಪೂರ್ವಕವಾಗಿ ಕುಲದಲ್ಲಿ ಸೇರಿಕೊಳ್ಳುವ ಹಕ್ಕು ಪೈಠಣಿಪುರದಲ್ಲಿರುವ ನಮ್ಮ ಗುರುಗಳಿಗೆ ಮಾತ್ರವಿದೆ ಎಂದರು. ಅದಕ್ಕಾ ರಾಜೇಂದ್ರನು ಕುಲದಿಂದ ಬಹಿಷ್ಕರಿಸುವದಕ್ಕೆ ನಿಮಗೆ ಅಧಿಕಾರವಿದೆ. ಆದರೆ ಕುಲದಲ್ಲಿ ಸೇರಿಸಿಕೊಳ್ಳುವದಕ್ಕೆ ನಿಮಗಧಿಕಾರವಿಲ್ಲವೇ? ಇದೆಂಥ ನ್ಯಾಯವು ಎಂದು ಎಲ್ಲರನ್ನೂ ವಕ್ರದೃಷ್ಟಿಯಿಂದ ನೋಡಿ, ಆಗಲಿ, ಹಾಗಾದರೆ ಇವರನ್ನು ಪೈಠಣಿಪುರಕ್ಕೆ ಕರೆದೊಯ್ದು ಆಗಬೇಕಾದ ಕಾರ್ಯಗಳನ್ನು ಪೂರೈಸಿರಿ. ಅದಕ್ಕಾಗಿ ಬೇಕಾದ ಹಣವನ್ನು ನಾನು ಕೊಡುವೆನು. ಮತ್ತು ನಿಮ್ಮ ಗುರುಗಳಿಗೊಂದು ಪತ್ರ ಕೊಡುವೆನು ಎಂದು ಹೇಳಿ, ಪತ್ರವನ್ನೂ ಹಣವನ್ನೂ ಕೊಟ್ಟು ಎಲ್ಲರನ್ನೂ ಕೊಟ್ಟು ಕಳುಹಿಸಿದನು.

ರಾಜಾಜ್ಞೆಯಂತೆ ಬ್ರಾಹ್ಮಣರೂ ಜ್ಞಾನದೇವಾದಿಗಳೂ ಅಲಕಾವತಿಯಿಂದ ತೆರಳಿ ಕೆಲದಿನಗಳಲ್ಲಿ ಪೈಠಣಿಪುರವನ್ನು ಮುಟ್ಟಿ ರಾಜಪತ್ರವನ್ನು ಅಲ್ಲಿಯ ಗುರುವಿಗೆ ಕೊಟ್ಟು ನಡೆದ ವೃತ್ತಾಂತವನ್ನು ತಿಳುಹಿಸಿದರು. ಅಲ್ಲಿಯೂ ಆ ಬ್ರಾಹ್ಮಣರ ಕೈವಾಡದಿಂದ ಚನ್ನಾಗಿ ಪರ್ಯಾಲೋಚಿಸಿದೆ ಜ್ಞಾನದೇವಾದಿಗಳಿಗೆ ಕುಲದಲ್ಲಿ ಸೇರಿಸಿಕೊಳ್ಳಲಾಗುವದಿಲ್ಲವೆಂತಲೂ, ಕುಲಭ್ರಷ್ಟನಿಗೆ ಹುಟ್ಟಿದ ಸಂತಾನಕ್ಕೆ ಗತಿಗೋತ್ರಗಳೇ ಇಲ್ಲವೆಂತಲೂ ಹೇಳಿ ನಿರಾಕರಿಸಿದರು. ಆಗ ಜ್ಞಾನದೇವನಿಗೂ ಅವರಿಗೂ ಬಹುಮುಖವಾಗಿ ವಾಗ್ವಾದ ನಡೆದು, ಬ್ರಾಹ್ಮಣತ್ವವು ಕೇವಲ ಬ್ರಾಹ್ಮಣ ಕುಲದಲ್ಲಿ ಹುಟ್ಟುವದರಿಂದ ಸಫಲವಾಗಲಾರದು. ಬ್ರಹ್ಮಜ್ಞಾನವನ್ನು ಬಲ್ಲವನೇ ಬ್ರಾಹ್ಮಣನು ಎಂದು ಹೇಳಿ, ಈ ಅರ್ಥವುಳ್ಳ ವೇದವಾಣಿ, ಶ್ಲೋಕವನ್ನು

ಚ್ಚರಿಸಲು, ಆಗ ಬ್ರಾಹ್ಮಣರು ಕುಲಭ್ರಷ್ಟರಿಗೆ ವೇದಗೋಷ್ಠಿಯನ್ನುಚ್ಚರಿಸಲು ಹಕ್ಕಿಲ್ಲವೆಂದು ವಾದಿಸಲು ಆಗ ಸರ್ವತೇಜೋನಿಧಿಯಾದ ಜ್ಞಾನದೇವನು ವೇದಗಳು ಬ್ರಾಹ್ಮಣರ ಸೊತ್ತಲ್ಲ. ಎಲ್ಲರಿಗೂ ಎಲ್ಲ ಜೀವಿಮಾತ್ರಕ್ಕೂ ಮಾರ್ಗದರ್ಶನ ಮಾಡಬಲ್ಲ ವೇದಗಳನ್ನು ಯಾವ ವಾಣಿಯಾದರೂ ಉಚ್ಚರಿಸಬಹುದು ಎಂದನು. ಅಷ್ಟರಲ್ಲಿ ಒಂದು ಕೋಣವು ಅಲ್ಲಿಗೆ ಬರಲು ಆ ಬ್ರಾಹ್ಮಣರು ಇದೂ ವೇದವಾಣಿಯನ್ನುಚ್ಚರಿಸಬಹುದೇ ? ಎಂದು ಜ್ಞಾನ ದೇವರನ್ನು ಕೇಳಲು ಅವಶ್ಯವಾಗಿ ಅದರಲ್ಲಿ ಬ್ರಹ್ಮಜ್ಞಾನವಿದ್ದರೆ ಈಗಲೇ ಉಚ್ಚರಿಸುವದೆಂದು ಹೇಳಿ, ಆ ಕೋಣನ ಬಾಯಿಂದ ವೇದಶ್ಲೋಕವನ್ನುಚ್ಚರಿಸಿದರು. ಆದಾಗ್ಯೂ ಅವರು ಅದನ್ನು ನಂಬದೆ ಇದು ಮಾಯಾ ವಿದ್ಯೆಯೆಂದು ಅನುಮಾನ ಪಡುತ್ತಲೇ ಇದ್ದರು.

ಪೈಠಣಿಪುರದಲ್ಲಿ ಜ್ಞಾನದೇವಾದಿಗಳು ಒಬ್ಬ ಬ್ರಾಹ್ಮಣನ ಮನೆಯಲ್ಲಿಳಿದಿದ್ದರು. ಆ ಮನೆಯ ಯಜಮಾನನ ತಂದೆಯ ಶ್ರಾದ್ಧವು ಮರುದಿನವೇ ಇದ್ದಿತು. ಆ ದಿನ ಶ್ರಾದ್ಧಭೋಕ್ತರಾಗಿ ಬರಬೇಕಾಗಿದ್ದ ಬ್ರಾಹ್ಮಣರು, ಕುಲಭ್ರಷ್ಟರಿಗೆ ಸ್ಥಳಕೊಟ್ಟನೆಂಬ ಕಾರಣದಿಂದ ಬರುವದಿಲ್ಲವೆಂದು ಹಠಹಿಡಿದರು. ಈ ಸಮಾಚಾರವನ್ನು ಜ್ಞಾನದೇವರು ತಿಳಿದು, ಆ ಬ್ರಾಹ್ಮಣನಿಗೆ ಸಮಾಧಾನ ಹೇಳಿ ಅಡಿಗೆ ತಯಾರಿಸಿದ ನಂತರ ಆತನ ಪಿತೃಗಳನ್ನು ಸ್ವರ್ಗಲೋಕದಿಂದ ಪ್ರತ್ಯಕ್ಷ ಬರಮಾಡಿಕೊಂಡು ಭೋಜನಾದಿಗಳಿಂದ ತೃಪ್ತಿಪಡಿಸಲು, ಪಿತೃದೇವತೆಗಳು ಬ್ರಾಹ್ಮಣನಿಗೆ ಆಶೀರ್ವದಿಸಿ ವಿಮಾನದಲ್ಲಿ ಕುಳಿತು ಸ್ವರ್ಗಲೋಕಕ್ಕೆ ತೆರಳಿದರು. ಈ ವಿಚಿತ್ರವನ್ನು ನೋಡುತ್ತಲೇ ಆ ವರೆಗೆ ಹಠಮಾಡಿದ್ದ ಬ್ರಾಹ್ಮಣರೂ, ಗುರುಗಳೂ ಭಯಭ್ರಾಂತರಾಗಿ ತಾವಾಗಿಯೇ ಒಂದು ಜ್ಞಾನೇಶ್ವರನಲ್ಲಿ ಶರಣಾಗತರಾಗಿ ಕ್ಷಮೆಕೇಳಿಕೊಂಡರು. ಮತ್ತು ಜ್ಞಾನದೇವ, ನಿವೃತ್ತಿದೇವ, ಸೋಪಾನದೇವ, ಮುಕ್ತಾಬಾಯಿಯೂ ಅವರ ತಂದೆಯಾದ ವಿಠೋಬರೂ ಲೋಕಪಾವನ ಚರಿತ್ರೆಯುಳ್ಳವರಾದ ಕಾರಣ ಇವರನ್ನು ಕುಲದಲ್ಲಿ ಸೇರಿಸಿಕೊಳ್ಳಲು ಅಡ್ಡಿಯಿಲ್ಲವೆಂದು ಪತ್ರಿಕೆ ಬರಕೊಟ್ಟರು. ಆಗ ಅಲ್ಲಿಂದ ಜ್ಞಾನದೇವಾದಿಗಳೂ ಬ್ರಾಹ್ಮಣರೂ ಅಲಕಾವತಿಗೆ ಬಂದರು. ಸಿದ್ಧೋಪಂತನು ಆ ವೃತ್ತಾಂತವನ್ನು ಕೇಳಿ ಸಂತೋಷಭರಿತನಾದನು. ಬಳಿಕ ಅವರೆಲ್ಲರೂ

ಕೂಡಿ ವಿರೋಬನನ್ನು ಅಲಕಾವತಿಗೆ ಕರೆತಂದರು. ಅಲಕಾವತಿಯ ಮಹಾರಾಜನು ವಿರೋಬನನ್ನು ಬಹಳ ಗೌರವದಿಂದ ಸನ್ಮಾನಿಸಿ ಅವರಿಗೆ ಬೇಕಾದ ವಸತಿಗಳನ್ನು ಮಾಡಿಸಿಕೊಟ್ಟು ಅವರಿಂದ ಪಾರಮಾರ್ಥ ಉಪದೇಶಗಳನ್ನು ಪಡೆದುಕೊಂಡನು.

ಅಲಕಾವತಿಗೆ ಸಮೀಪದಲ್ಲಿದ್ದ ಒಂದು ಊರಲ್ಲಿ ವಿಶೋಬಾಕೇಶವನೆಂಬ ಧನಿಕನಿದ್ದನು. ಅವನ್ನು ನಿಷ್ಕಾರಣವಾಗಿ ಜ್ಞಾನದೇವಾದಿಗಳ ಮೇಲೆ ಅಸೂಯೆ ಕಾರುತ್ತಿದ್ದನು. ಅವರನ್ನು ಕಂಡರಂತೂ ವಿಪರೀತ ಬೈಯುತ್ತಿದ್ದನು. ಒಂದುಸಾರೆ ವಿಶೋಬಾಕೇಶವನಿದ್ದ ಊರಿಗೆ ಜ್ಞಾನದೇವಾದಿಗಳು ಬಂದು ನಾಲ್ಕಾರು ದಿನಗಳ ವಸತಿ ಮಾಡಿದರು. ಆ ಊರ ಪುಣ್ಯಾತ್ಮರನೇಕರು ಅವರ ಸೇವೆ ಮಾಡುತ್ತಿದ್ದರು. ಒಂದು ದಿನ ಹಬ್ಬವಿದ್ದುದರಿಂದ ನಿವೃತ್ತಿದೇವನ ಕೋರಿಕೆಯಂತೆ ಭಕ್ಷ್ಯಗಳನ್ನು ಮಾಡಬೇಕೆಂದು ಮುಕ್ತಾಬಾಯಿಯು ಪ್ರಯತ್ನಿಸುತ್ತಿದ್ದಳು. ಬೇಕಾದ ಪದಾರ್ಥಗಳೆಲ್ಲವೂ ಶೇಖರವಾದವು. ಇನ್ನು ಬೇಕಾಗಿದ್ದುದು ಮಡಿಕೆಗಳು ಮಾತ್ರ. ಅವುಗಳನ್ನು ತರುವದಕ್ಕಾಗಿ ಮುಕ್ತಾಬಾಯಿಯು ಕುಂಬಾರಗೇರಿಗೆ ಹೋಗುತ್ತಿದ್ದಳು. ಅಷ್ಟೊತ್ತಿಗೆ ವಿರೋಬಾಕೇಶವನು ದಾರಿಯಲ್ಲಿ ಅಡ್ಡಬಂದು ನೀನೆಲ್ಲಿಗೆ ಹೋಗುತ್ತೀ ? ಎಂದು ಮುಕ್ತಾಬಾಯಿಯನ್ನು ಕೇಳಿ ತಿಳಿದುಕೊಂಡು ಮಿತಿಮೀರಿದ ಕೋಪದಿಂದ ಆಕೆಯ ಕೆನ್ನೆಗೆ ಬಲವಾಗಿ ಹೊಡೆದು ಕಳುಹಿದನಲ್ಲದೇ, ತನ್ನ ಸಾವುಕಾರಿಕೆಯ ಬಲವನ್ನು ಪ್ರಯೋಗಿಸಿ ಆಕೆಗಾದರೂ ಮಡಿಕೆ ಕುಡಿಕೆಗಳನ್ನು ಕೊಡಕೂಡದೆಂದು ಆಜ್ಞೆ ಮಾಡಿದನು. ಆಗ ಮುಕ್ತಾಬಾಯಿಯು ಖಿನ್ನಮನಸ್ಕಳಾಗಿ ಬರಿಗೈಯಿಂದ ಮನೆಗೆ ಬಂದಳು. ನಡೆದ ಸಮಾಚಾರವನ್ನು ಜ್ಞಾನದೇವನ ಮುಂದೆ ತಿಳಿಸಲು ಅದಕ್ಕಾತನು ತಂಗೀ ! ಇಷ್ಟೇಕೆ ಚಿಂತೆ. ಕೇಶವನು ತನ್ನ ಸ್ವಭಾವಕ್ಕನುಸರಿಸಿಯೇ ಹಾಗೆ ಮಾಡಿದನು. ಈ ರೀತಿಯ ಲೋಕದ ವಿಕಾರಗತಿಯು ನಮ್ಮನ್ನೇನು ಮಾಡಬಲ್ಲದು, ಎಂದು ಆಕೆಯನ್ನು ಸಮಾಧಾನಪಡಿಸಿ, ಯೋಗಬಲದಿಂದ ತನ್ನ ಬೆನ್ನ ಮೇಲೆ ಪ್ರಜ್ವಲವಾದ ಅಗ್ನಿಯನ್ನುಂಟು ಮಾಡಿ ಬೇಕಾದ ಪದಾರ್ಥಗಳನ್ನು ತಯಾರಿಸಬಹುದೆಂದು ತನ್ನ ತಂಗಿಗೆ ಹೇಳಲು ಮುಕ್ತಾಬಾಯಿಯು ಆತನ ಬೆನ್ನಮೇಲೆಯೇ ಎಲ್ಲ ಪದಾರ್ಥ

ಗಳನ್ನು ತಯಾರಿಸಿದಳು. ಗಡಿಗೆ-ಮಡಿಕೆಗಳಿಲ್ಲದೇ ಪದಾರ್ಥಗಳನ್ನು ಹೇಗೆ ತಯಾರಿಸುವರು ನೋಡೋಣವೆಂದು ಮರೆಗೆ ನಿಂತು ನೋಡುತ್ತಲಿದ್ದ ವಿಶೋಬನು ಆವರ ಅದ್ಭುತ ಕಾರ್ಯವನ್ನು ನೋಡಿ ಕಂಪಿತನಾಗಿ ಜ್ಞಾನೇಶ್ವರನ ಶರಣುಹೊಕ್ಕನು. ಆವರು ಉಂಡಿದ್ದ ಎಲೆಗಳಿಗೆ ಹತ್ತಿದ ಅನ್ನದಗಳನ್ನು ಪ್ರಸಾದವೆಂದು ಭುಂಜಿಸಿದನು. ಆವರೆಗೆ ಅಂಟಿಕೊಂಡಿದ್ದ ದ್ವೇಷಾಸೂಯೆಗಳು ತೊಲಗಿಹೋದವು. ಇವನ ಹೃದಯದ ಪರಿವರ್ತನೆಯಿಂದ ಅಂತಃಕರಣ ಶುದ್ಧಿಯಾದುದನ್ನು ನೋಡಿ ಜ್ಞಾನದೇವನು ಅವನಿಗೆ ತತ್ತ್ವೋಪದೇಶವನ್ನು ಮಾಡಿದನು. ಅಂದಿನಿಂದ ವಿಶೋಬನು ತತ್ತ್ವವೇತ್ತನಾಗಿ ಕೆಲ ಸಮಯದ ನಂತರ ನಾಮದೇವನ ಗುರುವಾಗಿ ಆತನಿಗೆ ತತ್ತ್ವೋಪದೇಶವನ್ನು ಮಾಡಿದನು.

ಇಂತಿರಲು ಒಂದು ದಿನ ಚಾಂಗದೇವನೆಂಬ ಸಿದ್ಧಪುರುಷನು ಜ್ಞಾನೋಪದೇಶವನ್ನು ಪಡೆಯಬೇಕೆಂಬ ಬಯಕೆಯಿಂದ ಜ್ಞಾನದೇವರಿಗೊಂದು ಪತ್ರ ಬರೆಯಬೇಕೆಂದು ಯೋಚಿಸಿ ಕೈಯಲ್ಲಿ ತಾಡವಾಲಿ ಪತ್ರವನ್ನೂ ಘಂಟನ್ನೂ ಹಿಡಿದು ಏನು ಬರೆಯಬೇಕು ಎಂದು ಯೋಚಿಸಿದನು. ಆರಂಭ ಒಕ್ಕಣಿಕೆಯಲ್ಲಿ, ವಯಸ್ಸಿನಲ್ಲಿ ಚಿಕ್ಕವನಾದ್ದರಿಂದ ಚಿರಂಜೀವಿ ಸಹಸ್ರಾಯು ಜ್ಞಾನದೇವನಿಗೆ ಎಂದು ಬರೆಯೋಣವೇ, ಅಥವಾ ತೀರ್ಥಸ್ವರೂಪಿ ಎಂದು ಬರೆಯೋಣವೇ; ಆತನಲ್ಲಿ ಜ್ಞಾನೋಪದೇಶ ಪಡೆಯಬೇಕಾದ್ದರಿಂದ ಹಾಗೆ ಬರೆಯಲಿಕ್ಕಾಗದು. ಇಂತು ಸ್ವಲ್ಪ ಹೊತ್ತು ವಿಚಾರಿಸಿ ಏನು ಬರೆಯಬೇಕೆಂಬ ವಿಚಾರ ಹೊಳೆಯದೇ ಬರಿ ಓಲೆಯನ್ನೇ ತನ್ನ ಶಿಷ್ಯನ ಮೂಲಕ ಕಳುಹಿಸಿದನು. ಅದನ್ನು ಆ ಶಿಷ್ಯನು ತಂದು ಅಲಕಾವತಿಯಲ್ಲಿದ್ದ ಜ್ಞಾನದೇವನಿಗೆಕೊಟ್ಟು, ನಮಸ್ಕರಿಸಿ ನಿಂತುಕೊಂಡನು. ಆಗ ಜ್ಞಾನದೇವನು ಆ ಓಲೆಯನ್ನು ನೋಡಿ ನಸುನಕ್ಕು; ಸಾವಿರದಿನ್ನೂರು ವರ್ಷ ಬಾಳಿದರೂ ಇವನ ಬಾಳು ವ್ಯರ್ಥವಾಯಿತು ಎಂದುಕೊಂಡು, ತಾನೊಂದು ಓಲೆಯನ್ನು ಬರೆದು ಕೊಟ್ಟುಕಳಿಸಿದನು. ಅದನ್ನು ಆ ಶಿಷ್ಯನು ತಂದು ಚಾಂಗದೇವನಿಗೆ ಕೊಡಲು ಅದನ್ನಾತನು ಓದತೊಡಗಿದನು. ಅದರಲ್ಲಿ ಈ ರೀತಿಯಾಗಿದ್ದಿತು.

ಸ್ವಸ್ತಿ ಶ್ರೀವಟನಾಶ್ರಮ ಹಠಯೋಗ ಧುರೀಣ ಚಾಂಗದೇವನಿಗೆ— ಜ್ಞಾನೇಶ್ವರರು ಬರೆಯುವ ಪತ್ರವೇನಂದರೆ:— ಈ ಆತ್ಮನು ಪರಮಾತ್ಮನ

ಅಂಶವೆಂದು ಗೀತಾ ವಾಕ್ಯಗಳು ಬೋಧಿಸುತ್ತಿವೆಯಲ್ಲದೆ, ಸ್ವಜಾತಿಯ, ವಿಜಾತಿಯ, ತನ್ನ, ಅನ್ಯರದೆಂಬ ಭೇದರಹಿತವಾದುದೆಂದು ಹಿರಿಯರು ಅನುಭವದಿಂದ ಹೇಳುತ್ತಿರಲಾಗಿಯೂ ನೀನೊಂದು ಒಕ್ಕಣಿಕೆಯನ್ನು ಬರೆಯುವದಕ್ಕೆ ಇಷ್ಟೊಂದು ಸಂದೇಹಪಟ್ಟು ಪೇಚಾಡುವದೇಕೆ? ಒಂದೇ ಅನೇಕ ರೂಪದಲ್ಲಿ ಪರಿಣಮಿಸಿ ವಿಚಿತ್ರ ಲೀಲೆಗೈಯುತ್ತಿರುವದು ಸತ್ಯ ಸಿದ್ಧಾಂತವಾಗಿರುವಾಗ ಸಂಶಯಕ್ಕೆ ಕಾರಣವೇನು? ನಿಮ್ಮ ಅಭಿಪ್ರಾಯ ವನ್ನು ಸ್ಪಷ್ಟವಾಗಿ ತಿಳುಹಿರಿ. ಇಂತಿ ಜ್ಞಾನದೇವ.

ಈ ರೀತಿ ಬರೆದಿದ್ದ ಪತ್ರವನ್ನು ಪುನಃ ಓದಿ ನೋಡಿ ಜ್ಞಾನದೇವರ ಜ್ಞಾನಭಾಂಡಾರಕ್ಕೆ ತಲೆಬಾಗಿ, ಆತನ ದರ್ಶನಕ್ಕೆ ಆಗಲೇ ಹೊರಡಬೇಕೆಂದು ನಿಶ್ಚಯಿಸಿದನು.

ಚಾಂಗದೇವನು ಹಟಯೋಗದಲ್ಲಿ ಅಗ್ರಗಣ್ಯನು. ಇವನು ಆಕಾಶ ಗಮನ, ಪರಕಾಯ ಗಮನ, ರಸಗುಳಿಗೆ, ಪಾದುಕಾಸಿದ್ಧಿ ಮೊದಲಾದ ಅಷ್ಟಸಿದ್ಧಿಗಳನ್ನು ಪಡೆದು; ವಜ್ರಕಾಯನಾಗಿ ಸಾವಿರದಾ ಇನ್ನೂರು ವರ್ಷಗಳ ವರೆಗೆ ಬದುಕಿಕೊಂಡಿದ್ದನು. ಈತನು ಹುಲಿ, ಕರಡಿ, ಸಿಂಹ ಮೊದಲಾದ ಕಾಡು ಮೃಗಗಳ ಮೇಲೆ ಸವಾರಿ ಮಾಡುತ್ತಲಿದ್ದನು. ತನ್ನ ಶಿಷ್ಯರಾಗಿದ್ದ ಹನ್ನೆರಡುನೂರು ಜನರಿಗೂ ಹಠಯೋಗವನ್ನೇ ಬೋಧಿಸು ತ್ತಿದ್ದನು. ಒಂದು ದಿನ ಶಿಷ್ಯನೋರ್ವನು ಚಾಂಗದೇವನನ್ನು ಕುರಿತು ಜ್ಞಾನಯೋಗವನ್ನು ಬೋಧಿಸಿರೆಂದು ಕೇಳಿಕೊಂಡನು. ಜ್ಞಾನಯೋಗ ವನ್ನೇ ಅರಿಯದ ಚಾಂಗದೇವನು ಆ ಶಿಷ್ಯನಿಗೆ ಒಂದು ವರ್ಷದ ನಂತರ ಬೋಧೆ ಮಾಡುವೆನೆಂದು ಶಿಷ್ಯನನ್ನು ಸಮಾಧಾನ ಪಡಿಸಿ ತಾನು ಓರ್ವ ಸದ್ಗುರುವನ್ನಾಶ್ರಯಿಸಿ ಜ್ಞಾನಯೋಗವನ್ನೂ ಪಾರಮಾರ್ಥ ರಹಸ್ಯ ವನ್ನೂ ತಿಳಿದುಕೊಳ್ಳಬೇಕೆಂಬ ಇಚ್ಛೆಯುಳ್ಳವನಾಗಿ ಜ್ಞಾನದೇವರ ಆಶ್ರಯ ಪಡೆಯಬೇಕಾಯಿತು.

ಚಾಂಗದೇವನು ಮೊದಲೇ ನಿಶ್ಚಯಿಸಿದಂತೆ ಅಡವಿಯಿಂದ ಒಂದು ಕ್ರೂರ ಹುಲಿಯನ್ನು ತರಿಸಿ ಅದರ ಮೇಲೆ ಕುಳಿತು ಅಟ್ಟಹಾಸದಿಂದ ಜ್ಞಾನದೇವನ ಭೆಟ್ಟಿಗೆ ಹೊರಟನು. ಅವನ ಶಿಷ್ಯರು ಶಂಕ ಕಾಳಿಗಳ ನ್ನೂದಿದರು. ಸಹಸ್ರದಿನ್ನೂರ ಶಿಷ್ಯರಿಂದೊಡಗೂಡಿದ ಸಂಭ್ರಮದ ಸವಾ ರಿಯು ಹೊರಟು ಅಲಕಾವತಿಯನ್ನು ಸಮೀಪಿಸಿತು. ಪುರಜನರು ಈತನ

ಸಂಭ್ರಮವನ್ನು ನೋಡಲು ಗುಂಪು ಗುಂಪಾಗಿ ನೆರೆಯತೊಡಗಿದರು. ಈ ಸಮಾಚಾರವು ಜ್ಞಾನದೇವನಿಗೆ ತಿಳಿದು ಇಂತು ಆಲೋಚಿಸಿದನು. ಈ ಸಿದ್ಧಪುರುಷನು ನನ್ನಿಂದ ಜ್ಞಾನಬೋಧೆಯನ್ನು ಹೊಂದುವದಕ್ಕಾಗಿ ಬರುತ್ತಿದ್ದರೂ ಜ್ಞಾನಬೋಧೆಯನ್ನು ಪಡೆಯಲು ಇರಬೇಕಾದ ಗುಣಗಳು ಅವನಲ್ಲಿನ್ನೂ ಬಂದಿರುವದಿಲ್ಲ. ಅಂತೆಯೇ ಸಿದ್ಧಶಕ್ತಿಯಿಂದೊಡಗೂಡಿದ ಅಹಂಕಾರ, ಅಟ್ಟಹಾಸಗಳಿಂದ ಹುಲಿಯ ಮೇಲೇರಿ ಇಷ್ಟು ಸಂಭ್ರಮದಿಂದ ಬರುತ್ತಲಿದ್ದಾನೆ. ಅವನ ಅಹಂಕಾರವನ್ನು ಈಗಲೇ ಮುರಿಯುವದಕ್ಕೆ ಯೋಗ್ಯ ಸಮಯವೆಂದು ಯೋಚಿಸಿದನು. ಕೂಡಲೇ ಜ್ಞಾನದೇವಾದಿಗಳು ಒಂದು ಹಾಳು ಗೋಡೆಯ ಮೇಲೇರಿ "ಚಲ್‌ರೆ ಘೋಡಾ" ಎನ್ನುತ್ತಲೇ ಆ ಗೋಡೆಯು ಆಕಾಶಕ್ಕೇರಿ ವಿಮಾನದಂತೆ ಅಂತರ ಮಾರ್ಗವಾಗಿ ಹೋಗಿ ಚಾಂಗದೇವನು ಬರುತ್ತಿರುವಲ್ಲಿಗೆ ಇಳಿದರು. ಇದನ್ನು ನೋಡಿದಾಗ ಚಾಂಗದೇವನು ನಾಚಿಕೆಗೊಂಡನು. ನಿರ್ಜೀವ ಗೋಡೆಯು ಮೇಲೆ ಆಕಾಶ ಮಾರ್ಗವಾಗಿ ಬಂದಿರುವ ಇವರ ಸಾಮರ್ಥ್ಯಕ್ಕಿಂತ ಸಜೀವ ಪ್ರಾಣಿಯಾದ ಹುಲಿಯ ಮೇಲೇರಿ ತಿರುಗುವದು ಅಸಮಂಜಸವೇ ಸರಿಯೆಂದು ಯೋಚಿಸಿ ಅಹಂಕಾರ ಆಡಂಡರಗಳನ್ನು ತೊರೆದು ತನ್ನ ಶಿಷ್ಯಮಂಡಳಿಯನ್ನು ಅಲ್ಲಿಯೇ ನಿಲ್ಲಿಸಿ ಕಾಲುನಡಿಗೆಯಿಂದ ನಡೆದುಬಂದು ಜ್ಞಾನದೇವರಿಗೆ ಸಾಷ್ಟಾಂಗ ನಮಸ್ಕರಿಸಿದನು. ಆಗ ಜ್ಞಾನದೇವನು ಹಸ್ತ ಮಸ್ತಕದಿಂದ ಆಶೀರ್ವದಿಸಿದನು. ಬಳಿಕ ತನ್ನೊಡನೆ ಕರೆದೊಯ್ದು ಒಂದು ಶುಭ ಮುಹೂರ್ತದಲ್ಲಿ ಜ್ಞಾನಬೋಧೆಯನ್ನು ಮಾಡಿದನು. ಇಂತು ಆತನನ್ನು ತನ್ನ ಶಿಷ್ಯನನ್ನಾಗಿ ಸ್ವೀಕರಿಸಿ ಪಾರಮಾರ್ಥ ತತ್ವೋಪದೇಶವನ್ನು ಮಾಡುತ್ತಲಿದ್ದನು. ಒಂದು ದಿನ ಚಾಂಗದೇವನು ಜ್ಞಾನದೇವನಲ್ಲಿ ಉಪದೇಶಾರ್ಥ ಬರುತ್ತಿರುವಾಗ ಮುಕ್ತಾಬಾಯಿಯು ದಿಗಂಬರಳಾಗಿರುವದನ್ನು ಕಂಡು ಗಾಬರಿಪಟ್ಟು ಹಿಂತಿರುಗಲು ಮುಕ್ತಾಬಾಯಿಯು "ಎಲೈ ಅವಿವೇಕಿಯೇ! ಹಾಗೇಕೆ ಹಿಂತಿರುಗಿ ಹೋಗುತ್ತಿರುವಿ! ನಿನಗಿನ್ನೂ ಇಂದ್ರಿಯ ವಿಕಾರ ತೊಲಗಲಿಲ್ಲವಲ್ಲಾ! ದೇಹ ಭ್ರಾಂತಿಯಿಂದ ಬಿಡುಗಡೆ ಹೊಂದದ ಹೊರ್ತು ಪರತತ್ವ ಪರಿಜ್ಞಾನವು ಸ್ಥಿರಪಡಲಾರದು. ತಿಳಿಯಿತೇ; ಎಂದೆನಲು ಆಗ ಆತನಿಗೆ ಜ್ಞಾನೋದಯವಾಯಿತು. ಮುಕ್ತಾಬಾಯಿಗೆ ನಮಸ್ಕರಿಸಿ, ಅಮ್ಮಾ

ನಿನ್ನ ಅನುಗ್ರಹದಿಂದ ನಾನು ಧನ್ಯನಾದೆನು ಎಂದು ಬಿನ್ನೈಸಿದನು, ಆಗ ಮುಕ್ತಾಬಾಯಿಯು ನಿನಗೆ ಪೂರ್ಣ ಜ್ಞಾನೋದಯವಾಗಲೇಬೇಕಂತಲೇ ನಾನೀ ರೀತಿ ಮಾಡಿದೆನು, ಬೇರೊಂದಲ್ಲವೆಂಡಾತನನ್ನು ಗೌರವಿಸಿದಳು, ಆಗ ಚಾಂಗದೇವನು ಅವರೆಲ್ಲರಿಗೆ ನಮಸ್ಕರಿಸಿ ಹೊರಟುಹೋದನು. ಬಳಿಕ ಚಾಂಗದೇವನು ತನ್ನ ಶಿಷ್ಯರಿಗೆ ತತ್ವೋಪದೇಶ ಮಾಡಿದನು.

ಇಂತು ಕೆಲದಿನಗಳ ನಂತರ ತೀರ್ಥಯಾತ್ರೆಯನ್ನು ಕೈಕೊಂಡು ನಾಮದೇವ, ಗೋರಾಕುಂಬಾರ ಮೊದಲಾದವರಿಗೆ ತತ್ವೋಪದೇಶ ಮಾಡಿ ಅನೇಕ ತೀರ್ಥಕ್ಷೇತ್ರಗಳನ್ನು ಸಂದರ್ಶಿಸುತ್ತ, ಜ್ಞಾನೇಶ್ವರಿ ಎಂಬ ಗೀತಾ ಭಾಷ್ಯವನ್ನು ರಚಿಸಿದರು. ಆ ಅಮೋಘ ಗ್ರಂಥವನ್ನು ಸಹಸ್ರಾರು ಸಹಸ್ರ ಜನರು ಪಾರಾಯಣಕ್ಕಿಟ್ಟುಕೊಂಡು ತನ್ಮೂಲಕ ಪಾರಮಾರ್ಥ ಜ್ಞಾನ ವನ್ನು ಹೊಂದುತ್ತಲಿದ್ದಾರೆ. ಜ್ಞಾನದೇವಾದಿಗಳು ಸಂಚರಿಸುತ್ತ ಆಳಂದಿಗೆ ಬಂದರು. ಅಲ್ಲಿ ನಿವೃತ್ತಿದೇವ, ಮುಕ್ತಾಬಾಯಿಯವರಿಗೆ ವಂದಿಸಿ, ಸೋಪಾನದೇವನಿಗೆ ಆಶೀರ್ವದಿಸಿ, ಅವರಿಂದ ಬೀಳ್ಕೊಂಡು ಸಜೀವ ದೇಹಿ ಗಳಾಗಿ ಸಮಾಧಿಯನ್ನು ಪ್ರವೇಶಿಸಿ, ಯೋಗಾಸನಾರೂಢರಾಗಿ ಕುಳಿತು ಕೊಂಡರು. ಇಂದಿಗೂ ಆಳಂದಿಯಲ್ಲಿ ಜ್ಞಾನದೇವರ ಸಮಾಧಿಯುಂಟು.

---

## ೨. ಸಂತ ತುಕಾರಾಮ ಚರಿತ್ರೆ

ಪೂನಾ ಪಟ್ಟಣಕ್ಕೆ ಮೂವತ್ತೈದು ಮೈಲು ದೂರದಲ್ಲಿದ್ದ ಹೇಹು ಎಂಬ ಗ್ರಾಮದಲ್ಲಿ, ಸುಮಾರು ಮುನ್ನೂರಾಯಪ್ಪತ್ತೈದು ವರ್ಷಗಳ ಹಿಂದೆ ಶೂದ್ರ ವರ್ಣಕ್ಕೆ ಸೇರಿದ ಬೊಲ್ಲಾಬಾ ಎಂಬ ಗ್ರಹಸ್ಥನು ತನ್ನ ಸತಿಯಾದ ಕನಕಾಂಬೆಯೊಡನೆ ಸಂಸಾರ ಸಾಗಿಸಿಕೊಂಡಿದ್ದನು. ಅವನಿಗೆ ಇಬ್ಬರು ಗಂಡುಮಕ್ಕಳಿದ್ದರು. ಹಿರಿಯಮಗನು ಮನೆ ಬಿಟ್ಟು ದೇಶಾಟನೆಗೆ ಹೊರಟು ಹೋಗಿದ್ದರಿಂದ ಕಿರಿಯ ಮಗನಾದ ತುಕಾರಾಮನನ್ನೇ ತನ್ನ ಆಧಾರಭೂ ತನೆಂದು ನಂಬಿದ್ದನು. ತುಕಾರಾಮನಾದರೂ ತನ್ನ ಕೈಲಾದಮಟ್ಟಿಗೆ

ತಂದೆಯ ವ್ಯವಹಾರದಲ್ಲಿ ಸಹಾಯಕನಾಗಿದ್ದನು. ತುಕಾರಾಮನ ಲಗ್ನ ವನ್ನು ಅವನ ಬಾಲ್ಯದಲ್ಲಿಯೇ ರುಕ್ಮಾಬಾಯಿಯೆಂಬ ಸ್ತ್ರೀರತ್ನದೊಡನೆ ಮಾಡಿದ್ದನು. ರುಕ್ಮಾಬಾಯಿಯು ಗೃಹಲಕ್ಷ್ಮಿಯಾಗಿ ತುಕಾರಾಮನ ಮನೆ ಸೇರಿದಂದಿನಿಂದ ತುಕಾರಾಮನ ವ್ಯವಹಾರವು ಉತ್ತಮಗೊಂಡು ಎಲ್ಲ ಅನುಕೂಲತೆಗಳನ್ನೂ ಹೊಂದಿತ್ತು. ಆದರೆ ತುಕಾರಾಮನ ಹೆಂಡತಿಯು ಆಗಾಗ್ಗೆ ರೋಗಪೀಡಿತಳಾಗುತ್ತಲಿದ್ದುದರಿಂದ ಸಂಸಾರದಲ್ಲಿ ಅನಾನುಕೂಲತೆಗಳು ಒದಗಿಬರುತ್ತಿದ್ದವು. ಇದನ್ನು ಕಂಡು ರುಕ್ಮಾಬಾಯಿಯೂ ತುಕಾರಾಮನ ತಂದೆ - ತಾಯಿಗಳೂ ಇನ್ನೊಂದು ಲಗ್ನವಾಗೆಂದು ಆಗ್ರಹಪಟ್ಟಮೂಲಕ ತುಕಾರಾಮನು ಜೀಜಾಬಾಯಿ ಎಂಬಾಕೆಯೊಡನೆ ಲಗ್ನವಾದನು. ಮೊದಲನೇ ಪತ್ನಿಯು ಕ್ಷಯರೋಗ ಪೀಡಿತಳಾಗಿ ಕೆಲಕಾಲದಲ್ಲಿಯೇ ಮೃತಳಾದಳು. ಆಕೆಗೆ ಜನಿಸಿದ್ದ ಒಬ್ಬ ಪುತ್ರನೂ ಮಡಿದನು. ತುಕಾರಾಮ ಇದ್ದ ಸತಿಯೊಡನೆ ಸುಖ ಸಂಸಾರ ಸಾಗಿಸಿಕೊಂಡಿರಬೇಕೆನ್ನುವಷ್ಟರಲ್ಲಿ ಅವನ ತಂದೆ-ತಾಯಿಗಳು ಕಾಲಾಧೀನರಾದರು. ಹೀಗೆ ಮನೆಯಲ್ಲಿ ಮರಣಗಳು ಮೇಲಿಂದಮೇಲೆ ಸಂಭವಿಸಿದ್ದರಿಂದ ಅವನ ಮನಸ್ಸು ದುಃಖಗೊಂಡಿತು. ಆದರೂ ಧೈರ್ಯಗುಂದದೇ ವ್ಯಾಪಾರ ವೃತ್ತಿಯನ್ನು ಮುಂದರಿಸಿಕೊಂಡು ಭಗತ್ಸ್ಮರಣೆಯಲ್ಲಿ ಕಾಲಕಳೆಯುತ್ತಿದ್ದನು. ಇದೇ ಕಾಲಕ್ಕೆ ಅವನಿದ್ದ ಪ್ರಾಂತದಲ್ಲಿ ಭೀಕರ ಬರಗಾಲ ಪ್ರಾಪ್ತವಾಯಿತು. ಆ ಬರಗಾಲಪೀಡಿತ ಜನರಿಗೆ ಸಂತೃಪ್ತಿಗೊಳಿಸುವಲ್ಲಿ ತನ್ನ ಸಂಪತ್ತನ್ನೆಲ್ಲ ಸೂರೆಗೊಂಡನು. ಅದರಿಂದ ವ್ಯವಹಾರ ಕಟಾಯಿತು. ಕ್ರಮೇಣ ಬಡತನ ಪ್ರಾಪ್ತವಾಗಿ ಸಂಸಾರ ಸಾಗುವದೇ ಕಠಿಣವಾಯಿತು. ಇಷ್ಟಾದರೂ ಮನೆಗೆ ಬಂದ ಅತಿಥಿಗಳಿಗೆ ಅನ್ನ ನೀಡದೇ ಬಿಡುತ್ತಿರಲಿಲ್ಲ. ಕಿರಿಯ ಹೆಂಡತಿಯಾದ ಜೀಜಾಬಾಯಿಗೆ ಆಗ ಇನ್ನೂ ಮಕ್ಕಳಾಗಿರಲಿಲ್ಲ. ಊಟಕ್ಕೆ ಕಾಳು - ಕಡಿ ದೊರೆಯದಿದ್ದರೆ ಹಸಿ ಸೊಪ್ಪು ಬೇಯಿಸಿ ತಿನ್ನುತ್ತಿದ್ದರು. ಈ ಪರಿಸ್ಥಿತಿಯನ್ನು ಸಹಿಸಲಾರದೇ ಅವನ ಪತ್ನಿಯು ತುಕಾರಾಮನನ್ನು ಕುರಿತು "ಪ್ರಾಣನಾಥಾ ಇದ್ದ ಸಂಪತ್ತನ್ನು ಅನ್ಯರಿಗೆ ನೀಡಿ ಇಂದು ನಾವು ಭಿಕ್ಷೆ ಬೇಡುವ ಈ ಸ್ಥಿತಿಯನ್ನು ಎಲ್ಲಿಯವರೆಗೆ ಸಹಿಸುವದು." ಎಂದೆನ್ನಲು ತುಕಾರಾಮನು ಹೆಂಡತಿಗಿಂತೆಂದನು—

||೧|| ಸುಖವನ್ನು ಅನುಭವಿಸಿದ ನಂತರ ದುಃಖವೂ, ದುಃಖವನ್ನು ಅನುಭವಿಸಿದ ನಂತರ ಸುಖವೂ ಇವೆರಡು ಎಲ್ಲ ಜೀವಿಗಳಿಗೂ ಹಗಲು ರಾತ್ರಿಗಳಂತೆ ಒಂದರ ಹಿಂದೊಂದು ಬರುವವು.

||೨|| ಶುಭಫಲ ಪ್ರಾಪ್ತವಾದಾಗ ಸಂತೋಷವನ್ನೂ ಅಶುಭಫಲ ಪ್ರಾಪ್ತವಾದಾಗ ದುಃಖವನ್ನೂ ಎಂದೂ ಪಡಬಾರದು. ಬ್ರಹ್ಮನಿಂದ ಯಾವುದು ವಿಧಿಸಲ್ಪಟ್ಟಿದೆಯೋ ಅದನ್ನು ಯಾರಿಂದಲೂ ತಪ್ಪಿಸಲು ಸಾಧ್ಯವಿಲ್ಲ.

||೩|| ತಾನು ಮಾಡಿದ ಕರ್ಮಕ್ಕೆ ಸ್ವಾಧೀನನಾದ ಮಾನವನು ಸುಖವನ್ನಾಗಲೀ ದುಃಖವನ್ನಾಗಲೀ ಇಚ್ಛಿಸಬಾರದು. ಎಂದು ಯಾವದು ಬರುವದೋ ಅಂದು ಅದನ್ನು ಅನುಭವಿಸಿ ಸ್ವಸ್ಥಚಿತ್ತನಾಗಿರಬೇಕು.

ಎಂದು ಸಮಾಧಾನ ಪಡಿಸಿದನು. ಆದರೂ ತನ್ನ ಸಂಸಾರದ ಪರಿಸ್ಥಿತಿಯಿಂದ ಕೊಂಚ ವ್ಯಥೆಗೊಂಡನು. ಸಣ್ಣ ಸಣ್ಣ ವ್ಯಾಪಾರಗಳನ್ನಾದರೂ ಮಾಡಿ ಜೀವನ ಸಾಗಿಸಬೇಕೆಂದು ಪ್ರಯತ್ನಿಸಿದನು. ಆದರೆ ಅವುಗಳಲ್ಲಿಯೂ ನಷ್ಟವೇ ಆಗುತ್ತ ಬಂದಿತು. ಮೊದಲಿದ್ದ ಮಾನ ಮರ್ಯಾದೆಗಳು ಮಾರಿ ಹೋದವು. ನೆಂಟರಿಷ್ಟರು ನಗಲಾರಂಭಿಸಿದರು. ಯಾರು ತುಕಾರಾಮನನ್ನು ಸನ್ಮಾನಿಸುತ್ತಿದ್ದರೋ ಅವರೇ ಅವನನ್ನು ದೂಷಿಸಹತ್ತಿದರು. ಗೆಳೆಯರು ತುಕಾರಾಮನನ್ನು ಕಂಡರೆ ಎಲ್ಲಿ ಏನು ಬೇಡುವನೋ ಎಂಬ ಭಯದಿಂದ ಕಂಡೂ ಕಾಣದವರಂತೆ ತುಕಾರಾಮನು ಬರುತ್ತಿದ್ದ ಬದಿಯನ್ನು ಬಿಟ್ಟು ಮತ್ತೊಂದು ಬದಿಯಿಂದ ಹೋಗುತ್ತಿದ್ದರು. ಇಂಥ ಪರಿಸ್ಥಿತಿಯನ್ನು ಕಂಡು ಕಂಗೆಟ್ಟನು.

||೪|| ಯಾರ ಅದೃಷ್ಟದಲ್ಲಿ ಯಾವುದು ಆಗುವುದಿಲ್ಲವೋ ಅದು ಆಗುವದೇ ಇಲ್ಲ. ಯಾವುದು ಆಗಬೇಕೋ ಅದು ಪ್ರಯತ್ನವಿಲ್ಲದೇನೇ ಆಗುವದು ಯಾರಿಗೆ ಅದೃಷ್ಟವಿಲ್ಲವೋ ಅವರಿಗೆ ಅಂಗೈಯಲ್ಲಿರುವದೂ ಕೂಡಾ ನಷ್ಟವಾಗುವದು,

ಎಂದು ದೃಢವಾಗಿ ನಂಬಿದನು. ಪ್ರಪಂಚದಲ್ಲಿಯ ಮಮತೆಯನ್ನು ಬಿಟ್ಟನು. ಈ ದೇಹವು ನಶ್ವರವಾದುದು. ಈ ಜನ್ಮವನ್ನು ಇಲ್ಲಿಯವರೆಗೆ ವ್ಯರ್ಥ ಕಳೆದನು. ಈ ಪ್ರಪಂಚದ ಮಾಯೆಯಲ್ಲಿ ಸಿಕ್ಕು ಪರಮಾತ್ಮನಾದ

ಪಂಢರಿನಾಥನನ್ನು ಮರೆತನು. ಸುಖ–ದುಃಖಗಳೆಂಬ ತಗಣಿಗಳಿಂದ ತುಂಬಿದ ಸಂಸಾರವೆಂಬ ಮಂಚದ ಮೇಲೆ ಮಲಗಿ ಸುಖನಿದ್ರೆ ಮಾಡುವದು ಸಾಧ್ಯವೇ? ಇಂಥ ಪ್ರಪಂಚವನ್ನು ಬಿಸುಟು ವೈರಾಗ್ಯವೆಂಬ ಸುಖಾಸನದಲ್ಲಿ ಮಲಗುವ ದೊಳಿತೆಂದು ಆಲೋಚಿಸಿದನು. ಅದರಂತೆ ಸುಖ-ದುಃಖಗಳನ್ನು ಲಕ್ಷಿಸದೆ ಅಹೋರಾತ್ರಿಯಲ್ಲಿಯೂ ಪಂಢರಿನಾಥನ ಭಜನೆಯನ್ನು ಭಕ್ತಿಯಿಂದ ಮಾಡ ಹತ್ತಿದನು.

ಈ ರೀತಿಯಾಗಿ ವೈರಾಗ್ಯಧಾರಣ ಮಾಡಿದ ತುಕಾರಾಮನ ಊರಿನಲ್ಲಿ ಒಂದು ಹಳೇ ಪಾಂಡುರಂಗನ ದೇವಾಲಯವಿದ್ದಿತು. ಅದು ತುಕಾರಾಮನ ಸಕಲ ಸಾಧನೆಗಳಿಗೆ ಅನುಕೂಲವಾಗಿದ್ದರಿಂದ ಅದನ್ನು ಸಾರಣೆ ವಗ್ಯೆರೆ ಮಾಡಿ ಸರಿಪಡಿಸಿದನು. ಆದರೆ ಏಕಾದಶಿ ವ್ರತವನ್ನು ಆರಂಭಿಸಿ, ಏಕನಿಷ್ಠೆ ಯಿಂದ ಜಾಗರಣೆಯನ್ನು ಮಾಡಿ ಹರಿಕೀರ್ತನೆಯನ್ನು ತಾನೇ ಮಾಡುವದಕ್ಕೆ ಮೊದಲಿನಿಂದಲೂ ಅಭ್ಯಾಸವಿಲ್ಲದ್ದರಿಂದ ಯಾರಾದರೂ ಹೇಳುತ್ತಿದ್ದರೆ ಅವರ ಹಿಂದೆ ಪಲ್ಲವಿಯನ್ನು ಹೇಳುತ್ತ ಭಗವಂತನ ನಾಮಕೀರ್ತನೆಗಳನ್ನು ಸಾವಕಾಶವಾಗಿ ಅಭ್ಯಾಸ ಮಾಡಹತ್ತಿದನು. ಪುರಾತನ ಪ್ರಸಿದ್ಧ ಸಂತರ ವಚನಗಳನ್ನು ಚನ್ನಾಗಿ ಪಾಠ ಮಾಡುವದಕ್ಕಿಂತಲೂ ಶ್ರೇಷ್ಠವಾದ ಮತ್ತೊಂದು ಮಾರ್ಗ ವಿಲ್ಲವೆಂದು ತಿಳಿದು ಆದರಂತೆ ಶ್ರೇಷ್ಠ ಸಂತರ ವಚನಗಳನ್ನು ಪಾಠಮಾಡ ಹತ್ತಿದನು. ಸಕಲ ಭೂತಗಳನ್ನೂ ತನ್ನಂತೆಯೇ ತಿಳಿಯುತ್ತ ಪರೋಪಕಾರ ಗಳಲ್ಲಿಯೇ ನಿರತನಾದನು.

ಯಾರಾದರೂ ಪರಸ್ಥಳದಿಂದ ಬಂದು ಇಳಿಯುವದಕ್ಕೆ ಸ್ಥಳ ಕೇಳಿ ದರೆ ತುಕಾರಾಮನು ಅವರನ್ನು ತನ್ನ ಮನೆಗೆ ಕರೆದೊಯ್ಯುತ್ತಿದ್ದನು. ಮಾರ್ಗಾಯಾಸದಿಂದ ಬಳಲಿ ಬಾಯಾರಿ ಬಂದರೆ ನೀರು ಕೊಡುತ್ತಿದ್ದನು. ಅನ್ನ ಬೇಕೆಂದರೆ ಅನ್ನ ಕೊಡುತ್ತಿದ್ದನು. ತನ್ನಲ್ಲಿದಿದ್ದರೂ ಹೇಗಾದರೂ ಮಾಡಿ ತಂದುಕೊಡುತ್ತಿದ್ದನು. ಭಾರ ಹೊತ್ತು ದಣಿದವರನ್ನು ಕಂಡರೆ ಅವರ ಭಾರವನ್ನು ತಾನು ಹೊತ್ತು ಅವರಿಗೆ ಸಹಾಯ ಮಾಡುತ್ತಿದ್ದನು. ಮಾರ್ಗಾಯಾಸದಿಂದ ಬಳಲಿಬಂದರೆ ಅವರ ಕಾಲುಗಳನ್ನು ಸಹ ಹಿಚಗುತ್ತಿ ದ್ದನು. ಭಗವದ್ಭಕ್ತರು ಭೆಟ್ಟಿಯಾದರೆ ಅವರನ್ನು ಮನೆಗೆ ಕರೆತಂದು ಪಾದ ಪೂಜೆಮಾಡಿ ತೀರ್ಥ ಸ್ವೀಕರಿಸುತ್ತಿದ್ದನು. ಇದರಂತೆ ಪಶು ಪ್ರಾಣಿಗಳನ್ನು ಸಹ

ಸಂತಯಿಸುತ್ತಿದ್ದನು. ಹೀಗೆ ಅನೇಕ ರೀತಿಯಲ್ಲಿ ಪರಸಹಾಯ ಮಾಡುತ್ತ ಭಗವದ್ಭಕ್ತಿಯಲ್ಲಿ ನಿರತನಾಗಿದ್ದುದರಿಂದಲೇ ಸ್ಮೃತಿಗಳಲ್ಲಿರುವ ತತ್ವಗಳನ್ನು ಮಾತೃಭಾಷೆಯಲ್ಲಿ ಹೇಳುವ ಯೋಗ್ಯತೆಯುಂಟಾಯಿತು.

ತುಕಾರಾಮನಿಗೆ ಬಡತನವು ಹೆಚ್ಚಿದಂತೆಲ್ಲ ಅವನ ಸಂಸಾರವೂ ಬೆಳೆಯಿತು. ಎರಡು ಮಕ್ಕಳೂ ಆದವು. ಮನೆಯಲ್ಲಿ ಏನೂ ಇಲ್ಲದಾಗ ತುಕಾರಾಮ ದಂಪತಿಗಳು ಬೇರೇನನ್ನಾದರೂ ತಿಂದಾಗಲೀ, ಬರೀ ನೀರನ್ನು ಕುಡಿದಾಗಲೀ ಮಲಗುತ್ತಿದ್ದರು. ಆದರೀಗ ಆ ಮಕ್ಕಳಿಗೇನು ಹೇಳಬೇಕು ? ಆ ಮಕ್ಕಳು ಅವ್ವಾ ಹೊಟ್ಟೆ ಹಸಿದಿದೆ ಎಂದು ಅನ್ನುವಾಗ ಎಂಥ ಕಲ್ಲೆದೆಯಿದ್ದರೂ ಕರಗದಿರಲಾರದು. ಇಂಥ ಪರಿಸ್ಥಿತಿಯನ್ನು ಕಂಡ ತುಕಾರಾಮನ ಮನಸ್ಸು ಏನಾಗಲಿಕ್ಕಿಲ್ಲ. ಆಗಲೂ ಭಗವಂತನ ಮೇಲೆ ಭಾರಹಾಕಿ ಆತನ ಧ್ಯಾನದಲ್ಲಿ ಮಗ್ನನಾಗುತ್ತಿದ್ದನು.

ತುಕಾರಾಮನ ಸ್ಥಿತಿಯನ್ನು ಕಂಡ ಒಬ್ಬ ರೈತನು ತುಕಾರಾಮ; ನೀನು ಮನೆಯಲ್ಲಿದ್ದು ಕಾಲ ಕಳೆಯುವದಕ್ಕಿಂತ ನನ್ನ ಜೋಳದ ಹೊಲದಲ್ಲಿದ್ದು ಅದನ್ನು ಕಾಯ್ದುಕೊಂಡಿರು. ನಿನ್ನ ಉಪಜೀವನಕ್ಕೇನಾದರೂ ಸಹಾಯವಾದೀತೆಂದು ಆ ಮಹಾನುಭಾವನೆನ್ನಲು ತುಕಾರಾಮನು ತನ್ನ ಬಡತನದ ಸ್ಥಿತಿಯನ್ನು ಲಕ್ಷಕ್ಕೆ ತಂದುಕೊಂಡು ಒಪ್ಪಿಕೊಂಡನು.

ಆಗ ರೈತನು ಮರುದಿನವೇ ತುಕಾರಾಮನನ್ನು ತನ್ನ ಹೊಲಕ್ಕೆ ಕರೆದೊಯ್ದು ಅಲ್ಲಿಯೇ ಗುಡಿಸಲು ಹಾಕಿಕೊಟ್ಟನು. ಹೊಲದಲ್ಲಿ ತುಕಾರಾಮನಿರುವನೆಂದು ಆ ರೈತನು ಮೂರ್ನಾಲ್ಕು ದಿನಗಳ ವರೆಗೆ ಹೊಲಕ್ಕೆ ಹೋಗಲಿಲ್ಲ. ತುಕಾರಾಮನು ಅಲ್ಲಿಯೂ ಪಾಂಡುರಂಗನ ಭಜನೆಯಲ್ಲಿಯೇ ಕಾಲ ಕಳೆಯುತ್ತಿದ್ದನು. ಒಂದು ದಿನ ತುಕಾರಾಮನು ಪಾಂಡುರಂಗನ ಭಜನೆಯಲ್ಲಿ ಲೀನನಾಗಿದ್ದಾಗ ಅನೇಕ ದನಗಳ ಗುಂಪೊಂದು ಹೊಲದಲ್ಲಿ ಹೊಕ್ಕು ತುಳಿದಾಡುತ್ತ ಮನಬಂದಂತೆ ಮೆಯ್ಯತೊಡಗಿದ್ದವು. ಜೋಳವು ಕೊಯಿತಕ್ಕೆ ಬಂದದ್ದರಿಂದ ಆ ದನಗಳ ತುಳಿದಾಟಕ್ಕೆ ದಂಟು ನೆಲಕ್ಕೆಬಿದ್ದು ಕಾಳುಗಳು ಉದುರಿದ್ದರಿಂದ ಸೂರೆ ಮಾಡಿದಂತೆ ಕಾಣುತ್ತಿತ್ತು. ಅಷ್ಟೊತ್ತಿಗೆ ರೈತನೂ ಬಂದನು. ಹೊಲವು ಹಾಳಾದದ್ದು ಕಂಡು ಕಡುಕೋಪಗೊಂಡನು.

ತುಕಾರಾಮನು ಇರುವನೋ ಇಲ್ಲೋ ನೋಡಬೇಕೆಂದು ಗುಡಿಸಲಕ್ಕೆ ಬರಲು ತುಕಾರಾಮನು ಪಾಂಡುರಂಗನ ಧ್ಯಾನದಲ್ಲಿ ಮಗ್ನನಾಗಿದ್ದನ್ನು ಕಂಡು ಕೆಲನಿಮಿಷ ನಿಂತುಕೊಂಡನು. ಆದರೂ ಭಜನೆ ಮುಗಿಯಲಿಲ್ಲ. ತಾನೇ ಹೋಗಿ ದನಗಳನ್ನು ಹೊಡೆದು ಮತ್ತೆ ಬಂದನು. ಆಗಲೂ ತುಕಾರಾಮನ ಧ್ಯಾನ ಮುಗಿದಿರಲಿಲ್ಲ. ಅವನ ಭಜನೆ ಮುಗಿಯುವವರೆಗೆ ಕೂತುಕೊಂಡನು. ರೈತನ ಸಿಟ್ಟು ಕ್ರಮೇಣ ಕಡಿಮೆಯಾಗುತ್ತಲಿತ್ತು. ತುಕಾರಾಮನು ಭಜನೆಯನ್ನು ಮುಗಿಸಿ ಕರಜೋಡಿಸಿ ಪಾಂಡುರಂಗನನ್ನು ನಮಸ್ಕರಿಸಿ ಕೂತುಕೊಂಡನು. ಆಗ ರೈತನು ಶಾಂತ ರೀತಿಯಿಂದ ತುಕಾರಾಮ ಬಾ ಇಲ್ಲಿ ಎಂದು ಅವನನ್ನು ಕರೆದೊಯ್ದು ಹಾಳಾದ ಹೊಲವನ್ನು ತೋರಿಸಿ ನಿನ್ನನ್ನು ಕಾಯಲಿಟ್ಟದ್ದು ಭಜನೆ ಮಾಡುವದಕ್ಕೋ! ಹೊಲ ಕಾಯುವದಕ್ಕೋ! ಈಗ ಲುಕ್ಸಾನನ್ನು ಕೊಡುವವರಾರು? ಈ ಹೊಲಕ್ಕೆ ಎಷ್ಟು ಕಾಳು ಆಗಬೇಕಿತ್ತೋ ಅದಕ್ಕಿಂತ ಕಡಿಮೆಯಾದ ಕಾಳಿನ ಲುಕ್ಸಾನ ನಿನ್ನಿಂದ ವಸೂಲು ಮಾಡುತ್ತೇನೆ ತಿಳಿಯಿತೇ! ಹೋಗು, ಇನ್ನು ನೀನು ಹೊಲ ಕಾಯುವದು ಬೇಡ ಎಂದು ಹೇಳಿ ಮನೆಗೆ ಕಳಿಸಿದನು. ತುಕಾರಾಮನು ಪಾಂಡುರಂಗನ ಇಚ್ಛೆ ಇದ್ದಂತೆ ಆಗಲಿ ಎಂದು ಹೇಳಿ ಹೊರಟು ಹೋದನು.

ಊರಲ್ಲಿ ಈ ಸುದ್ದಿ ಹರಡಿ ತುಕಾರಾಮನು ದುಡಿಯಲಾರದ ದರಿದ್ರ ದುಡಿಯಲಾರದೆ ಪಾಂಡುರಂಗನ ಭಜನೆ ಮಾಡಿದರೆ ಪಾಂಡುರಂಗನು ಏನು ಮಾಡುವನು. ಅವನು ದುಡಿದುಣ್ಣುವವನಲ್ಲ, ತಿರಿದುಣ್ಣುವವ ಎಂದು ಅನೇಕ ರೀತಿಯಲ್ಲಿ ಜನರು ಅವನನ್ನು ನಿಂದಿಸತೊಡಗಿದರು.

ತುಕಾರಾಮನ ಸಾವುಕಾರನಾಗಿದ್ದ ಆ ರೈತನು ಜೋಳ ಕೊಯಿಸಿ ರಾಸಿ ಮಾಡಿಸಿದನು. ಜನರು ಇವು ಇಪ್ಪತ್ತು ಚೀಲಗಳಾಗುತ್ತವೆ. ಈ ಹೊಲಕ್ಕೆ ಮೂವತ್ತು ಚೀಲಗಳಾಗಬೇಕಿತ್ತು ಹತ್ತು ಚೀಲ ಕಡಿಮೆಯಾದಂತಾಯಿತು- ಎಂದು ಮೊದಲು ಹೊಲ ನೋಡಿದವರು ಅಂದರು. ಆ ದಿನ ರಾಶಿಯ ಹಬ್ಬ ಮಾಡಿ ಮರುದಿನ ಮುಂಜಾನೆ ರಾಶಿತುಂಬಲಿಕ್ಕೆ ಹೋಗುತ್ತಾರೆ. ರಾಶಿಯ ಗುತ್ತೇ ಹತ್ತದಂತಾಗಿತ್ತು. ಪಾಂಡುರಂಗನ ಕೃಪೆಯಿಂದ ಇ ರಾಶಿ ಮಿತಿಮೀರಿ ಬೆಳೆದುಕೊಂಡಿದೆ. ಚೀಲಗಳನ್ನು ತುಂಬುತ್ತಾರೆ.

ಎಂಬತ್ತು ಚೀಲ ಜೋಳಗಳಾದವು. ಅನೇಕರು ಆಶ್ಚರಿಗೊಂಡರು. ಆಗೊಬ್ಬ ಸದ್ಗೃಹಸ್ಥನು ಆ ರೈತನನ್ನು ಕುರಿತು ಹೀಗೆಂದನು—

ತುಕಾರಾಮನನ್ನು ಹೊಲ ಕಾಯಹಚ್ಚಿದಾಗ ದನಗಳು ಮೇದು ಹತ್ತು ಚೀಲ ಕಡಿಮೆಯಾದವೆಂದು ನಾವು ನಿನ್ನೆ ಅಂದಾಜು ಮಾಡಿದ್ದೆವು. ಆಗ ನೀನು ಆ ಹತ್ತು ಚೀಲಗಳ ಲುಕ್ಸಾನ ಅವನಿಂದ ವಸೂಲ ಮಾಡುತ್ತೇನೆ ಎಂದು ಅಂದಿದ್ದಿ. ಆದರೀಗ ಹೆಚ್ಚಾದ ಐವತ್ತು ಚೀಲ ಜೋಳ ಅವನಿಗೆ ಕೊಡುವೆಯಾ, ಎಂದನು. ಆಗ ರೈತನು ಕೂಡಲೇ ಐವತ್ತು ಚೀಲ ಜೋಳ ವನ್ನು ತುಕಾರಾಮನ ಮನೆಗೆ ಹೇರಿಸಿ ಕಳಿಸಿದನು. ಆಗ ತುಕಾರಾಮನು ಮನೆಯಲ್ಲಿ ಇಲ್ಲದ್ದರಿಂದ ಆಳುಗಳು ಚೀಲಗಳನ್ನು ಅವನ ಮನೆಯಲ್ಲಿ ಹಚ್ಚಿ ಬಂದರು. ತುಕಾರಾಮನು ಮನೆಗೆ ಬಂದು ನೋಡುವಾಗ ಮನೆಯಲ್ಲಿ ಜೋಳದಚೀಲಗಳನ್ನು ಕಂಡನು. ಇವು ಯಾರವು ಎಂದು ಹೆಂಡತಿಯನ್ನು ಕೇಳಲು ಆಕೆಯು ಇದ್ದ ವಿಚಾರ ತಿಳಿಸಿದಳು. ಕೂಡಲೆ ತುಕಾರಾಮನು ರೈತನ ಮನೆಗೆ ಹೋಗಿ ನಿಮ್ಮ ಜೋಳವನ್ನು ನೀವು ಹಿಂದೆ ತರಿಸಿಕೊಳ್ಳಿರಿ ಎಂದು ಹೇಳಲು ಆಗಾ ರೈತನು ಅವು ನಿಮ್ಮವು, ಅಂತೆಯೇ ನಿಮ್ಮ ಮನೆಗೆ ಕಳಿಸಿದ್ದೇನೆ ಎಂದನು. ಆಗ ತುಕಾರಾಮನು ಅದೆಲ್ಲ ಸುಳ್ಳು ನಿಮ್ಮ ಮನ ಸ್ಸಿಗೆ ಆ ಭಗವಂತನು ಅನುಗ್ರಹಿಸಿದ್ದರೆ ಆ ಜೋಳ ನನ್ನವು ಹೇಗಾಗು ತ್ತವೆ. ಸುಮ್ಮನೆ ಅವುಗಳನ್ನು ತರಿಸಿಕೊಳ್ಳಿರಿ, ಇಲ್ಲವಾದರೆ ನಿಮ್ಮ ಹೆಸರಿ ನಿಂದ ಧರ್ಮ ಮಾಡಿಬಿಡುತ್ತೇನೆ ಎಂದನು. ನಿನ್ನ ಜೋಳವನ್ನು ನಿನ್ನಿ ಚ್ಛೆಯಂತೆ ಮಾಡು ಎಂದು ಆ ರೈತನು ಸುಮ್ಮನಾದನು. ತುಕಾರಾಮನು ಮನೆಗೆ ಬಂದು ಆ ಎಲ್ಲ ಜೋಳವನ್ನು ಬಡಬಗ್ಗರಿಗೆ ದಾನಮಾಡಿಬಿಟ್ಟನು. ಆಗ ಊರ ಜನರಿಗೆ ಇವನೊಬ್ಬ ಮಹಾಪುರುಷನೆಂದು ಅನಿಸತೊಡಗಿತು. ಊರ ಜನರ ವಿಶ್ವಾಸವೂ ಬೆಳೆಯತೊಡಗಿತು. ತುಕಾರಾಮನು ನಿಸ್ವಾರ್ಥ ಬುದ್ಧಿಯಿಂದ ಮಾಡಿದ ಪರೋಪಕಾರಗಳನ್ನು ಕಂಡು ಹಿಂದೆ ನಿಂದಿಸಿದ ವರು ಸ್ತುತಿಸತೊಡಗಿದರು.

ಒಂದು ದಿನ ತುಕಾರಾಮನು ಮಲಗಿದಾಗ ಅವನ ಸ್ವಪ್ನದಲ್ಲಿ ಪಾಂಡು ರಂಗನು ಪ್ರತ್ಯಕ್ಷನಾಗಿ ತುಕಾರಾಮ ! ಭಕ್ತ ನಾಮದೇವನು ಶತಕೋಟಿ ಶ್ಲೋಕಗಳನ್ನು ಮಾಡುವೆನೆಂದು ಪ್ರತಿಜ್ಞೆ ಮಾಡಿದ್ದಾನೆ. ಆದರೀಗ ಅವನು

ತೊಂಬತ್ತು ಕೋಟಿ ನಾಲ್ಕು ಲಕ್ಷ ಮಾಡಿ ಬೇಸರಗೊಂಡಿದ್ದಾನೆ. ಕಾರಣ ನೀನು ಉಳಿದವುಗಳನ್ನು ಬರೆದು ಪೂರ್ಣ ಮಾಡಿ ಅವನ ಪ್ರತಿಜ್ಞೆಯನ್ನು ಪೂರೈಸು. ನಿನಗೆ ನನ್ನ ಆಶೀರ್ವಾದವಿದೆ" ಎಂದು ಹೇಳಿ ಅದೃಶ್ಯನಾದನು. ತುಕಾರಾಮನು ಕೂಡಲೇ ಎಚ್ಚತ್ತು ಪಾಂಡುರಂಗನನ್ನು ಸ್ತೋತ್ರ ಮಾಡಿ ನಿನ್ನಾಜ್ಞೆಯಂತೆ ನಾನು ನಡೆಯುವೆನು. ಆದರೆ ಅಜ್ಞ. ಅದನ್ನು ಸರಿಪಡಿಸುವದು ನಿನ್ನ ಕೆಲಸ ಎಂದಂದು ಶ್ಲೋಕವನ್ನು ಬರೆಯತೊಡಗಿದನು.

ತುಕಾರಾಮನು ಶ್ಲೋಕಗಳನ್ನು ಕೀರ್ತನೆ ರೂಪದಲ್ಲಿ ಅಂದು ಜನತೆಗೆ ತಿಳಿಸುತ್ತಿದ್ದನು. ಇವುಗಳನ್ನು ಕೇಳಿ ಅನೇಕರು ಇವು ಅಶುದ್ಧವಾದವುಗಳು, ಇವುಗಳನ್ನು ಕೇಳಬಾರದು ಎನ್ನುತ್ತಿದ್ದರು. ಇನ್ನು ಕೆಲವರು ಪುರಾಣಗಳನ್ನು ಮಾತ್ರ ಪಠಣ ಮಾಡಬೇಕು, ಬೇರೆಯವಗಳನ್ನು ಅನ್ನಕೂಡದು. ತುಕಾರಾಮನ ಕೀರ್ತನೆಗಳು ಪುರಾಣಗಳನ್ನು ನಿಂದಿಸುವಂತಿವೆಯಾದ್ದರಿಂದ ಅವನ ಕೀರ್ತನೆ ಕೇಳಬಾರದು ಎನ್ನತೊಡಗಿದರು. ಅದರಂತೆ ಕೆಲವರು ಒಂದು ದಿನ ಕೂಡಿಕೊಂಡು ಬಂದು ತುಕಾರಾಮನನ್ನು ಕಂಡು ನೀನು ಕೀರ್ತನೆ ಮಾಡಕೂಡದು, ನೀನನ್ನುವ ಶ್ಲೋಕಗಳು ಹೊಸವಿದ್ದು ಪುರಾಣಗಳಿಗೆ ವಿರುದ್ಧವಾಗಿದೆ ಎಂದರು. ಆಗ ತುಕಾರಾಮನು ನಾನು ನನ್ನಿಚ್ಛೆಯಿಂದ ಯಾವ ಶ್ಲೋಕಗಳನ್ನೂ ಅನ್ನುತ್ತಿಲ್ಲ. ಆ ಪಾಂಡುರಂಗನು ಹೇಳಿದವುಗಳನ್ನೇ ಅವನ ಆಜ್ಞೆಯಂತೆ ಅಂದು ಕೀರ್ತನೆ ಮಾಡುತ್ತೇನೆ. ಯಾರ ಮೇಲೂ ನೀವು ನನ್ನ ಕೀರ್ತನೆಯನ್ನು ಕೇಳಿರೆಂದು ಒತ್ತಾಯ ಮಾಡಿಲ್ಲ. ನೀವಾದರೂ ನಿಮ್ಮ ಮನಸ್ಸಿಗೆ ಒಪ್ಪಿಗೆಯಾದರೆ ಮಾತ್ರ ಕೇಳಬಹುದು. ಎಂದು ಶಾಂತರೀತಿಯಿಂದಲೂ ಸೌಮ್ಯ ಶಬ್ದಗಳಿಂದಲೂ ಅಂದನು. ಬಂದವರಲ್ಲಿ ಕೆಲವರು ತುಕಾರಾಮನನ್ನುವದು ನಿಜವದೆ ಎಂದರು. ಮತ್ತಿತರರು "ಪಾಂಡುರಂಗ ಹೇಳತಾನಂತ ಅವನ್ನ ಇವ ಅನತಾನಂತ'' ಎಂದು ಅಣಕಿನ ಧ್ವನಿಯಿಂದ ನಿಂದಿಸುತ್ತಿದ್ದರು.

ಆದರೂ ತುಕಾರಾಮನ ಭಜನೆ ಕೀರ್ತನೆಗಳು ದಿನಾಲೂ ನಡೆಯತೊಡಗಿದವು. ಅವನ ಕೀರ್ತನೆಯು ಮಧುರ ಮತ್ತು ರಸಭರಿತವಾಗಿದ್ದು ಬೋಧಪ್ರದವಾಗಿದ್ದುದರಿಂದ ಜನತೆಯ ಮನಸ್ಸು ಆಕರ್ಷಿಸತೊಡಗಿತು. ಕ್ರಮೇಣ ದಿನಗಳೆದಂತೆ ಹೆಚ್ಚೆಚ್ಚು ಜನ ಕೂಡಹತ್ತಿತು.

ಒಂದು ದಿನ ಭಜನೆಯು ಒಳ್ಳೇ ಭರಾಟೆಯಿಂದ ನಡೆದಿತ್ತು. ಭಜನಾ ಮಂದಿರವು ಭಕ್ತರಿಂದ ತುಂಬಿತ್ತು. ಎಲ್ಲರೂ ತಾಳ, ತಂಬೂರಿ, ಮೃದಂಗ ಗಳಿಂದ ಸಜ್ಜಾಗಿ "ಪಾಂಡುರಂಗ ವಿಠ್ಠಲ" ಎಂದು ಏಕಕಂಠದಿಂದ ಅನ್ನುತ್ತ ವಾದ್ಯಗಳನ್ನು ಮೇಳೈಸಿದ್ದರು. ಆ ವೇಳೆಗೆ ಒಬ್ಬ ಸ್ತ್ರೀಯು ಒಂದು ಮಗುವಿನ ಶ್ರವವನ್ನು ಹೊತ್ತುಕೊಂಡು ಅಲ್ಲಿಗೆ ಬಂದಳು. ಆಕೆಯ ಕಣ್ಣೀರು ಕಪೋಲಗಳ ಮೇಲಿಂದ ಹರಿದು ಹನಿಯಾಗಿ ಉದುರುತ್ತಿದ್ದವು. ಬಿಗಿದ ಕಂಠದಿಂದ ಎಲೈ ಕಪಟ ಭಕ್ತನೇ, ನಿನ್ನ ಧಜನೆಯನ್ನು ಸಾಕುಮಾಡು. ಸಂಸಾರಿಗಳು ತಮ್ಮ ಸಂಸಾರಗಳನ್ನು ಹಾಳುಮಾಡಿ ನಿನ್ನ ಭಜನಾಮಂದಿ ರಕ್ಕೆ ಬರುವಂತೆ ಮಾಡುವ ಆ ನಿನ್ನ ಮಾಯಾಜಾಲವನ್ನು ಬಿಡು. ನನ್ನ ಪತಿಯಂತೆಯೇ ಅನೇಕ ಹೆಣ್ಣುಮಕ್ಕಳ ಗಂಡಂದಿರು ನಿನ್ನ ಬೋಧನೆಗೆ ಮರುಳಾಗಿ ಇಲ್ಲಿ ಸೇರುವದನ್ನು ಬಂದುಮಾಡು ಎಂದು ಅನ್ನುತ್ತ ತುಕಾರಾಮನ ಹತ್ತಿರ ಬಂದಳು. ಶ್ರವವನ್ನು ಮುಂದೆ ಹಾಕಿ ಇದು ನೋಡು. ನನ್ನ ಮಗನ ಪ್ರಾಣ ಹೋದರ ನನ್ನ ಪತಿಗೆ ಬೇಡ ಇವತ್ತು ಹೋಗಬೇಡಿರಿ. ಮಗುವಿನ ಮೈಯಲ್ಲಿ ಆರಾಮವಿಲ್ಲ. ಜ್ವರ ಬೆಂಕಿಯಾ ಗಿದೆ ಎಂದು ಎಷ್ಟು ರೀತಿಯಲ್ಲಿ ಹೇಳಿಕೊಂಡರೂ ಕೇಳದೇ ಇಲ್ಲಿಗೆ ಬಂದರು. ಮಗುವು ತನ್ನ ಹೆತ್ತಾತನನ್ನು ಸಾಯುವಾಗ ನೆನಸಿ ಪ್ರಾಣಬಿಟ್ಟಿತು. ನನ್ನ ಪತಿ ಸಹಿತ ನೀವು ಭಜಿಸುತ್ತಿರುವದು ಆ ಪಾಂಡುರಂಗನು ನನ್ನ ಮಗ ನನ್ನು ಬದುಕಿಸಬಲ್ಲನೇ ! ಹೇಳು, ತೀವ್ರ ಹೇಳು ಎಂದು ಘಟ್ಟಿಯಾಗಿ ಅಳ ತೊಡಗಿದಳು. ದುಃಖಾಶ್ರುಗಳಿಂದ ತುಂಬಿದ ಆ ಮಗುವಿನ ತಂದೆಯೂ ಶ್ರವದು ಹತ್ತಿರ ಬಂದು ನಿಂತಿದ್ದನು. ಕೂಡಿದ ಜನರು ಇಲ್ಲಿ ಯಾರೂ ಸಂಜೀವಿನಿ ಮಂತ್ರ ಕಲಿತಿಲ್ಲ, ಇಲ್ಲಿಗೆ ತರಬಾರದಿತ್ತೆಂದರು. ಆಗ ತುಕಾ ರಾಮನು "ಬಂಧುಗಳೇ ಹಾಗೇಕನ್ನುವಿರಿ, ಆ ಭಗವಂತನಿಗಾವುದಸಾಧ್ಯ ? ಆತನ ನಾಮಸ್ಮರಣೆಯಂಥ ದಿವ್ಯ ಔಷಧವೂ ನಮ್ಮಲ್ಲಿರುವಾಗ ಸಂಜೀವಿನಿ ವಿದ್ಯೆಯಾಗಲೀ ಔಷಧವಾಗಲೀ ಬೇಕಾಗಿಲ್ಲ."

ಎಲೈ ಬಾಂಧವರೇ ! ಈ ನಮ್ಮ ಶರೀರವು ಬಾಲ, ಯೌವನ, ಮುಪ್ಪು ಮೊದಲಾದ ಅವಸ್ಥೆಗಳಿಗೆ ಒಳಗಾಗಿ ಯಾವಾಗಲಾದರೂ ಸಾವು ಹೊಂದ ತಕ್ಕದ್ದೇ. ಆದಕಾರಣ ಚಿಕಿತ್ಸೆ ಮಾಡಿ ನಿಷ್ಪ್ರಯೋಜನಪಡುವದಕ್ಕಿಂತ ಭಗವಂತನ ನಾಮವೆಂಬ ರಸಾಯನವನ್ನು ಸೇವಿಸಿ ಪುನರ್ಜನ್ಮ ರಹಿತ

ವಾದ ಗತಿಯನ್ನು ಹೊಂದುವದುತ್ತಮ. ಕಾರಣ ನಾವೆಲ್ಲರೂ ಒಂದೇ ಮನಸ್ಸಿನಿಂದ "ವಿಠ್ಠಲ ವಿಠ್ಠಲ" ಎಂದು ಭಜನೆ ಮಾಡೋಣ. ಆಗ ಆ ನಾಮಾಮೃತದ ಮಹಿಮೆಯನ್ನು ಕಾಣುವಿರಿ. ಮನಸ್ಸಿನಲ್ಲಿಯ ವಿಕಲ್ಪನೆಯನ್ನು ಬಿಟ್ಟು ಏಕಚಿತ್ತದಿಂದ ಅದೇ ಅಮೃತಸಂಜಿವಿನಿಯೆಂದು ನಂಬಿ ನುಡಿಯಿರಿ. ಎಂದು ಅನ್ನಲು ಅಲ್ಲಿದ್ದ ಸಮಸ್ತ ಜನರೂ ವಿಠ್ಠಲನಾಮ ಘೋಷವನ್ನು ಪ್ರಾರಂಭಿಸಿದರು. ಆಗ ಆ ಮಗುವು ನಿದ್ರೆಯಿಂದ ಎಚ್ಚತ್ತವರಂತೆ ಚಟ್ಟನೆದ್ದು ಕುಳಿತಿತು. ಈ ಆಶ್ಚರ್ಯವನ್ನು ಅಲ್ಲಿದ್ದವರು ಕಂಡು ಚಕಿತರಾದರು. ಆ ಮಗುವಿನ ತಾಯಿ ಕೂಡಾ ವಿಸ್ಮಯದಿಂದಲೂ ಸಂತೋಷದಿಂದಲೂ ಭ್ರಾಂತಳಾಗಿ ಏನೂ ತೋರದೆ ಕೆಲ ನಿಮಿಷ ಸುಮ್ಮನಿದ್ದು ತರುವಾಯ ತುಕಾರಾಮನನ್ನು ಕುರಿತು, ಮಹಾನುಭಾವನೇ ನನ್ನನ್ನು ಕ್ಷಮಿಸು ದುಃಖದಲ್ಲಿಯ ಅವಿವೇಕದಿಂದ ನಿರ್ದಾಕ್ಷಿಣ್ಯವಾಗಿ ನಿನ್ನನ್ನು ನಿಂದೆಸಿದೆನು- ಅದನ್ನು ಕ್ಷಮಿಸು ಎಂದು ಬೇಡಿಕೊಂಡಳು. ಆಗ ತುಕಾರಾಮನು ತಾಯೀ ಹಾಗೇಕನ್ನುವಿ, ನೀನಾವ ತಪ್ಪು ಮಾಡಿದ್ದಿ? ಅದು ನಿನ್ನ ತಪ್ಪಲ್ಲ. ಆ ಮಗುವಿನ ತಾಯ್ತನದ ತಪ್ಪು. ಅದು ಸಂಸಾರದ ಸಂದುಕಟ್ಟಿನಲ್ಲಿ ಸಿಕ್ಕುಬಿದ್ದಿರುವ ಪ್ರದಿಯೊಬ್ಬರಲ್ಲಿಯೂ ಉಂಟು. ಅದಿರಲಿ ಆ ಪಾಂಡುರಂಗನ ಸ್ತೋಸ್ತ್ರ ಮಾಡು. ನಿನಗೆ ಕಲ್ಯಾಣವಾಗುವದು ಎಂದು ಹೇಳಿದನು.

ಮಾನವರಲ್ಲಿರುವ ಸರ್ವ ಶಕ್ತಿಗಳಲ್ಲಿ ಸಹನ ಶಕ್ತಿಯು ಸರ್ವಶ್ರೇಷ್ಠವಾದದ್ದು. ಇದು ಸಹಜವಾಗಿ ದೊರೆಯಲಾರದು. ಸಂಸಾರದಲ್ಲಿಯ ಅನೇಕ ಸುಖ ದುಃಖಗಳ ಸತ್ವಸ್ವರೂಪವಾದ ಸಹನ ಶಕ್ತಿಯನ್ನು ತುಕಾರಾಮನು ಸ್ವಾಧೀನಪಡಿಸಿಕೊಂಡಿದ್ದರಿಂದಲೇ, ಆ ಮೃತಪಟ್ಟಿದ್ದ ಮಗುವಿನ ತಾಯಿಯು ಅನೇಕ ಅವಾಚ್ಯ ಶಬ್ದಗಳಿಂದ ಬೈಗಳದ ಮಳೆಗರೆದರೂ ಸಹಿಸಿಕೊಂಡನು. ಭಗವಂತನು ತನ್ನ ಭಕ್ತರಿಗಾಗಿ ಬೇಕಾದ್ದನ್ನು ಮಾಡಬಲ್ಲನೆಂಬ ದೃಢ ನಂಬಿಕೆ, ಸರಳ ಸ್ವಭಾವ, ಮತ್ತು ಸಹನಶಕ್ತಿ ಇವುಗಳ ಸಂಯೋಗದಿಂದ ತುಕಾರಾಮನು ವಿಚಿತ್ರ ಚರಿತ್ರೆಯುಳ್ಳವನಾಗಿ ಬೆಳಗಹತ್ತಿದನು.

ಅದೇ ವೇಳೆಗೆ ದೇಹೂ ಗ್ರಾಮದಲ್ಲಿ ಸಾಲೇಮಾಲನೆಂಬ ಪುರೋಹಿತ ಇದ್ದನು. ಅವನಿಗೆ ಶಾಸ್ತ್ರಪರಿಚಯು ಸಾಕಷ್ಟಿದ್ದಿಲ್ಲ. ಆದರೂ ಅವನೂ ತಾನೇ

ಪಂಡಿತನೆಂಬ ಅಹಂಭಾವದಿಂದ ತುಕಾರಾಮನ ಕೀರ್ತಿಯನ್ನು ಕೇಳಿ ಅಸೂಯೆ ಪಡುತ್ತಿದ್ದನು. ತಾನೂ ತುಕಾರಾಮನಂತೆ ಕೀರ್ತಿ ಪಡೆಯಬೇಕೆಂದು ಆಲೋಚಿಸಿ ಕೆಲ ಶಿಷ್ಯರನ್ನು ಕೂಡಿಸಿ ತತ್ತ್ವೋಪದೇಶವನ್ನು ಪ್ರಾರಂಭಿಸಿದನು. ತುಕಾರಾಮನು ರಚಿಸಿದ ಹಲವಾರು ಕೀರ್ತನೆಗಳನ್ನು ಸಂಗ್ರಹಿಸಿ ಅವುಗಳನ್ನು ತಾನೆ ರಚಿಸಿದ್ದೇನೆಂದು ಹೇಳಿಕೊಳ್ಳುತ್ತಿದ್ದನು. ಇಷ್ಟಕ್ಕೆ ಬಿಡದೆ ತುಕಾರಾಮನು, ತಾನು ರಚಿಸಿದ್ದ ಗ್ರಂಥ ಒಂದನ್ನು ಕದ್ದಿರುವನೆಂದೂ, ಅಸ್ಪೃಶ್ಯನಾದ ತುಕಾರಾಮನು ವೇದ ಶಾಸ್ತ್ರಗಳಿಗೆಲ್ಲ ಅಪಾರ್ಥ ಕೊಟ್ಟು ವ್ಯಾಖ್ಯಾನಗಳನ್ನು ಮಾಡುತ್ತಿರುವುದರಿಂದ ವೇದಗಳು ಅಪವಿತ್ರಗೊಂಡು ಹಾಳಾಗುತ್ತವೆ ಎಂದೂ ಆರೋಪ ಹೊರಿಸಿ, ಪ್ರಸಿದ್ಧ ವೇದಶಾಸ್ತ್ರ ಪಂಡಿತರಾದ ರಾಮೇಶ್ವರ ಶಾಸ್ತ್ರಿಗಳನ್ನು ಕರೆಯಿಸಿ ತುಕಾರಾಮನ ಮೇಲಿದ್ದ ಆರೋಪಗಳನ್ನು ಹೇಳಿ ಇವುಗಳ ನ್ಯಾಯನಿರ್ಣಯವಾಗಬೇಕೆಂದು ಅರಿಕೆಮಾಡಿಕೊಂಡನು. ರಾಮೇಶ್ವರ ಶಾಸ್ತ್ರಿಗಳು ಸರಳ ಸ್ವಭಾವದವರೂ ಸನ್ಮಾರ್ಗ ಪ್ರವರ್ತಕರೂ ದೈವಭಕ್ತರಾಗಿಯೂ ಇದ್ದು ನ್ಯಾಯ ನಿಷ್ಠುರರೂ ಇದ್ದರು. ಆದರೂ ಸಾಲೇಮಾಲ ಶಾಸ್ತ್ರಿಯ ದುರ್ಬೋಧನೆಯು ನಿಜವೆಂದು ನಂಬಿ ತುಕಾರಾಮನು ರಚಿಸಿದ ಗ್ರಂಥಗಳನ್ನೆಲ್ಲ ಇಂದ್ರಾಣೀ ನದಿಯಲ್ಲಿ ಚಲ್ಲಬೇಕೆಂದೂ, ಇನ್ಮುಂದೆ ಜನಗಳಿಗೆ ಯಾವ ಬೋಧನೆಗಳನ್ನು ಮಾಡಕೂಡದು, ಎಂದು ತೀರ್ಮಾನಿಸಿದನು.

ತುಕಾರಾಮನು ಅನೇಕ ವರ್ಷಗಳ ವರೆಗೆ ಶ್ರಮಪಟ್ಟು ರಚಿಸಿದ ಕೀರ್ತನದ ಗ್ರಂಥವು ಸಾವಿರಾರು ಜನರ ಸಮ್ಮುಖದಲ್ಲಿ ನದಿಯನ್ನು ಕಂಡಿತು. ಆಗ ತುಕಾರಾಮನ ಮನಸ್ಸು ಬಹು ನೊಂದುಕೊಂಡಿತು. "ಹೇ....ಪಾಂಡುರಂಗಾ ನಿನ್ನಾಜ್ಞೆಯಂತೆ ರಚಿಸಿದ ಗ್ರಂಥವು ಸತ್ಯವೆಂದು ಸಾರಿಹೇಳುವದಾದರೆ, ಆ ನದಿಯ ತಳ ಕಂಡ ಆ ಗ್ರಂಥವನ್ನು ನನಗೆ ಅನುಗ್ರಹಿಸು" ಎಂದು ಗಟ್ಟಿಯಾಗಿ ಅಂದು ಆತನ ನಾಮಸ್ಮರಣೆಯಲ್ಲಿ ಮಗ್ನನಾಗಿ ನಿದ್ರಾಹಾರಗಳನ್ನು ತೊರೆದು ಹನ್ನೆರಡು ದಿನಗಳ ವರೆಗೆ ಅದೇ ನದಿಯ ದಂಡೆಯಮೇಲೆ ಕೂತುಕೊಂಡನು. ಹದಿಮೂರನೇ ದಿನ ಪಾಂಡುರಂಗನು ಪ್ರಸನ್ನನಾಗಿ ಗ್ರಂಥವನ್ನು ನದಿಯಿಂದ ಹೊರಗೆ ತಾನೆ ತಂದು ತುಕಾರಾಮನಿಗೆ ಕೊಟ್ಟು ಆಶೀರ್ವದಿಸಿ ಅಂತರ್ಗತನಾದನು.

ಇದನ್ನು ಕಂಡು ರಾಮೇಶ್ವರ ಶಾಸ್ತ್ರಿಯು ತನ್ನ ಅವಿವೇಕತನಕ್ಕೆ ಖತಿಗೊಂಡು ತುಕಾರಾಮನಿಗೆ ಶರಣಾಗತನಾದನು.

ಹೀಗೆ ತುಕಾರಾಮನು ಕೀರ್ತಿಗೊಂಡು ಬೆಳಗುತ್ತಿರಲು ಪಾಂಡುರಂಗನ ಕೃಪೆಯಿಂದ ದೇವತೆಗಳು ಬಂದು ತುಕಾರಾಮನನ್ನು ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿಕೊಂಡು ವೈಕುಂಠಕ್ಕೆ ಕರೆದೊಯ್ದರು.

---

# ೩. ಸಂತ ತುಳಸೀದಾಸ

ಹಸ್ತಿನಾಪುರದಲ್ಲಿ ಸದಾಚಾರ ಸಂಪನ್ನಶೀಲನಾದ ಆತ್ಮಾರಾಮನೆಂಬ ಬ್ರಾಹ್ಮಣನು ಸತಿಯಿಂದೊಡಗೂಡಿ ಸುಖಸಂಸಾರ ಸಾಗಿಸಿಕೊಂಡಿದ್ದನು. ಆತನಿಗೆ ತುಳಸೀದಾಸನೆಂಬ ಒಬ್ಬ ಮಗನಿದ್ದನು. ಆತ್ಮಾರಾಮನು ಅಕ್ಬರನ ಆಸ್ಥಾನಪಂಡಿತನಾಗಿದ್ದ. ಅಕಬರನಿಂದ ದೊರೆಯುತ್ತಿದ್ದ ವರ್ಷಾಶನದಿಂದ ಸುಖಸಂಸಾರವನ್ನು ಸಾಗಿಸಿಕೊಂಡು, ತನ್ನ ಮಗನಿಗೆ ಬಾಲ್ಯದಲ್ಲಿಯೇ ಸರ್ವ ವಿದ್ಯಾಭ್ಯಾಸವನ್ನು ಮಾಡಿಸಿ ಹದಿನಾರನೇ ವರ್ಷಕ್ಕೇನೇ ರತ್ನಾಬಾಯಿಯೆಂಬ ಸುಂದರ ಯುವತಿಯೊಡನೆ ವಿವಾಹ ಮಾಡಿದನು. ತುಳಸೀದಾಸನು ವಿದ್ಯಾಸಂಪನ್ನನೂ ಸುಶೀಲನೂ ಸುವಿಚಾರಿಯೂ ಆಗಿದ್ದನು. ಈತನು ತನ್ನ ಸತಿಯೊಡನೆ ಸಂಸಾರಮಾಡಿಕೊಂಡು ಇರುತ್ತಿರಲು ದುಷ್ಟ ಜನರ ಸಹವಾಸದಲ್ಲಿ ಬಿದ್ದು ವೇಶ್ಯಾಸಂಗದಲ್ಲಿ ಬಿದ್ದು ಸ್ತ್ರೀಲೋಲುಪನಾಗಿ ವೇಶ್ಯಾಗೃಹದಲ್ಲಿಯೇ ಕಾಲಕಳೆಯಹತ್ತಿದನಲ್ಲದೇ ಕುಡಿಯುವದು ಮೊದಲಾದ ದುಶ್ಚಟಗಳಿಗೂ ಒಳಗಾದನು.

ಆತ್ಮಾರಾಮನು ತನ್ನ ಮಗನ ದುಶ್ಚಟಗಳಿಗೆ ಬೇಸತ್ತು ಸ್ತ್ರೀಲೋಲುಪರಾಗಿ ದುಶ್ಚಟಗಳಿಗೆ ಒಳಗಾಗಿ ಕೆಟ್ಟುಹೋದ ಅನೇಕ ಜನರ ಚರಿತ್ರೆಗಳನ್ನು ಹೇಳಿದನಲ್ಲದೇ ಇನ್ನಿತರ ರೀತಿಯಲ್ಲಿಯೂ ಬುದ್ಧಿ ಹೇಳಿದನಾದರೂ ತುಳಸೀದಾಸನ ಮೇಲೆ ಯಾವ ಪರಿಣಾಮವೂ ಆಗಲಿಲ್ಲ. ಆತ್ಮರಾಮನು ತನ್ನ ಮಗನ ದುಷ್ಕೃತ್ಯಗಳನ್ನು ಕಂಡು ದುಃಖಗೊಂಡು ಸಹಿಸಲಾರದೆ ಸಂಸಾರವನ್ನು ತನ್ನ ಸತಿಗೆ ಒಪ್ಪಿಸಿ ತೀರ್ಥಯಾತ್ರೆಗೆ ಹೊರಟುಹೋದನು.

ಆತ್ಮಾರಾಮನು ತೀರ್ಥಯಾತ್ರೆಗೆ ತೆರಳಿದ ನಂತರ ಆತನಿಗೆ ದೊರೆಯುತ್ತಿದ್ದ ವರ್ಷಾಶನವನ್ನು ಆತನ ಕುಟುಂಬಕ್ಕೆ ಕೊಡುವಂತೆ ಅಕಬರನು ಆಜ್ಞೆ ಮಾಡಿದನು. ಕೆಲ ದಿನಗಳು ಕಳೆಯುತ್ತಿರಲು ತುಳಸೀದಾಸನು ವಿದ್ವಾಂಸನೆಂತಲೂ ಚತುರನೆಂತಲೂ ಬಾದಶಹನು ಕೇಳಿ ತಿಳಿದುಕೊಂಡಿದ್ದನು. ಒಂದು ದಿನ ತುಳಸೀದಾಸನನ್ನು ನೋಡಬೇಕೆಂಬ ತನ್ನ ಬಯಕೆಯನ್ನು ಅಕಬರನು ಮಂತ್ರಿಗಳಿಗೆ ತಿಳಿಸಿದನು. ಆಗ ಕೆಲವರು ಪ್ರಭುಗಳೇ ! ತುಳಸೀದಾಸನು ಸ್ತ್ರೀಲೋಲುಪನು. ಸದಾ ಕಾಮಾಂಧನಾಗಿ ಹೆಂಗಸಿನ ಬಳಿಯಿದ್ದು ಅನೇಕ ದುಶ್ಚಟಗಳಿಗೆ ಒಳಗಾಗಿದ್ದಾನೆ; ಅಂಥವನನ್ನು ತಾವು ಕಾಣುವದರಲ್ಲಿ ಏನೂ ಪ್ರಯೋಜನವಾಗಲಾರದು, ಎಂದು ಹೇಳಲು ಆಗ ಅಕಬರನು ನಸುನಕ್ಕು ಆಗಲಿ ಪ್ರತ್ಯಕ್ಷ ನೋಡಿದ ನಂತರ ಎಲ್ಲವೂ ವಿದಿತವಾಗುವದು. ಹೋಗಿಯೇಬರೋಣವೆನ್ನಲು ಮರುದಿನವೇ ರಾಜಾಜ್ಞೆಯಂತೆ ಬಾದಶಹರೂ ಅವರ ಪರಿವಾರವೂ ಸಮೇತ ಸಿದ್ಧವಾಯಿತು. ಪ್ರಮಾಣದ ವಾದ್ಯಗಳು ಬಾರಿಸಲ್ಪಟ್ಟು ಬಾದಶಹರ ಸವಾರಿಯು ಹಸ್ತಿನಾಪುರದತ್ತ ಹೊರಟಿತು.

ಇತ್ತ ಹಸ್ತಿನಾಪುರದಲ್ಲಿಯ ಜನರು ಬಾದಶಹರು ಇಲ್ಲಿಗೇಕೆ ಬರುವರೆಂಬ ಕುತೂಹಲವು ಎಲ್ಲರಲ್ಲಿಯೂ ತುಂಬಿಕೊಂಡಿದ್ದರೆ ತುಳಸೀದಾಸನೊಂದು ಕೊಠಡಿಯಲ್ಲಿ ತನ್ನ ಪತ್ನಿಸಮೇತನಾಗಿ ರತಿಕ್ರೀಡೆಯಲ್ಲಿ ಲೀನನಾಗಿದ್ದನು. ಆ ಹೊತ್ತಿಗೆ ಬಾದಶಹನ ಸವಾರರು ಬಂದು ತುಳಸೀದಾಸನೇ ಬಾದಶಹರು ನಿನಗೆ ಬರಹೇಳಿದ್ದಾರೆ. ತೀವ್ರ ಬಾ, ಎಂದು ಕರೆದರೂ ತುಳಸೀದಾಸನು ಕೊಠಡಿಯಿಂದ ಹೊರಬರಲೇ ಇಲ್ಲ. ಆಗ ಅವನ ತಾಯಿ ಕುಪಿತಳಾಗಿ ಮಗನಿಗೆ ಸಿಟ್ಟುಮಾಡಿ ಕಳಿಸಿಕೊಟ್ಟಳು. ತುಳಸೀದಾಸನು ಕಾಮಾಂಧನಾಗಿದ್ದರಿಂದ ಅಕಬರನೊಡನೆ ನೆಟ್ಟಗೆ ಮಾತುಗಳನ್ನೇ ಆಡಲಿಲ್ಲ. ಆದರೂ ಅಕಬರನು ಸ್ಥಿತಿಯನ್ನು ಸೂಕ್ಷ್ಮದೃಷ್ಟಿಯಿಂದ ನೋಡಿ ಅವರಿಗೆ ಕೊಡುತ್ತಿದ್ದ ವಾರ್ಷಿಕ ವೇತನವನ್ನು ಹತ್ತು ಸಾವಿರದಿಂದ ಹನ್ನೆರಡು ಸಾವಿರಕ್ಕೆ ಏರಿಸುವಂತೆ ಆಜ್ಞೆಮಾಡಿ ತೆರಳಿದನು.

ಅಕಬರನ ಭೆಟ್ಟಿಗೆ ಹೋಗಿದ್ದ ತುಳಸೀದಾಸನು ಮರಳಿಮನೆಗೆ ಬರುವದರೊಳಗಾಗಿ ಅವನ ಹೆಂಡತಿಯಾದ ರತ್ನಾಬಾಯಿಯೂ, ತನ್ನ ತಾಯಿಯೂ

ಬೇನೆಯಿಂದ ಬಳಲುತ್ತಿದ್ದಾಳೆಂಬ ವಾರ್ತೆಯನ್ನು ಕೇಳಿ ಅತ್ತೆಯಿಂದ ಆಜ್ಞೆಯನ್ನು ಪಡೆದು ಮೇಣೆಯಲ್ಲಿ ಕುಳಿತು ತವರೂರಿಗೆ ಹೋದಳು. ತುಳಸೀದಾಸನು ಮನೆಗೆ ಬಂದು ಸತಿಯನ್ನು ಕೂಗಲು ಉತ್ತರವಿಲ್ಲ. ತಾಯಿಯನ್ನು ಕೇಳಲು ತವರುಮನೆಗೆ ಹೋದ ವೃತ್ತಾಂತವನ್ನು ಹೇಳಲು ದುಃಖಗೊಂಡ ತುಳಸೀದಾಸನು ಸ್ವಲ್ಪು ತಡ ಮಾಡದೇ ಮನೆಯಿಂದ ಹೊರಬಿದ್ದನು. ಮಾವನ ಊರಿನತ್ತ ಲಗುಬಗೆಯಿಂದ ನಡೆಯಹತ್ತಿದನು. ಸೂರ್ಯಾಸ್ತವಾಗಿ ಎತ್ತ ನೋಡಿದತ್ತ ಅಂಧಃಕಾರವು ಆವರಿಸಿಕೊಂಡಿತ್ತು. ಆದರೂ ಧೈರ್ಯಗುಂದದೆ ನಡೆಯುತ್ತಿರಲಾಗಿ ಮಾರ್ಗದಲ್ಲಿ ಅಡ್ಡಾಗಿ ತುಂಬಿ ಹರಿಯುತ್ತಿದ್ದ ನದಿಯನ್ನು ಲೆಕಿಸದೇ ಈಸಿ ಪಾರಾಗಿ ಊರು ಮುಟ್ಟಿದನು. ಅಷ್ಟೊತ್ತಿಗೆ ಮಧ್ಯರಾತ್ರಿಯಾಗಿತ್ತು. ಮಾವನ ಮನೆಯ ಬಾಗಿಲುಗಳೆಲ್ಲವೂ ಭದ್ರವಾಗಿ ಮುಚ್ಚಿದ್ದವು. ಕಾಮವು ನೆತ್ತಿಗೇರಿದ್ದರಿಂದ ಹೇಗಾದರೂ ಮಾಡಿ ಮನೆಯ ಒಳಗೆ ಹೋಗಬೇಕೆಂದು ಆಲೋಚಿಸುತ್ತಿರುವಲ್ಲಿ ಸುದೈವದಿಂದ ಗೋಡೆಯ ಮೇಲೊಂದು ಹೆಬ್ಬಾವು ಜೋತಾಡುತ್ತಿರಲು ಅದನ್ನು ಹಿಡಿದು ಮೇಲೇರಿ ಕಿಡಕಿಯಿಂದ ಒಳನುಗ್ಗಿ ಏ....ರತ್ನಾ! ರತ್ನಾ!! ಎಂದು ಘಟ್ಟಿ ಕೂಗಲು ರತ್ನಾಬಾಯಿಯು ಎಚ್ಚತ್ತು ತನ್ನ ಪತಿಯ ಧ್ವನಿಯನ್ನು ಗುರುತಿಸಿ ದೀಪ ಹಚ್ಚಿ ಪತಿಯ ಬಳಿಗೆ ಬಂದಳು. ಆಗ ತುಳಸೀದಾಸನು ಏನು ರತ್ನಾ! ನೀನು ನನ್ನನ್ನು ಬಿಟ್ಟುಬರಬೇಕೇ? ಎಂದೆನ್ನುತ್ತ ಆಲಂಗಿಸಿದನು. ಅದು ರತ್ನಾಬಾಯಿಗೆ ಸರಿಬೀಳಲಿಲ್ಲ. ಮಧ್ಯರಾತ್ರಿಯಲ್ಲಿ ಊರಿಂದೂರಿಗೆ ಬಂದು, ಕಳ್ಳರಂತೆ ಕಿಡಿಕಿಯಿಂದ ಒಳನುಗ್ಗಿ, ಜನರಿಂದ ತುಂಬಿದ ಮನೆಯಲ್ಲಿ ಸ್ವಲ್ಪವೂ ಸಂಕೋಚವಿಲ್ಲದೇ ಕಂಡೊಡನೆ ಕಾಮಾತುರತೆಯಿಂದ ಆಲಂಗಿಸಬೇಕೇ? ಎಂದು ಮನಸ್ಸಿನಲ್ಲಿ ಆಲೋಚಿಸಿ ಪತಿಯ ಮನಸ್ಸಿಗೆ ನೋವುಂಟಾಗಬಾರದೆಂದು ಕೈಮುಗಿದು ಎದುರು ನಿಂತು ನಾಥಾ, ಕಾಮದೇವನ ವ್ಯಾಮೋಹಕ್ಕೆ ಒಳಪಟ್ಟು ಶಾಂತಿಯನ್ನು ತೊರೆದರೆ ಮಾನವನು ಮತಿಗೆಡದೆ ಉಳಿಯಬಹುದೇ? ನನ್ನಲ್ಲಿರುವ ವ್ಯಾಮೋಹದ ಕೆಲ ಭಾಗವನ್ನಾದರೂ ಶ್ರೀ ರಾಮಚಂದ್ರ ಮೂರ್ತಿಯಲ್ಲಿ ಡುವದಾದರೆ ನಿತ್ಯಾನಂದದಿಂದ ಸುಖ ದೊರೆಯುವದಿಲ್ಲವೇ? ನಾಥಾ! ಈ ಕಾಮಚಿಂತನೆಯನ್ನು ತೊರೆದು ಶ್ರೀರಾಮಚಂದ್ರನ ಜ್ಞಾನಚಿಂತನೆ ಮಾಡಿ

ದರೆ ಅದೆಷ್ಟು ಭಾಗ್ಯಶಾಲಿಗಳಾಗುವಿರಿ ನೀವು. ಎಂದು ಸತಿಯಾಡಿದ ಮಾತುಗಳಿಂದ ತುಳಸೀದಾಸನಿಗೆ ಜ್ಞಾನೋದಯವಾಯಿತು. ಕಾಮವಾಸನೆಯು ಕರಗಿ ವೈರಾಗ್ಯವು ಮೈದೋರಿತು. ಆ ಕೂಡಲೇ ಸತಿಯ ಪ್ರದಕ್ಷಿಣೆ ಮಾಡಿ ಕೈಮುಗಿದು ನಿಂತು, ಗುರುಸ್ವರೂಪಿಣಿಯಾದ ರತ್ನಾ ಇಂದು ನಿನ್ನಿಂದ ಜ್ಞಾನೋದಯವಾಯಿತು. ಆ ಶ್ರೀರಾಮ ಮೂರ್ತಿಯ ಶರಣಾಗತನಾಗಿ ಅವನನ್ನು ಪ್ರತ್ಯಕ್ಷ ಕಾಣದೇ ಮರಳಿ ಬರಲಾರೆ ಎಂದು ಹೇಳಿ ಅಲ್ಲಿಂದ ಹೊರಟನು. ಆಗ ರತ್ನಾಬಾಯಿಯು ಆಡಿದ್ದೊಂದಾದರೆ ಆದದ್ದು ಮತ್ತೊಂದಾಯಿತು; ಬುದ್ಧಿ ಹೇಳಲು ಹೋದರೆ ಪತಿಯೇ ಬಿಟ್ಟು ಹೊರಟನಲ್ಲಾ ! ಎಂದು ದುಃಖಿಸುತ್ತ ಓಡಿಹೋಗಿ ತುಳಸೀದಾಸನನ್ನು ಅಡ್ಡಗಟ್ಟಿ ಕಾಂತಾ ! ಇದೇನು ವಿಪರೀತ ! ನಾನು ತಮಗೆ ಬುದ್ಧಿ ಹೇಳಿದೆನೆಂದು ನೀವು ಹೀಗೆ ಹೊರಟಿರಾ ! ಹಾಗಿದ್ದರೆ ನನ್ನನ್ನು ಕ್ಷಮಿಸಿರಿ. ನಾನೆಂದೂ ನಿಮಗೆ ಈ ರೀತಿ ಇನ್ನೊಮ್ಮೆ ಹೇಳಲಾರೆ. ಆದರೆ ತಾವು ಮಾತ್ರ ಇನ್ನು ಹೊರಡಬೇಡಿ, ನಿಮ್ಮಿಚ್ಛೆಯಂತೆ ನಡೆಯಲು ನಾನು ಸದಾಸಿದ್ಧಳು. ನಡೆಯಿರಿ, ಮನೆಗೆ ಹೋಗೋಣವೆನ್ನಲು ತುಳಸೀದಾಸನು, ಆಕೆಯನ್ನು ಲಕ್ಷಿಸದೆ ಮುನ್ನಡೆಯಲು ರತ್ನಾಬಾಯಿಯು ಬೇಡಬೇಡ ! ಹೋಗಬೇಡಿರಿ ಮನೆಗೆ ಬನ್ನಿರಿ ಎಂದು ಪತಿಯ ಪಾದಗಳಿಗೆರಗಿದಳು. ಆಗ ತುಳಸೀದಾಸನು ಸತಿಯನ್ನು ಹಿಡಿದೆತ್ತಿ ಆಕೆಯ ಕಣ್ಣೀರೊರಸಿ, ಆಕೆಯನ್ನು ಅಪ್ಪಿ ಭಾಗ್ಯಶಾಲಿನೀ ! ನೀನೇಕೆ ಹೀಗೆ ಚಿಂತಿಸುವಿ, ನಿನ್ನ ಕರುಣೆಯಿಂದ ಇಂದು ವ್ಯಾಮೋಹವನ್ನು ವರ್ಜಿಸಿ ಬ್ರಹ್ಮಾನಂದಕರವಾದ ಭಕ್ತಿಮಾರ್ಗವನ್ನು ಹಿಡಿದಿರುವದು ನಮ್ಮಿಬ್ಬರಿಗೂ ಶ್ರೇಯೋದಕರವಲ್ಲವೆ ? ಶ್ರೀರಾಮಮೂರ್ತಿಯ ದರ್ಶನದ ಹೊರ್ತು ಮತ್ತಾವದನ್ನೂ ಕನಸು-ಮನಸಿನಲ್ಲಿ ಕೂಡ ಬಯಸಲಾರೆ. ತಿಳಿಯಿತೇ. ನೀನಿನ್ನು ತೆರಳು, ಎಂದು ಹೇಳಿ ಹೊರಟುಹೋದನು.

ಪತಿಯ ಅಗಲುವಿಕೆಯಿಂದ ಮೂರ್ಛೆಗೊಂಡು ಬಿದ್ದಿದ್ದ ರತ್ನಾಬಾಯಿಯು ರಾತ್ರಿಯ ತಂಗಾಳಿಯಿಂದ ಎಚ್ಚತ್ತು ಮನೆಗೆ ಬಂದಳು. ಅಷ್ಟೊತ್ತಿಗೆ ಎಂಟು ತಾಸು ರಾತ್ರಿಯಾಗಿದ್ದರಿಂದ ಎಲ್ಲರೂ ನಿದ್ರಾದೇವಿಯ ವಶವಾಗಿದ್ದರು. ಮರುದಿನ ಪ್ರಾತಃಕಾಲ ನಡೆದ ಸಂಗತಿಯನ್ನು ತನ್ನ ತಂದೆ-ತಾಯಿಗಳಿಗೆ ತಿಳಿಸಿ ಪರಿಹಾರೋಪಾಯವನ್ನು ಹುಡುಕಬೇಕೆಂದು ನಿಶ್ಚ

ಯಿಸಿ ತವರು ಮನೆಯವರ ಸಹಾಯದಿಂದ ಬೇಗನೆ ಅಲ್ಲಿಂದ ತೆರಳಿ ಹಸ್ತಿನಾಪುರಕ್ಕೆ ಬಂದು ಮುಟ್ಟಿದಳು. ಅಲ್ಲಿ ತನ್ನ ಅತ್ತೆಯವರಿಗೆ ನಡೆದ ಸಂಗತಿಯನ್ನು ತಿಳಿಸಲು ತುಳಸೀದಾಸನ ತಾಯಿಯು ಬಹು ದುಃಖಗೊಂಡು ತಕ್ಕ ಪರಿವಾರದಿಂದೊಡಗೂಡಿ ಸೊಸೆ ಸಮೇತ ಮಗನನ್ನು ಹುಡುಕುವದಕ್ಕಾಗಿ ಪ್ರಯಾಣ ಬೆಳೆಸಿದರು.

ಇತ್ತ ತುಳಸೀದಾಸನು ಅನೇಕ ಕಾಡುಗಳನ್ನೂ ಕೊಳ್ಳಗಳನ್ನೂ ತುಳಿಯುತ್ತ ಕೆಲದಿನಗಳ ನಂತರ ಕಾಶೀಕ್ಷೇತ್ರಕ್ಕೆ ಬಂದು ಮುಟ್ಟಿದನು. ಅಲ್ಲಿ ಒಬ್ಬ ಸದ್ಭಕ್ತನ ಪರಿಚಯ ಮಾಡಿಕೊಂಡು ಆತನ ಮನೆಯಲ್ಲಿ ವಾಸಿಸತೊಡಗಿದನು. ಅಲ್ಲಿ ದಿನಗಳನ್ನು ಕಳೆದಂತೆ ಶ್ರೀರಾಮಮೂರ್ತಿಯ ದರ್ಶನದ ಹಂಬಲವೂ ಹೆಚ್ಚಾಯಿತು.

ಒಂದು ದಿನ ತುಳಸೀದಾಸನು ನಿತ್ಯದಂತೆ ಪ್ರಾತಃಕಾಲದ ಮುಖಮಾರ್ಜನೆ ಮಾಡಿಕೊಳ್ಳಲು ಆ ಮನೆಯ ಹಿತ್ತಲಲ್ಲಿಯ ಒಂದು ಬಂಡೆಯ ಮೇಲೆ ಕೂತು ಕೈಕಾಲುಗಳನ್ನು ತೊಳೆದುಕೊಳ್ಳಲು ಬ್ರಹ್ಮರಾಕ್ಷಸಿಯೊಂದು ಪ್ರತ್ಯಕ್ಷವಾಗಿ ಎದುರು ನಿಂತು ಎಲೈ ಪೂಜ್ಯನೇ ! ನೀನು ಇಲ್ಲಿ ಹನ್ನೆರಡು ವರ್ಷಗಳಿಂದ ಕಾಲು ತೊಳೆದುಕೊಂಡ ನೀರು ನನಗೆ ತಾಗುತ್ತಲಿದ್ದುದರಿಂದ ಇಂದಿಗೆ ನನ್ನ ಶಾಪ ವಿಮೋಚನೆಯಾಯಿತು. ನಾನಿನ್ನು ತೆರಳುವೆನು ಕಾರಣ ನನ್ನಿಂದ ನಿನಗೇನಾದರೂ ಆಗಬೇಕಾಗಿದ್ದರೆ ತಿಳಿಸು ಪೂರೈಸುವೆನು. ಎನ್ನಲು ಆಗ ತುಳಸೀದಾಸನು ರಾಕ್ಷಸನ ಮಾತಿಗೆ ಆಶ್ಚರ್ಯಪಟ್ಟು ನೆಟ್ಟಗಾಯಿತು. ನೀನು ನನ್ನ ಇಚ್ಛೆಯನ್ನು ಪೂರೈಸಬಲ್ಲೆಯಾ ! ಶ್ರೀರಾಮಚಂದ್ರನನ್ನು ನನಗೆ ದರ್ಶನ ಮಾಡಿಸಬಲ್ಲೆಯಾ ! ಛೇ ಶಕ್ಯವಿಲ್ಲ ! ನಿನ್ನಷ್ಟಕ್ಕೆ ನೀನು ಹೋಗು ಎನ್ನಲು ಆಗಾ ರಾಕ್ಷಸನು ನನ್ನಿಂದ ಶ್ರೀರಾಮಚಂದ್ರನ ದರ್ಶನ ಮಾಡಿಸುವದು ಶಕ್ಯವಿಲ್ಲದಿದ್ದರೂ ದರ್ಶನ ಪಡೆಯುವ ಸಾಧನಗಳನ್ನು ಹೇಳುವೆನು. ಕೇಳು ಗಂಗಾತೀರದಲ್ಲಿ ಇರುವ ಆಸಿಘಾಟದಲ್ಲಿ ಓರ್ವ ಪುರಾಣಿಕನು ಶ್ರೀಮದ್ರಾಮಾಯಣ ಪುರಾಣವನ್ನು ದಿನಾಲು ಹೇಳುತ್ತಿರುವನು. ಅಲ್ಲಿ ಕೇಳಲು ದಿನಾಲು ಆಂಜನೇಯನು ವೃದ್ಧ ಬ್ರಹ್ಮಚಾರಿಯ ರೂಪದಲ್ಲಿ ಶ್ರೀರಾಮ ಕಥಾಶ್ರವಣ ಮಾಡಿಕೊಂಡು ಹೋಗುವನು. ನೀನು ಅಲ್ಲಿಗೆ ಹೋಗಿ ಆ ಮಾರುತಿಯ ಮೊರೆ

ಹೊಕ್ಕರೆ ಆತನು ನಿನ್ನ ಮನೋರಥವನ್ನು ಪೂರೈಸಬಲ್ಲನು, ಎಂದು ಹೇಳಿ ಆ ರಾಕ್ಷಸವು ಹೊರಟು ಹೋಯಿತು.

ತುಳಸೀದಾಸನು ಆ ರಾಕ್ಷಸನ ಮಾತಿನಂತೆ ಸಂಧ್ಯಾ ಕಾಲಕ್ಕೆ ನದಿಯಲ್ಲಿ ಸ್ನಾನಮಾಡಿ ಪುರಾಣ ನಡೆಯುತಕ್ಕ ಸ್ಥಳ ಸೇರಿದನು. ಅಲ್ಲಿ ವೃದ್ಧ ಬ್ರಹ್ಮಚಾರಿಯನ್ನು ಹುಡುಕಿ ಆತನಿಗೆ ತನ್ನ ಮನೋರಥವನ್ನು ತಿಳಿಸಿ ಬಿನ್ನೈಸಿಕೊಂಡನು. ಆಗಾ ಆಂಜನೆಯನು ಆ ಮಾತಿಗೆ ಕಿವಿಗೊಡದೆ ಆ ದಿವಸ ಹೊರಟು ಹೋದನು. ಮರುದಿನವೂ ಆ ಬ್ರಹ್ಮಚಾರಿ ಬರಲು ಅವನಿಗೆ ತುಳಸೀದಾಸನು ಪುನಃ ತನ್ನ ಮನೋರಥವನ್ನು ತಿಳಿಸಿ ಬಿನ್ನೈಸಿಕೊಂಡನು. ಆದರೆ ಆ ದಿನವೂ ಮಾರುತಿಯು ಹಿಂದಿನ ದಿನದಂತೆ ಹೊರಟು ಹೋದನು. ಹೀಗೆ ಅನೇಕ ದಿವಸಗಳು ಕಳೆದನಂತರ ತುಳಸೀದಾಸನನ್ನು ಪರೀಕ್ಷಿಸಿ ನೋಡಿ ಶ್ರೀರಾಮಚಂದ್ರನ ದರ್ಶನಕ್ಕೆ ಯೋಗ್ಯನೆಂದು ಕಂಡುಬಂದ ನಂತರ ಆಂಜನೇಯನು ಶ್ರೀರಾಮಚಂದ್ರನ ದರ್ಶನಮಾಡಿಸುವೆನೆಂದು ಹೇಳಿದನಲ್ಲದೆ ಆತನ ಕಿವಿಯಲ್ಲಿ ರಾಮತಾರಕ ಮಂತ್ರೋಪದೇಶ ಮಾಡಿ ಇದನ್ನು ನೀನು ನಿತ್ಯವೂ ಒಂದುಸಾವಿರದಾ ಒಂದು ಸಲ ಉಚ್ಚರಿಸುತ್ತ ಒಂದುನೂರಾ ಎಂಟು ದಿನಗಳು ಕಳೆದ ನಂತರ ಶ್ರೀರಾಮಮೂರ್ತಿಯು ನಿನಗೆ ದರ್ಶನ ಕೊಡುವನು; ತಿಳಿಯಿತೆ ಎಂದು ಹೇಳಿ ಅಂತರ್ಗತನಾದನು.

ಇತ್ತ ತುಳಸೀದಾಸನನ್ನು ಹುಡುಕುತ್ತ ಹೊರಟ ಹೆಂಡತಿಯಾದ ರತ್ನಾಬಾಯಿಯೂ ಆಕೆಯ ಅತ್ತೆಯೂ ಅನೇಕ ದೇಶಗಳನ್ನು ಸಂಚರಿಸುತ್ತ ಕಾಶಿ ಕ್ಷೇತ್ರಕ್ಕೆ ಬಂದು ಮುಟ್ಟಿದರು. ಆ ವೇಳೆಗೆ ಕ್ಷೇತ್ರ ದರ್ಶನಕ್ಕೆಂದು ಹೊರಟಿದ್ದ ಆತ್ಮಾರಾಮನು ಅಲ್ಲಿಗೆ ಬಂದು ಹೆಂಡತಿ ಸೊಸೆಯರನ್ನು ಕೂಡಿಕೊಂಡನು. ಮೂವರೂ ಕೂಡಿ ಬೀದಿ ಬೀದಿಗಳಲ್ಲಿ ಸಂಚರಿಸಿ ಹುಡುಕಿದರು. ಬಂದು ಗಂಗಾತೀರದಲ್ಲಿ ತುಳಸೀದಾಸರು ಶ್ರೀರಾಮಧ್ಯಾನ ಸಂಪನ್ನರಾಗಿ ಕುಳಿತಿರುವದನ್ನು ಕಂಡು ಆ ಮೂವರೂ ಅಲ್ಲಿಗೆ ಧಾವಿಸಿದರು. ಆಗ ಆತ್ಮಾರಾಮನೂ ಆತನ ಪತ್ನಿಯೂ ಸುತನನ್ನು ಕಂಡು ಮಾತನಾಡಿಸಿ ಮಗೂ ! ಶ್ರೀರಾಮನನ್ನು ಮನೆಯಲ್ಲಿದ್ದು ಕಾಣಬಹುದಿತ್ತಲ್ಲ. ದೇಶ ದೇಶಗಳನ್ನು ತಿರುಗಿದರೆ ಆತನು ದೊರೆಯುವನೆ, ನಮ್ಮನ್ನೂ ನಿನ್ನ ಪತ್ನಿ

ಯನ್ನೂ ಬಿಟ್ಟಿರುವದು ಧರ್ಮವೇ? ನಡೆ ಊರಿಗೆ ಹೋಗೋಣವೆನ್ನಲು ತುಳಸೀದಾಸರು ಶ್ರೀರಾಮ ದರ್ಶನವಾಗುವತನಕ ನಾನೆಲ್ಲಿಗೂ ಬರುವದಿಲ್ಲ ವೆಂದು ಹೇಳಿ ಮಾತಾಪಿತೃಗಳ ಚರಣಗಳಿಗೆರಗಿ ಅಲ್ಲಿಂದ ಹೊರಟುಹೋದನು. ಆಗ ಆತ್ಮಾರಾವನು ದಂಪತಿಗಳು ಬಹು ದುಃಖಗೊಂಡು ಸೊಸೆಯನ್ನು ಕುರಿತು ರತ್ನಾಬಾಯಿ ನಿನಲ್ಲೀ ಇದ್ದು ನಿನ್ನ ಪತಿಯ ಯೋಗಕ್ಷೇಮವನ್ನು ನೋಡಿ ಕೊಂಡಿರು. ಎಂದು ಹೇಳಿ ಆ ದಂಪತಿಗಳು ಗಂಗೆಯಲ್ಲಿ ಪ್ರವೇಶಿಸಿ ಪರಮಾ ತ್ಮನ ಸನ್ನಿಧಾನವನ್ನು ಸೇರಿದರು. ಆಗ ತುಳಸೀದಾಸನು ಮಾತಾ-ಪಿತೃಗಳ ವಿಯೋಗದಿಂದ ಬಹು ದುಃಖಗೊಂಡು ಕಾಲೋಚಿತ ಅಂತ್ಯ ಕ್ರಿಯೆಗಳನ್ನು ನೆರವೇರಿಸಿ ಆಂಜನೆಯನು ಹೇಳಿದಂತೆ ಶ್ರೀರಾಮ ಪುರಾಣದಲ್ಲಿ ತದೇಕಚಿತ್ತ ವಾಗಿ ಕಾಲ ಕಳೆಯುತ್ತಿದ್ದನು. ರತ್ನಾಬಾಯಿಯು ತಾನು ತಂದಿದ್ದ ಹಣ ದಿಂದ ಒಂದು ಛತ್ರವನ್ನು ಕಟ್ಟಿಸಿ ಅದರಲ್ಲಿ ಪತಿಯ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದಳು.

ಶ್ರೀ ಅಂಜಂನೇಯನು ವೈಕುಂಠಕ್ಕೆ ತೆರಳಿ ಶ್ರೀಲಕ್ಷ್ಮೀನಾಯಣನಿಗೆ ಉದ್ಧಂಡ ಪ್ರಣಾಮಗಳನ್ನರ್ಪಿಸಿ ಕೈಮುಗಿದು ನಿಂತು ಹೇ....ಪ್ರಭೋ ಭಕ್ತ ತುಳಸೀದಾಸನಿಗೆ ಶ್ರೀರಾಮರ ಸಂದರ್ಶನ ಭಾಗ್ಯವನ್ನು ಅನುಗ್ರಹಿಸು. ನಾಳಿನ ದಿವಸ ಶ್ರೀರಾಮತಾರಕ ಜನನ ಕೊನೆಯ ದಿನವಿರುವದು. ಅಂದು ನಿನಗೆ ಶ್ರೀರಾಮದರ್ಶನವಾಗುವದೆಂದು ಮಾತುಕೊಟ್ಟಿದ್ದೇನೆಂದು ಅಂಜನೆಯನು ಹೇಳಲು ಆಗ ಶ್ರೀಮನ್ನಾರಾಯಣನು ಹನುಮಂತನನ್ನು ಕುರಿತು ಚಿರಂಜೀವಿ ಯಾದ ಸದ್ಭಕ್ತನೇ! ನಿನ್ನ ಇಚ್ಛೆಯೇ ನನ್ನಿಚ್ಛೆ, ಎಂದು ಹೇಳಿ ಮರುದಿನ ಶ್ರೀರಾಮಚಂದ್ರನು ಸೀತಾದೇವಿ ಲಕ್ಷ್ಮಣಾದಿಗಳು ಕೂಡಿಕೊಂಡು ತುಳಸೀ ದಾಸನಿಗೆ ಪ್ರಸನ್ನನಾಗಲು, ತುಳಸೀದಾಸನು ಪರಮಾನಂದಭರಿತನಾಗಿ ಶ್ರೀ ರಾಮಚಂದ್ರನನ್ನು ಅನನ್ಯ ಭಾವದಿಂದ ಸ್ತುತಿಸಿ ಸಾಷ್ಟಾಂಗ ನಮಸ್ಕಾರ ಮಾಡಿದನು. ಆಗ ಆ ಭಗವಂತನು ಪರಮಭಕ್ತನೇ ನೀನು ಧನ್ಯನು. ನೀನು ನನ್ನನ್ನು ನೆನಸಿದಾಗ ಪ್ರಸನ್ನನಾಗುವೆನು. ನಿನ್ನಿಂದ ಇನ್ನೂ ಅನೇಕ ಕಾರ್ಯ ಗಳು ಆಗಬೇಕಾಗಿದೆ. ಕಾರಣ ಇಂದಿನಿಂದ ನೀನು ನಿನ್ನ ಸತಿಯಾದ ರತ್ನಾ ದೇವಿಯು ಕಟ್ಟಿಸಿದ ಛತ್ರದಲ್ಲಿಯೇ ನಿಂತು ನನ್ನನ್ನಾರಾಧಿಸುತ್ತಿರು. ಎಂದು ಹೇಳಿ ತೆರಳಿದನು.

ತುಳಸೀದಾಸನು ರತ್ನಾಬಾಯಿಯು ಕಟ್ಟಿಸಿದ ಛತ್ರದಲ್ಲಿದ್ದುಕೊಂಡು ಸಾಧುಸಂತರ್ಪಣೆ ಸಂಕೀರ್ತನೆ ಮುಂತಾದ ಸದ್ವಿಚಾರಗಳಲ್ಲಿ ನಿರತನಾಗಿ ಇದ್ದನು. ಆ ಛತ್ರದಲ್ಲಿ ದಿನಾಲೂ ಅನೇಕ ಸಾಧುಜನರು ಭೋಜನ ಮಾಡುತ್ತಿದ್ದರು.

ಒಂದು ದಿನ ಕೆಲಜನ ಸಾಧುಗಳು ಮಠದಲ್ಲಿ ಊಟಕ್ಕೆ ಕೂತಿದ್ದರು. ಅದೇ ಪಂತಿಯಲ್ಲಿ ಮಹಾಪಾಪಿಯೊಬ್ಬನಿದ್ದನು. ಆ ವಿಷಯವನ್ನು ತುಳಸೀದಾಸನಿಗೆ ತಿಳಿಸಲು ಅವರು ಅವನನ್ನು ಕರೆದು ತಮ್ಮ ಹತ್ತಿರ ಕುಳ್ಳಿರಿಸಿಕೊಂಡು, ರಾಮನಾಮ ಮಂತ್ರೋಪದೇಶವನ್ನು ಅವನ ಕಿವಿಯಲ್ಲಿ ಹೇಳಿ, ಅದನ್ನು ಅವನಿಂದ ಹೇಳಿಸಿ ಅಲ್ಲಿ ಕುಳಿತಿದ್ದ ಸಾಧು ಜನರನ್ನು ಕುರಿತು ಈತನು ಇನ್ನು ಪರಿಶುದ್ಧನು ಎಂದು ಹೇಳಲು, ಆಗ ಆ ಸಾಧುಗಳು ತುಳಸೀದಾಸರೇ, ಅದು ಹೇಗೆ ನಂಬುವದು ! ಅವನನ್ನು ಹೊರಗೆ ಹಾಕದಹೊರ್ತು ಭೋಜನ ಮಾಡುವದಿಲ್ಲವೆಂದು ಹೇಳಲು ತುಳಸೀದಾಸನು ಒಂದು ಎಲೆಯಲ್ಲಿ ಅನ್ನವನ್ನು ತೆಗೆದುಗೂಂಡು ವಿಶ್ವನಾಥನ ಸನ್ನಿಧಿಗೆ ತೆರಳಿ ಹೇ....ಶಂಕರಾ ! ಇಗೋ ಇಲ್ಲಿ ಅನ್ನವನ್ನಿಟ್ಟಿರುವೆನು. ಶ್ರೀರಾಮನಾಮವು ಸರ್ವಪಾಪ ಪರಿಹಾರಕವೆಂದು ಸಿದ್ಧಾಂತವಾದಲ್ಲಿ ನೀನೇ ಅನ್ನವನ್ನು ನಿನ್ನ ನಂದಿಕೇಶ್ವರನಿಗೆ ಭುಂಜಿಸುವಂತೆ ಹೇಳು. ಎಂದು ಗಟ್ಟಿಯಾಗಿ ಹೇಳಲು ವಿಗ್ರಹರೂಪಿ ನಂದಿಕೇಶ್ವರನು ಚಟ್ಟನೆದ್ದು ಆ ಅನ್ನವನ್ನುಂಡು ಪುನಃ ಮೊದಲಿನ ಸ್ಥಿತಿಯನ್ನು ಹೊಂದಿದನು. ಆಗ ಆ ಸಾಧುಗಳು ಈ ಆಶ್ಚರ್ಯವನ್ನು ಕಂಡು ತಮ್ಮ ಸಂಶಯ ನಿವಾರಣೆಯಾಯಿತೆಂದು ತಿಳಿದು ಭುಂಜಿಸಿ ತುಳಸೀದಾಸನನ್ನು ಪರಮಭಕ್ತನೆಂದು ಕೊಂಡಾಡುತ್ತ ಹೋದರು.

ಹೀಗೆ ತುಳಸೀದಾಸನ ಕೀರ್ತಿಯು ಎಲ್ಲಕಡೆಯಲ್ಲಿ ವ್ಯಾಪಿಸಿಕೊಂಡಿತು.

ಒಂದು ದಿನ ತುಳಸೀದಾಸನು ಶ್ರೀರಾಮಧ್ಯಾನಸಂಪನ್ನನಾಗಿ ಕುಳಿತಿರಲು ಆ ಹೊತ್ತಿಗೆ ಒಂದು ಮೃತದೇಹವನ್ನು ತುಳಸೀದಾಸರ ಛತ್ರದ ಮುಂದಿನಿಂದ ಹಾಯ್ದು ಸ್ಮಶಾನಕ್ಕೆ ಒಯ್ಯುತ್ತಿದ್ದರು. ರೋಧಿಸುತ್ತ ಹೊರಟಿದ್ದ ಮೃತನ ಹೆಂಡತಿಯ ದೃಷ್ಟಿಯು ತುಳಸೀದಾಸರ ಕಡೆಗೆ ಹೋಯಿತು. ತುಳಸೀದಾಸರ ಕೀರ್ತಿಯನ್ನು ಕೇಳಿ ತಿಳಿದಿದ್ದ ಆಕೆಯು ಕೂಡಲೇ ತುಳಸೀದಾಸರಲ್ಲಿಗೆ ಬಂದು ಅವರ ಪಾದಗಳಿಗೆ ವಂದಿಸಿದರು. ಆಗ ತುಳಸೀ

ದಾಸರು ಧ್ಯಾನದಿಂದ ಎಚ್ಚತ್ತಕೂಡಲೇ ಆಕೆಗೆ "ದೀರ್ಘ ಸುಮಂಗಲೀ ಭವ, ಅಷ್ಟಪುತ್ರವತೀಭವ" ಎಂದಾಶೀರ್ವದಿಸಿದರು. ಆಗಾ ಸುದತಿಯು ದುಃಖಾಶ್ರುಗಳಿಂದ ತುಂಬಿದ ಕಣ್ಣುಗಳು ತುಳಸೀದಾಸರ ಮುಖನೋಡುತ್ತಾ ಸ್ವಾಮೀ ಆಗೋ ಅಲ್ಲಿ ಹೊತ್ತುಕೊಂಡು ಹೋಗುತ್ತಿದ್ದಾರೆ ನನ್ನ ಪತಿಯನ್ನು ಶ್ಮಶಾನಕ್ಕೆ ಎಂದು ಹೇಳಲು ತುಳಸೀದಾಸರು ಏನು! ನಿನ್ನ ಪತಿಯು ಮೃತಪಟ್ಟಿರುವನೇ! ನನ್ನ ನಾಲಿಗೆಯು ಸುಳ್ಳಾಡಿತೇ! ಛೀ ಎಂದೂ ಶಕ್ಯವಿಲ್ಲ. ಶ್ರೀರಾಮಚಂದ್ರನು ತನ್ನಿಚ್ಛೆಯಿಂದ ನನ್ನ ನಾಲಿಗೆಯನ್ನು ಆಡಿಸುವನು. ಅಂದಮೇಲೆ ಸುಳ್ಳಾಗಲು ಎಂದೂ ಶಕ್ಯವಿಲ್ಲ. ತರಿಸು ಶ್ರವವನ್ನು ಎನ್ನಲು ಸತ್ತ ಶ್ರವವನ್ನು ಆತನೆದುರಿಗೆ ತಂದಿಟ್ಟರು. ಆಗ ತುಳಸೀದಾಸನು ಶ್ರೀರಾಮಚಂದ್ರನನ್ನು ಧ್ಯಾನಿಸಿ ಪುಷ್ಪಗಳನ್ನು ಆ ಶ್ರವದ ಮೇಲೆ ಒಗೆಯಲು ಮೃತನು ನಿದ್ರೆಯಿಂದ ಎಚ್ಚತ್ತಾದವನಂತೆ ಎದ್ದು ಕೂತು ಸುತ್ತಲೂ ನೋಡಿ ತುಳಸೀದಾಸರಿಗೆ ವಂದಿಸಿದನು. ಎಲ್ಲರೂ ನೋಡಿ ಆಶ್ಚರ್ಯಚಕಿತರಾಗಿ ತುಳಸೀದಾಸರನ್ನು ಕೊಂಡಾಡುತ್ತ ಹೋದರು.

ಮತ್ತೊಂದುಸಲ ಅರ್ಧರಾತ್ರಿಯಲ್ಲಿ ಕಳ್ಳರು ತುಳಸೀದಾಸರ ಛತ್ರದಲ್ಲಿ ಹೊಕ್ಕು ತಮಗೆ ಬೇಕಾದ ಪದಾರ್ಥಗಳನ್ನು ಕದ್ದು ಹಿತ್ತಲ ಬಾಗಿಲಿಂದ ಓಡಿಹೋಗುತ್ತಲಿದ್ದರು. ಆಗ ಶ್ರೀರಾಮಲಕ್ಷ್ಮಣರು ಸೇವಕವೇಷ ಧರಿಸಿ ಅವರನ್ನು ಹಿಡಿದು ತಂದು ದಾಸರಿಗೊಪ್ಪಿಸಿದರು. ಆಗಾ ದಾಸರು ಆ ಕಳ್ಳರನ್ನು ಕರೆದು ಹತ್ತರ ಕುಳ್ಳಿರಿಸಿ ಯಾಕೆ ಕಳುವುಮಾಡಿದಿರಿ ಬೇಡಿದರೆ ಕೊಡುತ್ತಿದ್ದಿಲ್ಲವೇ? ನಿಮಗಾಗಿದ್ದ ಈ ಛತ್ರದಲ್ಲಿ ನೀವೆ ಕದಿಯಬೇಕೆ? ಹೋಗಲಿ ಬಿಡಿರಿ ನಿಮ್ಮನ್ನು ಹಿಡಿದು ತಂದವರಾರು ಗೊತ್ತೆ! ನೋಡಿರಿ ಅವರನ್ನು ಎಂದು ತುಳಸೀದಾಸರು ಹೇಳಲು ಆ ಕಳ್ಳರು ಆ ಸೇವಕರನ್ನು ನೋಡಲು ಆ ಸೇವಕರು ತಮ್ಮ ನಿಜ ಸ್ವರೂಪವನ್ನು ಆ ಕಳ್ಳರಿಗೆ ತೋರಿಸಿ ಅದೃಶ್ಯರಾದರು. ಆಗಾ ಕಳ್ಳರು ಮಹಾನುಭಾವರೇ! ತಮ್ಮ ದಯದಿಂದ ನಮ್ಮಂಥ ನೀಚರು ಪರಮ ಮೂರ್ತಿಗಳಾದ ರಾಮಲಕ್ಷ್ಮಣರನ್ನು ಕಂಡೆವು. ನಮ್ಮ ತಪ್ಪನ್ನು ಕ್ಷಮಿಸಿ ಉದ್ಧರಿಸಿ ಎಂದು ತುಳಸೀದಾಸರ ಚರಣಗಳಿಗೆ ವಂದಿಸಿ ಅವರೆದುರಾಗಿ ನಿಂತುಕೊಂಡರು. ಆಗ ಅವರಿಗೆ ಶ್ರೀರಾಮ ಮಂತ್ರೋಪದೇಶವನ್ನು ಹೇಳಿಕೊಟ್ಟರು.

ದಿಲ್ಲಿ ಬಾದಶಹನು ಕೂಡ ತುಳಸೀದಾಸರ ಮಹಿಮೆಯನ್ನು ಕೇಳಿ ಅವರನ್ನು ಆದರದಿಂದ ಕರೆಸಿಕೊಂಡು ಮಾನ-ಸನ್ಮಾನಗಳಿಂದ ಸತ್ಕರಿಸಿ ಕೆಲ ದಿನಗಳ ನಂತರ ಬೀಳ್ಕೊಟ್ಟರು. ದಿಲ್ಲಿಯಿಂದ ಹೊರಟು ಅನೇಕ ಕ್ಷೇತ್ರ ಗಳನ್ನು ಸಂದರ್ಶಿಸುತ್ತಲೂ ಅಯೋಧ್ಯಾ, ಅವಂತಿ, ಹರಿದ್ವಾರ, ಗೋಕುಲ, ಬೃಂದಾವನ ಮೊದಲಾದ ಪುಣ್ಯ ಸ್ಥಳಗಳನ್ನು ನೋಡುತ್ತಲೂ ದೇಶದೇಶ ಗಳನ್ನು ಸಂಚರಿಸಿ ಶ್ರೀರಾಮನಾವ ಮಹಿಮೆಯನ್ನು ಜನಕ್ಕೆ ತಿಳಿಸುತ್ತ ಪುನಃ ಕಾಶೀ ಕ್ಷೇತ್ರಕ್ಕೆ ಬಂದು ಅಲ್ಲಿ ಕೆಲದಿನಗಳಿದ್ದು ಅನಂತರ ತನ್ನ ಸತಿಯಿಂದೊ ಡಗೂಡಿ ಪರಮಾತ್ಮನ ದಿವ್ಯ ಸನ್ನಿಧಿಯನ್ನು ಸೇರಿದರು.

---

# ೪. ಶ್ರೀ ಭಕ್ತ ಪುಂಡರೀಕ

ಶ್ರೀ ಪುಂಡರೀಕ ವಿಠ್ಠಲ, ಶ್ರೀ ಪಾಂಡುರಂಗ ವಿಠ್ಠಲ,
ಶ್ರೀ ರುಕ್ಮಾಯಿ ವಿಠ್ಠಲ ನಮೋ ನಮಃ

ಹೇ........ ಭಕ್ತ ಪುಂಡರೀಕ; ನಿನ್ನ ನಾಮುವನ್ನು ಉಚ್ಚರಿಸಿದಂತೆಲ್ಲ ಪುನಃ ಪುನಃ ಉಚ್ಚರಿಸಬೇಕೆಂಬ ಹಂಬಲ ಹೆಚ್ಚಾಗುವದು. ನಿನ್ನ ಭಕ್ತಿ ಭಾಂಡಾರದ ದಿನ ಸಂಪತ್ತಿನಿಂದ ಕಟ್ಟಿದ ಶ್ರೀ ಪಂಢರಪುರ ಕ್ಷೇತ್ರವು ಈ ಕ್ಷೇತ್ರದೊಡನೆ ನಿನ್ನ ನಾಮ ಅಜರಾಮರವಾಗಿ ಉಳಿಯುವಂತೆ ಮಾಡಿದ ನಿನ್ನ ಭಕ್ತಿ ಭಾಂಡಾರಕ್ಕೆ ನಮೋ ಎಂಬೆ.

ಇಂದು "ಚಂದ್ರಭಾಗ"ವೆಂದು ಪ್ರಶಿದ್ಧವಾದ ಭೀಮಾನದಿಯ ತೀರ ದಲ್ಲಿದ್ದ ಒಂದು ಗ್ರಾಮದಲ್ಲಿ ಜಹುನನೆಂಬ ಬ್ರಾಹ್ಮಣನು ತನ್ನ ಪತ್ನಿಯಾದ ಸಾತ್ವಿಕೀದೇವಿಯೊಡನೆ ಸುಖಸಂಸಾರವನ್ನು ಮಾಡಿಕೊಂಡಿದ್ದನು. ಅವ ರಿಗೆ ಯಾವ ಸಂಪತ್ತಿನ ಕೊರತೆಯೂ ಇರಲಿಲ್ಲ. ಆದರೆ ಪುತ್ರ ಸಂತಾ ನದ ಕೊರತೆಯಿಂದ ಅವರ ಮನಸ್ಸು ಒಂದೇಸವನೆ ಕೊರೆಯುತ್ತಿತ್ತು. ಇವರ ಈ ಕೊರತೆಯನ್ನು ಕಂಡು ಕನಿಕರಗೊಂಡ ಓರ್ವ ಯೋಗಿಯು ದರ್ಶನ

ವಿತ್ತು, ಸದ್ಭಕ್ತ ಶಿಖಾಮಣಿಗಳೇ, ನೀವು ಶ್ರದ್ಧಾ ಭಕ್ತಿಯಿಂದ ಶ್ರೀಹರಿಯನ್ನು ಕುರಿತು ವ್ರತವನ್ನಾಚರಿಸಿರಿ. ಆ ಭಕ್ತೋದ್ಧಾರಕನು ನಿಮಗೆ ಪುತ್ರಸಂತಾನವನ್ನು ಕೊಡುವನೆಂದು ಹೇಳಿದ. ಅದನ್ನೇ ಆ ದಂಪತಿಗಳು ಪ್ರಸಾದವೆಂದು ಸ್ವೀಕರಿಸಿ ಭಕ್ತಿಯಿಂದ ಶ್ರೀ ಹರಿಯ ವ್ರತವನ್ನಾಚರಿಸಲಾಗಿ ಆ ರಮಣಿಯು ಗರ್ಭವತಿಯಾಗಿ ನವಮಾಸಗಳನ್ನು ಕಳೆದು ಸುಮುಹೂರ್ತದಲ್ಲಿ ಪುತ್ರನನ್ನು ಹೆತ್ತಳು.

ಆ ಶಿಶುವಿನ ಪ್ರಶಾಂತ ಮುಖಮುದ್ರೆಯಿಂದ ಕಂಗೊಳಿಸುವ ಮುಖಕಮಲದಲ್ಲಿ ಹೊಳೆಯುತ್ತಿದ್ದ ಮನೋಹರ ನಯನಗಳು ಪುಂಡರೀಕಗಳಂತೆ ಕಂಗೊಳಿಸುವದನ್ನು ಕಂಡು ಮಾತಾಪಿತೃಗಳು ಪುಂಡರೀಕನೆಂಬ ನಾಮಕರಣವನ್ನು ಪ್ರೀತಿಯಿಂದ ಮಾಡಿದರು.

ಆ ಸುಕುಮಾರನು ಶುಕ್ಲಪಕ್ಷದ ಚಂದ್ರನಂತೆ ದಿನಗಳೆದಂತೆ ಬೆಳೆಯುತ್ತ ತರುಣಾವಸ್ಥೆಗೆ ಕಾಲಿಟ್ಟನು. ಮಾತಾ ಪಿತೃಗಳು ಮಗನು ಯೌವ್ವನಕ್ಕೆ ಬಂದುದನ್ನರಿತು ಸ್ವಧರ್ಮ ಪದ್ಧತಿಯಂತೆ ಸುಕುಮಾರಿಯೂ ಸುಂದರಳೂ ಆದ ಕನ್ನೆಯನ್ನು ತಂದು ಸುಮುಹೂರ್ತದಲ್ಲಿ ಲಗ್ನ ಮಾಡಿದರು. ಪುಂಡರೀಕನು ವಿದ್ಯಾಸಂಪನ್ನನಾಗಿ ಚತುರನಾಗಿದ್ದರೂ ದುಷ್ಟಜನರ ಸಹವಾಸಕ್ಕೆ ಬಿದ್ದು, ಅದರಲ್ಲಿಯೇ ಆಸಕ್ತಿಯುಳ್ಳವನಾಗಿ ಮನೆಯನ್ನು ಬಿಟ್ಟು ಮಡದಿಯನ್ನೂ ಮಾತಾಪಿತೃಗಳನ್ನೂ ಕನಿಕರವಿಲ್ಲದೆ ಬಯ್ಯುತ್ತ ವೇಶ್ಯಾ ಸಂಗದಲ್ಲಿ ಬಿದ್ದು ವಿಲಾಸಪ್ರಿಯನಾಗಿ ವೇಶ್ಯೆಯರ ಮನೆಯಲ್ಲಿ ಕಾಲ ಕಳೆಯಹತ್ತಿದನು.

ಮಗನ ಈ ದುಷ್ಕೃತ್ಯಗಳನ್ನು ಕಂಡ ಮಾತಾಪಿತೃಗಳು ಬಹು ವ್ಯಥೆಗೊಂಡರು. ಈ ನಡತೆಯಿಂದ ಮಗನನ್ನು ಬಿಡಿಸಲು ಬಹು ಪ್ರಯತ್ನಪಟ್ಟು ನಿರಾಶರಾಗಿ ಕಣ್ಣೀರು ಹಾಕತೊಡಗಿದರು. ಅವರ ಆ ಕಣ್ಣೀರಿನ ಕೋಡಿ ಹರಿಯುವದನ್ನು ಭಕ್ತೋದ್ಧಾರಕನು ಸುಮ್ಮನೇ ನೋಡುತ್ತ ಎಷ್ಟು ದಿನವಿರಬಲ್ಲ ! ತನ್ನ ವ್ರತದಿಂದ ಜನಿಸಿದ ಮಗು ದುರ್ನಡತೆಯುಳ್ಳವನಾದರೆ "ಭಕ್ತೋದ್ಧಾರಕ" ನೆಂಬ ಬಿರುದಿಗೆ ಕಲಂಕ ಬರುವದೆಂದು ಬೆದರಿಥನೋ ಏನೋ ಅಂತು ಅವನನ್ನು ಸನ್ಮಾರ್ಗಿಯನ್ನಾಗಿ ಮಾಡುವ ಹೊಣೆಯನ್ನು ತಾನೇ ಹೊತ್ತುಕೊಂಡನು.

ಒಂದುದಿನ ಪುಂಡರೀಕನು ವೇಶ್ಯೆಯ ಮನೆಯಿಂದ ತನ್ನ ಮನೆಯತ್ತ ಹೊರಟಾಗ ದಾರಿಯಲ್ಲಿ ಕಾಶೀಯಾತ್ರೆಗಾಗಿ ಹೊರಟದ್ದ ಯಾತ್ರಿಕರು ಎದುರಾದರು. ಪುಂಡರೀಕನು ಅವರನ್ನು ಕುರಿತು ನೀವೆಲ್ಲಿಗೆ ಹೋಗುವಿರೆಂದು ಕೇಳಲಾಗಿ ಅವರು ನಾವು ಕಾಶೀ ಕ್ಷೇತ್ರಕ್ಕೆ ಹೊರಟದ್ದೇವೆ. ನೀನೂ ಬರುವೆಯಾ ? ನೋಡು ಕಾಶೀ ವಿಶ್ವನಾಥನ ದರ್ಶನದಿಂದ ಇಹಲೋಕದ ಎಲ್ಲ ಪಾಪ-ಕರ್ಮಗಳು ಬಿಟ್ಟೋಡುವವೆಂದು ಪುರಾಣಗಳು ಹೇಳುತ್ತಿವೆ. ಎಂದು ಹೇಳಿ ಹೊರಟುಹೋದರು. ನೀನೂ ಬರುವೆಯಾ ಎಂಬ ಪ್ರಶ್ನೆ ಕಿವಿಗೆ ಬಿದ್ದ ಕ್ಷಣದಿಂದ ಕಾಶೀ ಕ್ಷೇತ್ರಕ್ಕೆ ಹೋಗಬೇಕೆಂಬ ಆಶೆ ಹುಟ್ಟಿ ಹೆಚ್ಚಾಗತೊಡಗಿತು. ಆಕೂಡಲೇ ಮನೆಗೆ ಬಂದು ಹೆಂಡತಿಗೆ ಆ ಸಂಗತಿಯನ್ನು ತಿಳಿಸಿ ಎರಡು ಕುದುರೆಗಳನ್ನು ತರಿಸಿ ಸತಿ-ಪತಿಗಳಿಬ್ಬರೂ ಅವುಗಳ ಮೇಲೆ ಕುಳಿತು ಹೊರಟುಹೋದರು.

ಕೆಲ ದಿನಗಳ ಪ್ರಯಾಣದ ನಂತರ ಪುಂಡರೀಕ ದಂಪತಿಗಳು ಶ್ರೀ ಕಾಶೀ ಕ್ಷೇತ್ರದ ಮುಂಭಾಗದಲ್ಲಿರುವ ಕುಕ್ಕುಟಮುನಿವರ್ಯನ ಆಶ್ರಮಕ್ಕ ಬಂದು ತಲುಪಿದರು. ಆ ಮುನಿವರ್ಯನ ಪ್ರಭಾವದಿಂದ ಗಂಗಾ-ಯಮುನೆಯರು ಆ ಆಶ್ರಮದಲ್ಲಿ ಪರಿಚಾರಿಕೆಯರಂತೆ ಕೆಲಸ ಮಾಡುತ್ತಿದ್ದರು. ಪುಂಡರೀಕನು ಅವರ ಸೌಂದರ್ಯಕ್ಕೆ ಮೋಹಿತನಾಗಿ ತನ್ನ ಸ್ವಭಾವದಂತೆ ಅವರನ್ನು ಕಂಡು ಇದಾರ ಆಶ್ರಮವು ? ನೀವು ಯಾರು ? ಇಲ್ಲಿರಲು ಕಾರಣವೇನು ? ಎಂದು ಕೇಳಲಾಗಿ ಅವರು, ನಾವು ಯಾರಾದರೇನು ? ಅದರ ಚಿಂತೆ ನಿನಗೇಕೆ ? ಮೇಲಾಗಿ ಮಾತಾ-ಪಿತೃಗಳಿಗೆ ಕಷ್ಟ ಕೊಡುತ್ತಿರುವ ನಿನ್ನಂಥ ನೀಚನ ಮುಖಾವಲೋಕನ ಕೂಡ ಮಾಡಬಾರದು, ಹೀಗಿದ್ದು ನೀನು ಇಲ್ಲಿಗೇಕೆ ಬಂದಿ ? ನಡಿಯಾಚೆಗೆ. ಎಂದು ಅನ್ನಲು ಆಗ ಪುಂಡರೀಕನು ದೈನ್ಯ ಸ್ವರದಿಂದ ನಾನು ದೂರದಿಂದ ಬಂದವನು, ಗೊತ್ತಿಲ್ಲದಿದ್ದರಿಂದ ಕೇಳಿದೆನೆನ್ನಲು, ಆಗ ಅವರು ಇದು ಕುಕ್ಕುಟ ಮುನಿಯ ಆಶ್ರಮ. ನಾವು ಗಂಗೆ-ಯಮುನೆಯರೆಂಬ ದೇವಕನ್ನೆಯರು, ಈ ಮಹನೀಯನ ತಪೋಪ್ರಭಾವಕ್ಕೆ ಒಳಗಾಗಿ ಈತನ ಸೇವೆಯಲ್ಲಿಯೇ ನಿಂತಿರುವೆವು. ಎಂದು ಅವರು ಹೇಳಿದ್ದನ್ನು ಕೇಳಿ ಆಶ್ಚರ್ಯಗೊಂಡು ಪುಂಡರೀಕನು ಅಲ್ಲಿಂದ ತೆರಳಿ ಮುನಿಗಳನ್ನು ಕಂಡು ಎಲೈ ಪೂಜ್ಯನೇ

ಇಲ್ಲಿಂದ ಕಾಶೀಕ್ಷೇತ್ರವು ಇನ್ನೆಷ್ಟು ದೂರವಿರುವದೆಂದೂ ಅಲ್ಲಿಯ ವಿಷಯ ಗಳೇನೆಂದೂ ಕೇಳಲಾಗಿ ಆತನು ನನಗೆ ವಿಷಯಗಳೊಂದೂ ತಿಳಿಯುವು. ಕಾಶಿಯನ್ನು ನಾನೆಂದೂ ನೋಡಿಲ್ಲೆಂದನು. ಆಗ ಪುಂಡರೀಕನು ಅವನ ಮಾತಿಗೆ ಆಶ್ಚರ್ಯಗೊಂಡು ಏನು ಸ್ವಾಮೀ, ಇಷ್ಟು ಸಮೀಪದಲ್ಲಿರುವ ಕಾಶೀಕ್ಷೇತ್ರವನ್ನು ತಾವು ಒಮ್ಮೆಯಾದರೂ ನೋಡಿಲ್ಲವೇನು ? ಇದೆಂತಹ ಕರ್ಮ ಎಂದನು. ಆಗ ಕುಕ್ಕುಟ ಮುನಿಯುಎಲೈ ನಾನು ಎಂದೂ ಕಾಶಿಗೆ ಹೋದವನಲ್ಲ. ನನಗಲ್ಲಿ ಯಾವ ಕೆಲಸವೂ ಇಲ್ಲ. ವೃದ್ಧರಾದ ನನ್ನ ಮಾತಾಪಿತೃಗಳ ಸೇವೆಯಲ್ಲಿಯೇ ನಾನು ತೃಪ್ತಿ ಹೊಂದುತ್ತೇನೆ, ಸುಖಸಂಪತ್ತನ್ನು ಪಡೆಯುತ್ತೇನೆ. ಪ್ರಾಥಃಕಾಲದಲ್ಲಿ ಅವರ ದರ್ಶನದಿಂದ ಕಾಶೀರಾಮೇಶ್ವರ ಕ್ಷೇತ್ರದರ್ಶನದಿಂದಾಗುವ ಪುಣ್ಯಕ್ಕಿಂತಲೂ ಹೆಚ್ಚು ಪುಣ್ಯ ಪಡೆಯುತ್ತೇನೆ. ಅವರೇ ನನ್ನ ದೇವತೆಗಳು. ಎಂದು ಅನ್ನುತ್ತಿರುವ ಷ್ಟರಲ್ಲಿ ಮಾನವರೂಪಿ ಗಂಗೆ ಯಮುನೆಯರು ಅಲ್ಲಿಗೆ ಬಂದು ಎಲೋ ನೀಚಾ ! ಮಾತಾಪಿತೃ ದ್ರೋಹಮಾಡಿದ ನಿನ್ನಂಥ ಪಾಪಾತ್ಮರು ಇಲ್ಲಿರ ಬಾರದು. ಬೇಗನೆ ಇಲ್ಲಿಂದ ಹೊರಡು ಎಂದು ಗದ್ದರಿಸಲು ಪುಂಡರೀಕನು ಆಗ ಬಹು ದುಃಖಗೊಂಡು ತಾನು ಮಾಡಿದ ಕಾರ್ಯಗಳಿಗೆ ಹಳಿಹಳಿಸುತ್ತ ಹೆಂಡತಿಯೊಡನೆ ಸ್ವಗ್ರಾಮಕ್ಕೆ ಮರಳಿಬಂದು, ಮಾತಾಪಿತೃಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ತಾನುಮಾಡಿದ ದುಷ್ಕೃತ್ಯಗಳಿಂದ ತನ್ನನ್ನು ಉದ್ಧರಿಸಿರಿ ಎಂದು ಬೇಡಿಕೊಳ್ಳಲು ಮಾತಾಪಿತೃಗಳಿಗೆ ಮಗನ ಮನಸ್ಸಿನ ಬದಲಾವಣೆಯನ್ನು ಕಂಡು ದುಃಖಪೂರಿತ ಆನಂದದಿಂದ ಕಂಠ ಬಿಗಿದು ಆನಂದಾಶ್ರುಗಳು ಕೆನ್ನೆಯಮೇಲಿಂದ ಕೆಳಗುದುರಿದವು. ಪುತ್ರ ವಾತ್ಸಲ್ಯ ಅಂತಃಕರಣಪೂರಿತ ಪ್ರೇಮದಿಂದಲೂ ಮಗನ ತಲೆಯಮೇಲೆ ಕೈಯಿಟ್ಟು ಆಶೀರ್ವದಿಸಿ ಮೈದಡವಿ, ಮೇಲೆತ್ತಿ ಮಗು, ಗತಿಸಿದ ವಿಷಯಕ್ಕಾಗಿ ವ್ಯಥೆ ಪಡಬಾರದೆಂದು ಸಂತೈಸಿದರು. ಆಗ ಎಲ್ಲರೂ ಪ್ರೇಮದಿಂದೊಡಗೂಡಿ ಪುನಃ ಕಾಶೀಕ್ಷೇತ್ರಕ್ಕೆ ಹೋಗುವದನ್ನು ನಿಶ್ಚಯ ಮಾಡಿದರು. ಆಗ ಪುಂಡ ರೀಕನು ತೊಟ್ಟಿಲಗಳನ್ನು ಸಿದ್ಧಪಡಿಸಿ ಅದರಲ್ಲಿ ಮಾತಾಪಿತೃಗಳನ್ನು ಕೂಡ್ರಿಸಿ ತಾನೂ ತನ್ನ ಸತಿಯೂ ಪರಮ ಭಕ್ತಿಯಿಂದ ತೊಟ್ಟಿಲಗಳನ್ನು ಹೊತ್ತು ಮಾರ್ಗದಲ್ಲಿ ಹತ್ತಿದ ಅನೇಕ ಕ್ಷೇತ್ರಗಳನ್ನು ಸಂದರ್ಶಿಸುತ್ತ ಕೆಲ ಧಿನಗಳ

ಸಂಚಾರದ ನಂತರ ಪುನಃ ಕುಕ್ಕುಟಮುನಿಯ ಆಶ್ರಮಕ್ಕೆ ಬಂದು ಮುಟ್ಟಿದನು.

ಈ ಹಿಂದೆ ಕಡುಪಾಪಿಯೂ, ಮಾತಾಪಿತೃದ್ರೋಹಿಯೂ ಎಂದು ತುಚ್ಛ ಮಾಡಿ ಆಶ್ರಮದಿಂದ ಹೊರದಬ್ಬಿದ ದೇವಕನ್ಯೆ ಗಂಗೆ-ಯಮುನೆಯರೂ ಕುಕ್ಕುಟಮುದಿಯೂ ಪ್ರೇಮದಿಂದ ಬರಮಾಡಿಕೊಂಡು ಮಾನ ಮರ್ಯಾದೆ ದೆಗಳಿಂದ ಸನ್ಮಾನಿಸಿ ನೀನು ತಪಪ್ರಭಾವದಿಂದ ಜಗತ್ತಿಗೆ ಮಾರ್ಗದರ್ಶಕನಾಗಿ ಬಾಳಿ ಕೀರ್ತಿವಂತನಾಗೆಂದು ಹರಿಸಿ ಆಶೀರ್ವದಿಸಿದರು. ಪುಂಡರೀಕನು ಅವರ ಆಶೀರ್ವಾದವನ್ನು ಸ್ವೀಕರಿಸಿ, ಸಂತೋಷಭರಿತನಾಗಿ ಕಾಶಿಗೆ ಹೋಗಿ ವಿಶ್ವನಾಥನ ದರ್ಶನ ತಕ್ಕೊಂಡು ಸ್ವಗ್ರಾಮಕ್ಕೆ ಬಂದು ತಂದೆ-ತಾಯಿಗಳ ಸೇವೆಯಲ್ಲಿ ನಿರತನಾದನು.

ಇತ್ತ ಭಕ್ತೋದ್ಧಾರಕನಾದ ಶ್ರೀಹರಿಯು ಪುಂಡರಿಕನ ಮಾತಾ-ಪಿತೃಗಳಲ್ಲಿಯ ಸೇವೆಯ ದಿಷ್ಠೆಯನ್ನು ಪರೀಕ್ಷಿಸಬೇಕೆಂದು ಯೋಚಿಸಿ ಒಂದು ದಿನ ಪುಂಡರೀಕನು ಮಾತಾ-ಪಿತೃ ಸೇವೆಯಲ್ಲಿ ನಿರತನಾಗಿದ್ದ ಹೊತ್ತು ಸಾಧಿಸಿ ಶ್ರೀಹರಿಯು ಪುಂಡರೀಕನ ನಿವಾಸ ಸ್ಥನಕ್ಕೆ ಬಂದು "ಭಕ್ತ ಪುಂಡರೀಕ ನಿನ್ನ ಭಕ್ತಿಗೆ ಮೆಚ್ಚಿದೆನು. ನೀನು ಬೇಕಾದ ವರ ಕೇಳಿಕೋ. ನಾನು ಶ್ರೀಹರಿಯು" ಎಂದು ಹೇಳಿದನು. ಆಗ ಪುಂಡರೀಕನು ಅವನ ಕಡೆ ಕಣ್ಣೆತ್ತಿ ಸಹ ನೋಡದೆ ನೀವು ಯಾರಾದರೇನು ? ನನಗೀಗ ಸವಡಿಲ್ಲ. ಮೇಲಾಗಿ ಮನೆಗೆ ಬಂದ ಅತಿಥಿಗಳಿಗೆ ಪದ್ಧತಿಯಂತೆ ಮರ್ಯಾದೆ ಮಾಡುವದಕ್ಕೂ ಈ ನನ್ನ ಸೇವೆ ಮುಗಿಯುವವರೆಗೆ ಸಾಧ್ಯವಿಲ್ಲ. ನೀವು ನಿಂತುಕೊಳ್ಳಿರಿ. ಎಂದು ಮಗ್ಗಲಲ್ಲಿದ್ದ ಇಟ್ಟಿಗೆಯನ್ನು ಎಸೆದು ಪುನಃ ಮಾತಾ-ಪಿತೃ ಸೇವೆಯಲ್ಲಿ ನಿರತನಾದನು. ಆಗ ಪಾಂಡುರಂಗನು ಪುಂಡರೀಕನ ಏಕನಿಷ್ಠಾ ಸೇವೆಯನ್ನು ಕಂಡು ಸಂತೋಷದಿಂದ ಅವನೊಗೆದ ಇಟ್ಟಿಗೆಯ ಮೇಲೆ ನಿಂತುಕೊಂಡನು.

ಪುಂಡರೀಕನು ಕೆಲಹೊತ್ತಿನ ಮೇಲೆ ತನ್ನ ಸೇವೆ ಮುಗಿಸಿ ಹೊರಳಿ ಶ್ರೀಹರಿಯ ಕಡೆ ನೋಡಿದ. ಆ ಭಕ್ತವತ್ಸಲನು ತನ್ನ ನಿಜರೂಪದಿಂದ ನಿಂತಿದ್ದ. ದಿವ್ಯ ಮಂಗಳಮೂರ್ತಿ ಕಂಗೊಳಿಸುತ್ತಿದ್ದಾನೆ. ಆಗ ಪುಂಡರೀಕನು ಪ್ರಭೋ, ಕ್ಷಮಿಸು. ತಿರುಕನಂತೆ ಇಷ್ಟೊತ್ತು ನಿನ್ನನ್ನು ನಿಲ್ಲಿಸಿದ್ದಕ್ಕಾಗಿ ಕ್ಷಮಿಸು ಎನ್ನುತ್ತ ಚರಣಗಳಿಗೆ ಅಡ್ಡಬಿದ್ದು ಬೇಡಿಕೊಳ್ಳಲು ಆ

ಮಂಗಳಮೂರ್ತಿಯು ಪುಂಡರೀಕನ ಭುಜದಮೇಲೆ ಕೈಯಿಟ್ಟು ಎತ್ತಿ ಅಪ್ಪಿಕೊಂಡು, ಭಕ್ತಾ ಪ್ರತ್ಯಕ್ಷ ದೇವತೆಯಂತಿರುವ ಮಾತಾಪಿತೃಗಳ ಸೇವೆಯಲ್ಲಿ ಮೈಮರೆತು ನನ್ನನ್ನು ಅಲಕ್ಷಿಸಿದರೆ ತಪ್ಪಿಲ್ಲವೆಂದು ಪುಂಡರೀಕನನ್ನು ಸಂತೈಸಿ, ಭಕ್ತಾ ನಿನ್ನ ಏಕನಿಷ್ಠಾ ಭಕ್ತಿಗೆ ಮೆಚ್ಚಿದೆ. ವರ ಕೇಳಿಕೊ ಕೊಡವೆನೆನಲು,

ಹೇ....ಪರಮಾತ್ಮಾ, ಪರಮಪಾವನನಾಮಾ, ಪರಂಧಾಮಾ, ನಿನ್ನ ದಿವ್ಯಚರಣ ದರ್ಶನದಿಂದ ನಾನು ಕೃತಾರ್ಥನಾದೆನು. ನಾನು ಕೇಳುವದಾದರೂ ಏನಿದೆ ಈಗ ನಾನು ನೋಡುತ್ತಿರುವ ನಿನ್ನ ಈ ದಿವ್ಯದರ್ಶನವೇ ಈ ರೂಪವೇ ಮಂಗಳಕರವಾದ ವಿಗ್ರಹರೂಪದಿಂದ ಎಂದೆಂದಿಗೂ ಎಲ್ಲರಿಗೂ ಅನುಗ್ರಹಿಸುತ್ತಿರಬೇಕು, ಇದೇ ನನ್ನ ಬಯಕೆ ಎಂದು ಬೇಡಿಕೊಂಡನು. ಆಗಲೇ ಆ ಕ್ಷಣದಲ್ಲೇ ಆ ಶ್ರೀಹರಿಯು ಅದೇ ಸ್ಥಳದಲ್ಲಿ ಅದೇ ಇಟ್ಟಿಗೆ ಮೇಲೆ ನಿಂತು, ಕಟಿಹಸ್ತನಾಗಿ ರುಕ್ಮಿಣೀ ಸಮೇತನಾಗಿ ಭಕ್ತ ಪುಂಡರೀಕನ ಬೇಡಿಕೆಯಂತೆ ವಿಗ್ರಹರೂಪ ತಾಳಿದನು.

ಇಟ್ಟಿಗೆಮೇಲೆ ನಿಂತಿದ್ದರಿಂದ ವಿಠ್ಠಲನೆಂತಲೂ, ಪಾಂಡುವರ್ಣದಲ್ಲಿ ಕಂಡದ್ದರಿಂದ ಪಾಂಡುರಂಗನೆಂತಲೂ, ಪುಂಡರೀಕನ ಮನದ ಇಚ್ಛೆಯಂತೆ ವಿಗ್ರಹರೂಪ ಧರಿಸಿದ್ದರಿಂದ ಪುಂಡರೀಕವರದರನೆಂದೂ, ಮುಂದೆಯೂ ವಿರಾಜಿಸುವನು.

---

## ೫. ಭಕ್ತ ಗೋರಾ ಕುಂಬಾರ

ಪೂನಾ ಪಟ್ಟಣಕ್ಕೆ ಸಮೀಪದಲ್ಲಿದ್ದ ತದೋಕಿಯ ಗ್ರಾಮದಲ್ಲಿ ಗೋರಾ ಕುಂಬಾರನೆಂಬ ಪರಮ ಸದ್ಭಕ್ತನು ವಾಸವಾಗಿದ್ದನು. ಆತನು ಸದಾಕಾಲದಲ್ಲಿಯೂ ಶ್ರೀ ಪಾಂಡುರಂಗ ವಿಠಲನನ್ನು ಧ್ಯಾನಿಸುತ್ತಿದ್ದನು. ಎಂಭತ್ತುನಾಲ್ಕುಕೋಟಿ ಜೀವರಾಶಿಗಳಿಗೂ ಭಗವಂತನು ಅನ್ನ ನೀರುಗಳನ್ನಿಟ್ಟು ರಕ್ಷಿಸುವನೆಂಬ ದೃಢಸಂಕಲ್ಪದಿಂದಾತನು ನಿಶ್ಚಿಂತನಾಗಿದ್ದನು. ಅಂತ ಭಗವಂತನ ಪಾದಾರವಿಂದಗಳನ್ನು ಅನನ್ಯ ಭಾವದಿಂದ

ಧ್ಯಾನಿಸುವದರಿಂದ ಈ ಸಂಸಾರವನ್ನು ಸುಖವಾಗಿ ದಾಟಬಹುದೆಂದು ಆಗಾಗ್ಗೆ ಅನ್ನುತ್ತಿದ್ದನು. ಸಂಸಾರವು ಪರಮಾತ್ಮನ ಲೀಲೆಯೆಂದು ಭಾವಿಸಿ ಗೃಹಸ್ಥ ಧರ್ಮವನ್ನವಲಂಬಿಸಿದಾಗ್ಯೂ, ತಾವರೆ ಎಲೆಯಲ್ಲಿಯ ನೀರ ಹನಿಯಂತೆ ಎಲೆಗೆ ಹತ್ತಿಕೊಂಡಿದ್ದರೂ, ಹತ್ತಿಕೊಳ್ಳದಹಾಗೆ ನಿರ್ಲಿಪ್ತನಾಗಿದ್ದನು.

ಗೋರನು ತನ್ನ ಅನುವಂಶಕ ಉದ್ಯೋಗವಾದ ಕುಂಬಾರಿಕೆಯನ್ನು ಮಾಡುತ್ತಿದ್ದನು. ಒಂದುದಿನ ಗೋರನು ಮಡಿಕೆಗಳನ್ನು ತಯಾರಿಸಲು ಬೇಕಾದ ಮಣ್ಣನ್ನು ಹದಗೊಳಿಸುತ್ತಿದ್ದನು. ಅವನ ಪತ್ನಿಯು ನೀರು ತರ ಬೇಕೆಂದು ಆಲೋಚಿಸಿ ಬಾಗಿಲ ಮುಂದಿನ ಅಂಗಳದಲ್ಲಿ ಮಗುವನ್ನಿಳಿಸಿ ಆಡಹಚ್ಚಿದಳು. ಗಂಡನಿಗೆ ಮಗುವನ್ನು ನೋಡತ್ತಿರಲು ಹೇಳಿ ಕೊಡ ತೆಗೆದುಕೊಂಡು ನೀರಿಗೆ ಹೋದಳು. ಗೋರನು ನಿಮಿತ್ಯ ಹಸಿಮಣ್ಣನ್ನು ತುಳಿಯುತ್ತಿದ್ದನೇ ಹೊರತು, ಪಾಂಡುರಂಗನ ಧ್ಯಾನದಲ್ಲಿ ಮಗ್ನನಾಗಿ ಬಾಹ್ಯ ಪ್ರಪಂಚವನ್ನು ಮರೆತು ಚಿತ್ತವನ್ನು ಪರಮಾತ್ಮನ ಚರಣಗಳಲ್ಲಿ ಸ್ಥಿರಗೊಳಿಸಿದ್ದನು. ಆಗ ಆಡುತ್ತಿದ್ದ ಸುಂದರ ಮುದ್ದುಮಗುವು ಅಂಬೆಗಾಲಿನಿಂದ ಹರಿಯುತ್ತ - ಹರಿಯುತ್ತ ಬಂದು ಗೋರನು ತುಳಿಯುತ್ತಿದ್ದ ಮಣ್ಣಿನ ಮುದ್ದೆಯನ್ನೇರಿತು. ತುಳಿಯುತ್ತಿದ್ದ ಗೋರನ ಕಾಲಿಗೆ ಸಿಕ್ಕಿತು. ಎಳೆ ಮಗುವು ಕಾಲಿನ ತುಳಿತಕ್ಕೆ ಸಿಕ್ಕರೆ ತಡೆದೀತೇ ! ಜಿಬ್ಬೆಯಾಗಿ ರಕ್ತ-ಮಾಂಸಗಳು ಹೊರಚೆಲ್ಲಿ ಮಣ್ಣಿನಲ್ಲಿ ಬೆರೆತುಕೊಂಡಿತು. ಎಲುವಿನ ತುಂಡುಗಳು ಮಣ್ಣಿನ ಮುದ್ದೆಯಲ್ಲಿ ಎದ್ದು ಕಾಣುತ್ತಿದ್ದವು.

ಮಣ್ಣು ಹದವಾಯಿತು ! ಮಗು ಸಿಗದಂತಾಯಿತು. ಮಣ್ಣು ಮಡಿಕೆ ಮಾಡಲು ಬಾರದಂತಾಯಿತು ! ಮಗು ಹುಡುಕಿದರೆ ಸಿಗದಾಯಿತು. ಪಾಂಡುರಂಗನ ಭಜನೆ ಹಾಗೆಯೇ ಸಾಗಿತು.

ನೀರಿಗೆ ಹೋದ ಮಗುವಿನ ತಾಯಿ, ಮರಳಿಬಂದು ಕೊಡವಿಳಿವಿಟ್ಟು ಅಂಗಳಕ್ಕೆ ಬಂದು ಮಗನನ್ನು ಹುಡುಕಿದಳು. ಮಗನು ಕಾಣಲಿಲ್ಲ. ಗಂಡನನ್ನು ಕೇಳೋಣವೆಂದು ಗೋರನಲ್ಲಿಗೆ ಬಂದಳು. ಗೋರನ ಭಜನೆ ಮುಗಿದಿರಲಿಲ್ಲ. ರಕ್ತ-ಮಾಂಸ ಎಲುವಿನ ತುಕ್ಕಡಿಗಳಿಂದ ತುಂಬಿದ ಮಣ್ಣಿನ ಮುದ್ದೆಯನ್ನು ಕಂಡು, ಅಯ್ಯೋ ಮಗು ! ಎಂದು ಘಟ್ಟಿಯಾಗಿ ಅರಚಿದಪ್ಪನೆ ನೆಲಕ್ಕೆ ಬಿದ್ದಳು. ಚೀರಿದ ಶಬ್ದದಿಂದ ಸ್ಮೃತಿಯ ಮೇಲೆ ಬಂದ

ಗೋರನು, ಸ್ಮೃತಿ ತಪ್ಪಿದ ಹೆಂಡತಿಯನ್ನು ಕಂಡು ನೆತ್ತಿಗೆ ನೀರು ಬಡೆದು ಉಪಚರಿಸಿದನು. ಸ್ಮೃತಿಗೆ ಬಂದ ಗೋರನ ಹೆಂಡತಿಯು ಎದ್ದು ಕುಳಿತು ಮಗು ನನ್ನನ್ನುಬಿಟ್ಟು ಅಗಲಿದೆಯಾ ತುಂಬಿದ ಮೊಲೆಯನ್ನಾರಿಗೆ ಉಣಿಸಲಿ ಎಂದು ರೋಧಿಸುತ್ತ ಎದೆ ಎದೆ ಬಡಿದುಕೊಳ್ಳತೊಡಗಿದಳು. ಆವರೆಗೂ ಘಟನೆಯ ಕಾರಣಗಳನ್ನರಿಯದ ಗೋರನು ಏನಾಯಿತು ? ಹೀಗೇಕೆ ಅಳುವಿಯೆಂದು ಕೇಳಲು, ಇನ್ನೂ ಏನಾಯಿತೆಂದು ಕೇಳುವಿರಾ ! ಆ ಹಾಳು ವಿಠ್ಠಲನ ಸಂಗ ಮಾಡಿ ಮಗನನ್ನು ತುಳಿದು ಕೊಂದು ಏನಾಯಿತೆಂದು ಕೇಳುವಿರಾ, ಇಂದಿನಿಂದ ಆ ಪಾಪಿ ಪಾಂಡುರಂಗನಿಂದ ನನ್ನ ಮಗನು ಚೂರು ಚೂರಾದಂತೆ ಅವನನ್ನೂ ಚೂರುಮಾಡಿಬಿಡುವೆನು. ಎಂದೆನ್ನುತ್ತ ಎದ್ದು ಮನೆಯಲ್ಲಿಯ ದೇವರ ಜಗಲಿಯ ಮೇಲಿನ ಮೂರ್ತಿಯನ್ನು ಒನಕೆಯಿಂದ ಹೊಡೆಯಹೋದಳು. ಆಗ ಗೋರನು ಆಕೆಯನ್ನು ತಡೆಯಹೋಗಲು ಬೇಡ, ನೀವು ನನ್ನನ್ನು ಮುಟ್ಟಬೇಡಿರಿ. ಮುಟ್ಟಿದರೆ ಆ ನಿನ್ನ ಪಾಂಡುರಂಗನ ಆಣೆ, ಎಂದೆನ್ನಲು ಗೋರನು ಸುಮ್ಮನಾಗಿ ಹಿಂತಿರುಗಿದನು.

ಗೋರನ ಸಂಸಾರವು ಮಗುವಿನ ಮರಣ ದುಃಖದಿಂದ ಸತಿಪತಿಗಳು ಒಬ್ಬರನ್ನೊಬ್ಬರು ಮುಟ್ಟದೆ ಕೆಲ ದಿನಗಳು ಗತಿಸಿದವು. ಗೋರನ ಹೆಂಡತಿಯು ಒಂದು ದಿನ ಏಕಾಂತಕ್ಕೆ ಪತಿಯನ್ನು ಕರೆಯಲು ಗೋರನು ಒಪ್ಪದೆ ನಾರಿಮಣಿ! ಜ್ಞಾಪಕ ಮಾಡಿಕೋ! ಅಂದು ನೀನು ನನ್ನನ್ನು ಮುಟ್ಟಿದರೆ ಪಾಂಡುರಂಗನಾಣೆ ಎಂದು ಅಂದದ್ದು ನೆನಪಿನಲ್ಲಿದೆಯೇ ! ಅಂದಮೇಲೆ ನಿನ್ನನ್ನು ಮುಟ್ಟುವದು ಹೇಗೆ ಸಾಧ್ಯ ಎನ್ನಲು, ಆಗ ಆ ನಾರೀಮಣಿಯು ತನ್ನ ತಪ್ಪಿಗೆ ದುಃಖಗೊಂಡು ವಂಶವು ಕ್ಷೀಣಿಸಿ ಹೋಗುವದೆಂದಾಲೋಚಿಸಿ ಮರುದಿನ ತನ್ನ ತಂದೆಯ ಬಳಿಗೆ ತೆರಳಿ ಎಲ್ಲ ಸಮಾಚಾರವನ್ನು ತಂದೆಗೆ ತಿಳಿಸಿ ತನ್ನ ಸಹೋದರಿಯನ್ನೇ ಕೊಟ್ಟು ಲಗ್ನಮಾಡಬೇಕೆಂದು ಹೇಳಿದಳು. ಆಗ ಆಕೆಯ ತಂದೆಯು ಸಮ್ಮತಿಸಿ ಗೋರನೆಡೆಗೆ ತನ್ನದ್ವಿತಿಯ ಮಗಳ ಲಗ್ನ ಮಾಡಿದನು. ನೂತನ ದಂಪತಿಗಳು ಸ್ವಗ್ರಾಮಕ್ಕೆ ತೆರಳುವಾಗ್ಗೆ ಅಳಿಯನೊಂದಿಗೆ ಮಾವನು ಕುಶಲ ವಾರ್ತೆಗಳನ್ನಾಡುತ್ತ, ನಿನ್ನ ಪತ್ನಿಯರಿಬ್ಬರನ್ನೂ ಒಂದೇಸಮನಾಗಿ ನೋಡಿಕೊಳ್ಳಬೇಕು. ಇಲ್ಲದಿದ್ದರೆ ಪಾಂಡುರಂಗನಾಣೆ ಎಂದನು. ಆಗ ಗೋರನು ಖಿನ್ನಮನಸ್ಸಿನಿಂದ ನಸು

ನಕ್ಕು ಆಗಲಿ, ಪಾಂಡುರಗನ ಕೃಪೆಯಿದ್ದರೆ ಎಲ್ಲ ಪ್ರತಿಬಂಧಗಳು ತಾನಾಗಿ ಹೋಗುವವು ಎಂದು ಚಿಂತಿಸಿ ಆಗಲಿ ಮಾಮಾ ನಿನ್ನಿಷ್ಟದಂತೆಯೇ ನಡೆದು ಕೊಳ್ಳುವೆನು. ಎಂದರುಹಿ ಸತಿಯರೊಂದಿಗೆ ಮನೆಗೆ ಬಂದನು. ಗೋರನು ಅನ್ನ ವಸ್ತ್ರಗಳನ್ನಿಬ್ಬರಿಗೂ ಸರಿಯಾಗಿ ಹಂಚಿಕೊಡುತ್ತ ಬಂದನು. ಹಿರಿಯುವ ಳನ್ನು ಹೇಗೆ ಮುಟ್ಟದಂತೆ ವ್ರತ ನಡೆಸಿಕೊಂಡು ಬಂದಿದ್ದನೋ ಹಾಗೆ ಕಿರಿಯ ವಳನ್ನೂ ಮುಟ್ಟದಂತೆ ವ್ರತ ತೊಡಗಿದನು.

ಒಂದು ದಿನ ಹಿರಿಯುವಳು ಪತಿಯನ್ನು ಕಂಡು, ಕಾಂತಾ ! ನಾನಾ ದರೂ ಪಾಪದಿಂದ ತಮ್ಮನ್ನು ಮುಟ್ಟದಂತಾಯಿತು. ಆದರೆ ನನ್ನ ತಂಗಿಯದೇನಪರಾಧವುಂಟಾಗಿದೆ ? ಆಕೆಯನ್ನೇಕೆ ಮುಟ್ಟಬಾರದು ? ಎಂದು ಹೇಳಲು ಗೋರನು ನಸುನಕ್ಕು ಆಕೆಯಿಂದೇನಪರಾಧವಾಗಿಲ್ಲ, ಆದರೆ ಅಂದು ನಾವು ಬರುವಾಗ ನಿಮ್ಮಪ್ಪನು ನಿಮ್ಮಿಬ್ಬರನ್ನೂ ಒಂದೇ ವಿಧವಾಗಿ ಕಾಣಬೇಕೆಂತಲೂ ಇಲ್ಲವಾದರೆ ಪಾಂಡುರಂಗನ ಆಣೆ ಎಂದು ನಿಮ್ಮಪ್ಪನಾಡಿದ ಮಾತು ನೆನಪಿಲ್ಲವೇ ? ನಾನು ಅದರಂತೆಯೇ ನಡೆದು ಕೊಳ್ಳುತ್ತಿರುವೆನು, ಎಂದು ಅಂದನು. ಅದನ್ನು ಕೇಳಿ ಸಹೋದರಿಯರು ಬಹು ದುಃಖಗೊಂಡರು. ಅದಕ್ಕೆ ಪರಿಹಾರೋಪಾಯವನ್ನು ಆಲೋಚಿಸ ತೊಡಗಿದರು.

ಒಂದುದಿನ ರಾತ್ರಿ ಗೋರನು ಮಲಗಿ ನಿದ್ರಾಪರವಶನಾದಾಗ ಆ ಸಹೋದರಿಯರು ಅವನ ಅಕ್ಕ-ಪಕ್ಕದಲ್ಲಿ ಮಲಗಿ ಅವನ ಕೈಗಳನ್ನೆತ್ತಿ ತಮ್ಮ ಕುಚಗಳ ಮೇಲಿಟ್ಟುಕೊಂಡರು. ಗೋರನು ಆ ಕೂಡಲೇ ಎಚ್ಚತ್ತು ನಡೆದ ಕಾರ್ಯವನ್ನು ಕಂಡು ಖತಿಗೊಂಡು ಕಾಮಾಂಧತೆಯಲ್ಲಿ ಕಾರ್ಯ ಗಳು ಕೆಟ್ಟು ಹೋದವು. ಅದಕ್ಕಾಗಿ ತಕ್ಕ ಪ್ರಾಯಶ್ಚಿತಬೇಕೆಂದು ಅನ್ನುತ್ತ ಆಕೂಡಲೇ ತನ್ನ ಎರಡೂ ಕೈಗಳನ್ನು ಕತ್ತರಿಸಿಕೊಂಡನು. ಆಗ ಆ ಸಹೋದರಿಯರು ತಮ್ಮಿಂದಾದ ಅನರ್ಥಕ್ಕೆ ಬಹು ದುಃಖಗೊಂ ಡರು. ಆಗ ಗೋರನು ತನ್ನ ಸತಿಯರನ್ನು ಕುರಿತು ಮಾನಿನಿಯರೇ ! ಚಿಂತಿಸಬೇಡಿರಿ. ಸರ್ವ ರಕ್ಷಕನಾದ ಆ ರಮಾರಮಣನು ಆಶ್ರಿತ ವತ್ಸ ಲನೂ ದಯಾಸಾಗರನೂ ಇದ್ದಾನೆ. ಭಕ್ತರ ಎಲ್ಲ ಇಷ್ಟಾರ್ಥಗಳನ್ನೂ ಕೊಟ್ಟು ಸಲಹುವನು. ಅದಕ್ಕಾಗಿ ನಾವೇಕೆ ಚಿಂತಿಸಬೇಕು. ನಿಶ್ಚಿಂತೆಯಿಂದ ಶ್ರೀ

ಪಾಂಡುರಂಗನನ್ನು ಧ್ಯಾನಿಸುತ್ತಿರಿರಿ, ಎಂದು ಉಪದೇಶಮಾಡಿ ಅವರನ್ನು ಸಮಾಧಾನಪಡಿಸಿದನು.

ಕೆಲದಿನಗಳ ತರುವಾಯ ಆಷಾಢ ಶುದ್ಧ ಏಕಾದಶಿ ಸಮೀಪಿಸಿತು. ಪಂಡರಪುರದಲ್ಲಿ ಆಷಾಢ ಶುದ್ಧ ಏಕಾದಶಿಯ ದಿವಸ ಬ್ರಹ್ಮೋತ್ಸವಾದಿ ಮಹಾವೈಭವಗಳು ನಡೆಯುವವು. ಅಂದು ಪರಮಸಾಧುಗಳಾದ ಹರಿ ಭಕ್ತರನೇಕರು ಬರುವರು. ಆ ಭಕ್ತರಲ್ಲಿ ತಾನೂ ಕೂಡಿಕೊಂಡು ಪಂಡರಿ ನಾಥನ ದಿವ್ಯ ಸನ್ನಿಧಿಯಲ್ಲಿ ಸಮೃದ್ಧವಾಗಿ ನಡೆಯುವ ಭಜನೆಯಲ್ಲಿ ತಾನೂ ಕೂಡಿಕೊಳ್ಳಬೇಕೆಂದೆಣಿಸಿ, ಗೋರನು ಸತಿಯಿಂದೊಡಗೂಡಿ ಪಂಡರಪುರಕ್ಕೆ ಪ್ರಯಾಣ ಬೆಳೆಸಿದನು. ದಾರಿಯಲ್ಲಿ ಹತ್ತುವ ಅನೇಕ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ ದರ್ಶನ ಪಡೆಯುತ್ತ ಪಂಡರಪುರಕ್ಕೆ ಬಂದು ಮುಟ್ಟಿದನು.

ಅಂದು ಆಷಾಢಶುದ್ಧ ಏಕಾದಶಿ. ಅನೇಕ ಭಕ್ತಜನರು ಬಂದಿದ್ದರು. ದಿವ್ಯ ಮಂಗಳ ಮೂರ್ತಿಯ ದರ್ಶನ ಹೊಂದಿ ಆನಂದಿಸುತ್ತಿದ್ದರು ಪೂಜೆ ಗಳೂ, ದೀಪಾರಾಧನೆಗಳೂ, ಸಾಧು ಸಂತರ್ಪಣೆಗಳೂ, ಭಜನೆಗಳೂ ಸಮೃದ್ಧವಾಗಿ ನಡೆದಿದ್ದವು. ಜ್ಞಾನದೇವ, ನಾಮದೇವ ಮೊದಲಾದ ಮಹಾ ಸದ್ಭಕ್ತರು ಭಜನೆ ಮಾಡುತ್ತ ಆನಂದಪರ ನರ್ತನ ಮಾಡುತ್ತಿ ದ್ದರು. ಎತ್ತ ನೋಡಿದರತ್ತ ಸಂತೋಷದ ತರಂಗಗಳು ಪ್ರವಹಿಸುತ್ತಿದ್ದವು. ಗೋರಾ ಕುಂಬಾರನು ಭಜನೆಯಲ್ಲಿ ಭಾಗವಹಿಸಿದನು. ಎಲ್ಲರ ಕೈಗೂ ತಾಳಗಳು ಬಂದವು. ಗೋರನಿಗೆ ಕೊಡಲಿಲ್ಲ. ಗೋರನು ದುಃಖಗೊಂಡು ನನಗೆ ಕೈಗಳಿಲ್ಲ, ಇಂಥ ಶುಭದಿನದಲ್ಲಿ ಕೈಯಾರೆ ತಾಳ ಹಾಕಿ ಪಂಡರಿ ನಾಥನನ್ನು ಭಜಿಸುವ ಭಾಗ್ಯ ನನಗಿಲ್ಲವಲ್ಲಾ ಎಂದು ಮನಸ್ಸಿನಲ್ಲಿ ಚಿಂತಿಸಿ, ಉಸುರ್ಗರೆದನು. ಇವನ ಚಿಂತೆಯ ಕಾರಣವನ್ನು ಪಂಡರಿನಾಥ ನರಿತುಕೊಂಡನು. ಆತನಲ್ಲಿ ಕರುಣೆಗೊಂಡು ಕೂಡಲೇ ಅನುಗ್ರಹಿಸಿದನು. ಗೋರನಿಗೆ ಕೈಗಳು ದೊರೆತವು. ಕಂಡ ಸದ್ಭಕ್ತರು ಸಂತೋಷಗೊಂಡರು. ಎಲ್ಲರೂ ಕೂಡಿ ಭಜನೆಗಾರಂಭ ಮಾಡಿದರು. ವಿಠ್ಠಲನಾಮ ಸಂಕೀರ್ತ ನೆಯು ಗಗನಮಂಡಲಕ್ಕೆ ಮುಟ್ಟಿತು. "ಜಯ ಪುಂಡರೀಕ ವಿಠ್ಠಲ ಜಯ ಜಯ ವಿಠ್ಠಲ" ಎಂದು ಅನೇಕ ಮುಖಗಳು ಒಮ್ಮೆಲೆ ನುಡಿದವು. ಪಾಂಡುರಂಗನು ಪ್ರತ್ಯಕ್ಷನಾಗಿ ಎಲ್ಲರಿಗೆ ದರ್ಶನವಿತ್ತನು.

ಗೋರನ ಪತ್ನಿಯರು ತಮ್ಮ ಮನೋಭಿಲಾಷೆಯನ್ನು ಪರಮಾತ್ಮನಿಗರುಹಿ ನಮಸ್ಕರಿಸಿ ನಿಂತುಕೊಂಡರು. ಅಂದು ಮಣ್ಣಿನಲ್ಲಿ ಮೃತವಾದ ಮಗುವನ್ನೆತ್ತಿಕೊಂಡು ರುಕ್ಮಿಣೀದೇವಿ ಪ್ರಸನ್ನಳಾದಳು. ಮಗುವನ್ನು ಗೋರಾಕುಂಬಾರನ ಕೈಗೆ ಕೊಟ್ಟು ಪಾಂಡುರಂಗನು ಇಂತೆಂದನು:— ಭಕ್ತಾಗ್ರೇಸರಾ! ನೀನು ಮಹನೀಯನು. ಈ ಶಿಶುವನ್ನು ನಿನ್ನ ಮಡದಿಗೆ ಕೊಡು, ನೀನು ಮುಟ್ಟಕೂಡದೆಂದು ನನ್ನ ಮೇಲಿಟ್ಟ ಆಣೆಗಳನ್ನೀಗ ಪರಿಹರಿಸಿರುವೆನು. ನೀನಿನ್ನು ನಿನ್ನ ಸತಿಯರೊಂದಿಗೆ ಅನುರಾಗದಿಂದಿದ್ದು ಗೃಹಸ್ಥ ಧರ್ಮವನ್ನು ನಿರ್ವಹಿಸುತ್ತಿರು. ನನ್ನ ಸಂಕೀರ್ತನೆಯನ್ನು ಲೋಕದಲ್ಲಿ ಬೆಳಗು ಎಂದು ಹೇಳಿ ಅಂತರ್ಗತನಾದನು. ಗೋರನು ಮಗು ಮತ್ತು ಸತಿಯರಿಂದೊಡಗೂಡಿ ಸ್ವಗ್ರಾಮಕ್ಕೆ ಮರಳಿಬಂದು ಸುಖ ಸಂಸಾರವನ್ನು ಸಾಗಿಸುತ್ತ ಆನಂದದಿಂದಿದ್ದನು.

---

## ೬. ಭಕ್ತ ಪುರಂದರದಾಸರು

ಪೂನಾ ಪಟ್ಟಣದ ಸಮೀಪದಲ್ಲಿದ್ದ ಪುರಂದರವೆಂಬ ಗ್ರಾಮದಲ್ಲಿ ಕೃಷ್ಣಪ್ಪನಾಯಕನೆಂಬ ಸ್ವಾರ್ಥ ಬ್ರಾಹ್ಮಣನು ತನ್ನ ಸತಿಯಾದ ಲಕ್ಷ್ಮೀಬಾಯಿಯೆಂಬ ಮಹಾ ಪತಿವ್ರತಾಶಿರೋಮಣಿಯೊಡನೆ ವಾಸವಾಗಿದ್ದನು. ಇವನು ಮಹಾ ಕೃಪಣನಾಗಿದ್ದನು. ತನ್ನ ತಂದೆ ಮಾಡುತ್ತಿದ್ದ ಚಿನವಾಲಕಿ ವ್ಯವಹಾರವನ್ನು ಮುಂದುವರಿಸಿಕೊಂಡು ಹೋಗುತ್ತಿದ್ದನು.

ಕೃಷ್ಣಪ್ಪನಾಯಕನು ಮಹಾ ಕೃಪಣನೆಂದು ಪ್ರಸಿದ್ಧನಾಗಿದ್ದರಿಂದ ಅವನ ಹತ್ತರ ಯಾರೂ ದಾನಕೇಳಲು ಬರುತ್ತಿದ್ದಿಲ್ಲ; ಬಂದರೂ ಕೊಡುತ್ತಿದ್ದಿಲ್ಲ. ಇವನ ಸ್ವಭಾವ ಹೀಗಿದ್ದರೆ ಇವನ ಹೆಂಡತಿಯ ಸ್ವಭಾವವು ತದ್ವಿರುದ್ಧವಾಗಿತ್ತು; ಆ ಸಾಧ್ವಿಯು ಗಂಡನಿಲ್ಲದ ಹೊತ್ತಿನಲ್ಲಿ ಯಾರಾದರೂ ಮನೆಗೆ ಬಂದು ದಾನ ಕೇಳಿದರೆ ತನ್ನ ಕೈಲಾದಮಟ್ಟಿಗೆ ದಾನಮಾಡದೆ ಹಾಗೇ ಕಳಿಸುತ್ತಿರಲಿಲ್ಲ. ಗಂಡನ ಇಂಥ ಕೃಪಣತನದ ಸ್ವಭಾವವನ್ನು

ದೂರಮಾಡೆಂದು ಶ್ರೀಕೃಷ್ಣ ಪರಮಾತ್ಮನನ್ನು ಸದಾ ಪ್ರಾರ್ಥಿಸುತ್ತಿದ್ದಳು. ಆ ಪತಿವ್ರತಾಶಿರೋಮಣಿಯ ಬೇಡಿಕೆಯನ್ನು ಪೂರೈಸಿ ಕೃಷ್ಣಪ್ಪನಾಯಕನಿಗೆ ಜ್ಞಾನೋದಯವನ್ನುಂಟುಮಾಡಬೇಕೆಂದು ಶ್ರೀಕೃಷ್ಣಪರಮಾತ್ಮನು ಟೊಂಕ ಕಟ್ಟಿದನು.

ಶ್ರೀಕಷ್ಣಪರಮಾತ್ಮನು ವೃದ್ಧ ಬ್ರಾಹ್ಮಣನ ವೇಷಧರಿಸಿ ಕೃಷ್ಣಪ್ಪ ಶೆಟ್ಟಿಯ ಅಂಗಡಿಗೆ ಬಂದನು. ಶೆಟ್ಟಿಯು ಅಂಗಡಿಯಲ್ಲಿ ಲೆಕ್ಕಬರೆಯುತ್ತ ಕೂತಿದ್ದನು. ಆಗ ವೇಷಧಾರಿ ಬ್ರಾಹ್ಮಣನು ಶೆಟ್ಟರೆ ನಾನು ಬಡ ಬ್ರಾಹ್ಮಣನು, ನನ್ನ ಮಗನ ಉಪನಯನ ಮಾಡಬೇಕಾಗಿದೆ, ಕಾರಣ ತಾವು ಸಹಾಯ ಮಾಡಬೇಕೆಂದು ಕೇಳಿಕೊಂಡನು. ಆಗ ಶೆಟ್ಟಿಯು ಈಗ ಸವಡಿಲ್ಲ, ನಾಳೆ ಬನ್ನಿರಿ ಎಂದನು. ಶೆಟ್ಟರೆ ನಾನು ವೃದ್ಧನು, ಪುನಃ ಪುನಃ ಬರುವದು ಆಗುವದಿಲ್ಲ, ಕಾರಣ ನನ್ನ ಬಯಕೆಯನ್ನು ಪೂರೈಸಿದರೆ ಈ ಬಡವನ ಮೇಲೆ ಮಹದುಪಕಾರ ಮಾಡಿದಂತಾಗುವದು ಎಂದನು. ಉಪಕಾರ ಗಿಪಕಾರ ನಾಳೆ ನೋಡೋಣವಂತೆ ಈಗ ನನಗೆ ಸವಡಿಲ್ಲವೆಂದನು ಶೆಟ್ಟಿಯು. ಹೀಗೆ ಆ ವೇಷಧಾರಿ ಬ್ರಾಹ್ಮಣನು ದಿನಾಲು ಶೆಟ್ಟರಂಗಡಿಗೆ ಬರುವದೂ, ಶೆಟ್ಟಿಯು ನಾಳೆ ಬಾ ಎಂದು ಹೇಳುವದು ತಿಂಗಳುಗಟ್ಲೆ ನಡೆಯಿತು. ಆದರೂ ಆ ವೃದ್ಧನು ತಿರುಗಾಡಿ ಬೇಸರಪಟ್ಟು ಬಿಡಲಿಲ್ಲ. ಶೆಟ್ಟಿಯು ಯಾವ ಹೊತ್ತಿಗೆ ಬರಹೇಳುವನೋ ಆ ಹೊತ್ತಿಗೆ ಹಾಜರಿರುತ್ತಿದ್ದನು. ಇವನು ಬಿಡತಕ್ಕವನಲ್ಲ ವೆಂದು ತಿಳಿದುಕೊಂಡು ನಾಯಕರು ಬ್ರಾಹ್ಮಣನನ್ನು ಕಂಡಕೂಡಲೇ ಸಿಡಿ ಮಿಡಿಗೊಂಡು, ಸವೆದು ಸಾಪಾಗಿದ್ದ ತಾಂಬ್ರದ ದುಡ್ಡೊಂದನ್ನು ಬ್ರಾಹ್ಮಣ ನಿಗೆ ಕೊಟ್ಟು ಇನ್ನು ನೀನು ಬರಬೇಡ, ಇಷ್ಟೇ ನಾನು ಕೊಡತಕ್ಕ ದಾನವು, ಹೊರಡು ಇಲ್ಲಿಂದ ಎಂದು ಗಂಟುಮೋರೆ ಮಾಡಿ ಹೇಳಿದನು ಬ್ರಾಹ್ಮಣನು. ನಾಯಕರು ಕೊಟ್ಟಿದ್ದ ಸವಕಳಿದುಡ್ಡನ್ನು ಕೈಯಿಂದ ಹಿಡಿಯದೆ ಅದನ್ನು ಅಲ್ಲಿಯೇ ಬಿಟ್ಟು ಸೀದಾ ನಾಯಕರ ಮನೆಗೆ ಬಂದನು. ನಾಯಕರ ಹೆಂಡತಿ ಯಾದ ಲಕ್ಷ್ಮೀಬಾಯಿಯು ಅಡಗೀ ಕೆಲಸದಲ್ಲಿ ತೊಡಗಿದ್ದಳು. ಆ ಬ್ರಾಹ್ಮಣನು ಭಿಕ್ಷಾಂದೇಹಿ ಎಂದು ಕೂಗಿದನು. ಕೂಡಲೇ ಲಕ್ಷ್ಮೀಬಾಯಿಯು ಅಕ್ಕಿಯನ್ನು ತಂದು ನೀಡಹೋದಳು; ಆಗ ಬ್ರಾಹ್ಮಣನು ತಾಯಿ ಅಕ್ಕಿ ಯನ್ನು ತಗೊಂಡು ಏನುಮಾಡಲಿ, ನನ್ನ ಮಗನ ಮುಂಜಿಯನ್ನು ಮಾಡ

ಬೇಕಾಗಿದೆ. ಮುಂಜಿಯ ಕಾಲವು ಮೀರುತ್ತ ಬಂದಿದೆ. ಕಾರಣ ಮುಂಜಿಗೆ ತಕ್ಕಷ್ಟು ದುಡ್ಡು ಕೊಟ್ಟರೆ ಸಾಕು. ತಮ್ಮ ಉಪಕಾರವನ್ನು ಜನ್ಮಜನ್ಮಾಂತರವೂ ಮರೆಯಲಾರೆ ಎಂದನು. ಆಗ ಲಕ್ಷ್ಮೀಬಾಯಿಯು, ಗುರುಗಳೇ ತಮಗೆ ಅಷ್ಟು ದುಡ್ಡು ಕೊಡಲು ನನ್ನಹತ್ತಿರವೇನಿದೆ? ಈ ಮಂಗಲಸೂತ್ರ ಮತ್ತು ಮೂಗತಿಯ ಹೊರ್ತು ನನ್ನಲ್ಲೇನೂ ಇಲ್ಲವಲ್ಲ. ಹೇ.......ಕೃಷ್ಣಾ! ಇಂಥ ಪ್ರಸಂಗವನ್ನೇಕೆ ತಂದೊಡ್ಡಿದಿ ನನ್ನ ಗಂಡನನ್ನು ಕೇಳಿದರಂತೂ ಎಂದೂ ಕೊಡಲಾರ. ಅಂದಮೇಲೆ ನಾನೇನು ಮಾಡಲಿ, ಎಂದು ಚಿಂತಿಸುತ್ತಿರಲು ಯಾಕೆ ತಾಯಿ ನೀನೂ ನನ್ನನ್ನು ಬರಿಗೈಯಿಂದ ಕಳಿಸುವೆಯಾ! ಶೆಟ್ಟರಂತೂ ಎರಡು ತಿಂಗಳವರೆಗೆ ನನ್ನನ್ನು ತಿರುಗಾಡಿಸಿ ಒಂದು ದುಡ್ಡ ಕೊಡಲು ಬಂದರು. ಅದನ್ನು ನಾನು ತೆಗೆದುಕೊಳ್ಳದೇ ಅಲ್ಲಿಯೇ ಬಿಟ್ಟುಬಂದೆನೆಂದನು. ಆಗ ಆ ಸಾಧ್ವಿಯು ತನ್ನ ತವರುಮನೆಯವರು ಕೊಟ್ಟಿದ್ದ ಮೂಗತಿಯನ್ನು ತೆಗೆದು ಗುರುಗಳೇ ತೆಗೆದುಕೊಳ್ಳಿರಿ. ಈ ಮೂಗತಿಯು ಬಹಳ ಬೆಲೆಯುಳ್ಳದ್ದು. ಇದನ್ನು ಮಾರಿ ಬಂದ ಹಣದಿಂದ ನಿಮ್ಮ ಕಾರ್ಯ ಪೂರೈಸಿಕೊಳ್ಳಿರಿ, ಎಂದು ಆ ಬ್ರಾಹ್ಮಣನ ಕೈಯಲ್ಲಿ ಕೊಟ್ಟಳು. ಅದನ್ನು ಬ್ರಾಹ್ಮಣನು ತೆಗೆದುಕೊಂಡು ಲಕ್ಷ್ಮೀಬಾಯಿಯನ್ನು ಆಶೀರ್ವದಿಸಿ ಹೊರಟನು.

ಆ ಬ್ರಾಹ್ಮಣನು ಲಕ್ಷ್ಮೀಬಾಯಿಯಿಂದ ಮೂಗತಿತೆಗೆದುಕೊಂಡು ಸೀದಾ ನಾಯಕರಂಗಡಿಗೆ ಬಂದನು. ಶೆಟ್ಟರು ಕೂತಿದ್ದರು. ಅವನ ಕೈಯಲ್ಲಿ ಆ ಮೂಗತಿಕೊಟ್ಟು ಶೆಟ್ಟರೇ ಈಮೂಗತಿ ಖರೀದಿಗೆ ತೆಗೆದುಕೊಂಡು ನನಗೆಲೆಕ್ಕ ಕೊಡಿರಿ ಎಂದನು. ನಾಯಕನು ಆ ಮೂಗತಿ ನೋಡಿ ಗಾಬರಿಯಾದನು. ಈ ಮೂಗತಿಯು ನನ್ನ ಹೆಂಡತಿಯದು. ಇವನಿಗೆ ಹೇಗೆ ದೊರೆಯಿತು? ಆಕೆಯಾದರೂ ಇವನಿಗೆ ದಾನ ಕೊಟ್ಟಿರಬಹುದೇ! ಏನೇ ಇರಲಿ ವಿಚಾರಿಸಿಯೇ ತಿಳಿಯಬೇಕು, ಎಂದು ಆಲೋಚಿಸಿ ನೀನಿಲ್ಲೇ ಕುಳಿತುಕೋ. ಮನೆಗೆ ಹೋಗಿ ರೂಪಾಯಿ ತೆಗೆದುಕೊಂಡು ಬರುತ್ತೇನೆ, ಎಂದು ಆ ಬ್ರಾಹ್ಮಣನಿಗೆ ಹೇಳಿ ಮೂಗತಿಯನ್ನು ಒಂದು ಪೆಟ್ಟಿಗೆಯಲ್ಲಿಹಾಕಿ ಟ್ರೆಜರಿಯಲ್ಲಿಟ್ಟು ಕೀಲಿ ಹಾಕಿ ಮನೆಗೆ ಬಂದನು. ನಾಯಕರು ಮನೆಗೆಬಂದವರೇ ಹೆಂಡತಿಯನ್ನು ಕರೆಯಲು ಆ ಸಾಧ್ವಿಯಾದ ಲಕ್ಷ್ಮೀಬಾಯಿಯು ಭಯಗೊಂಡಳು. ನಾನು ಕೊಟ್ಟಿದ್ದ ಮೂಗತಿಯು ಮಾರಲು ಇವರಲ್ಲಿಗೆ ಬಂದಿರಬಹುದು. ಇಲ್ಲವಾದರೆ ಈ

ಹೊತ್ತಿನಲ್ಲಿ ಈ ರೀತಿಯಲ್ಲಿ ಮನೆಗೆ ಬರುತ್ತಿರಲಿಲ್ಲ. ಇನ್ನು ಮಾತ್ರ ನನಗೆ ಉಳಿಗಾಲವಿಲ್ಲೆಂದು ಚಿಂತಿಸುತ್ತ ಗಂಡನಲ್ಲಿಗೆ ಬಂದಳು. ನಾಯಕನು ಹೆಂಡತಿಯ ಬರಿಮೂಗನ್ನು ನೋಡಿ ಮೂಗತಿಯನ್ನು ಎಲ್ಲಿಟ್ಟೆ ತೆಗೆದಿಟ್ಟಿದ್ದೀಯೇನು ಎಂದು ಕೇಳಿದನು. ಹೌದು ಒಳಗೆ ತೆಗೆದಿಟ್ಟಿದ್ದೇನೆ ಎಂದಳು ಲಕ್ಷ್ಮೀಬಾಯಿಯು. ಎಲ್ಲಿಟ್ಟಿದ್ದೀ ತೆಗೆಕೊಂಡು ಬಾ ನೋಡೋಣವೆಂದರು ನಾಯಕರು. ಲಕ್ಷ್ಮೀಬಾಯಿಯು ತರುತ್ತೇನೆ ಎಂದು ಒಳಗೆಹೋಗಿ ದೇವರ ಮುಂದೆ ಕುಳಿತು ಅಳುತ್ತ ಹೇ....! ಸ್ವಾಮಿಯೇ ಎಂಥ ಸಂಕಟವನ್ನು ತಂದೊಡ್ಡಿದಿ ! ಮೂಗತಿಯನ್ನು ಒಳಗೆ ಇಟ್ಟಿದ್ದೇನೆ ತರುತ್ತೇನೆ ಎಂದು ಸುಳ್ಳು ಹೇಳಿ ಬಂದೆ ಆದರೆ ದಾನ ಕೊಟ್ಟಿದ್ದ ಮೂಗತಿಯನ್ನು ಎಲ್ಲಿಂದ ತರಲಿ. ಎಲೈ ಪ್ರಭುವೇ, ಅನಂತನೇ !, ದುಃಖಸಾಗರದಲ್ಲಿ ಮುಳುಗಿ ದೀನಳಾದ ನನ್ನನ್ನು ನಿನ್ನ ಕೃಪಾದ ದೃಷ್ಟಿಯಿಂದ ರಕ್ಷಿಸಿ ಉದ್ಧರಿಸು. ಎಂದು ಅಂಗಲಾಚಿ ಬೇಡಿಕೊಳ್ಳುತ್ತಿದ್ದಳು. ಇತ್ತ ನಡುಮನೆಯಲ್ಲಿ ಅತ್ತಿಂದಿತ್ತ ಇತ್ತಿಂದತ್ತ ತಿರುಗಾಡುತ್ತಿದ್ದ ನಾಯಕರು ಹೆಂಡತಿಯು ಮೂಗತಿಯನ್ನು ತರುವದಕ್ಕೆ ತಡವಾಗುತ್ತಿರುವದನ್ನು ಕಂಡು ಕಂಗೆಟ್ಟು ಹೆಂಡತಿಯನ್ನು ಕೂಗಿ ತೀವ್ರ ತೆಗೆದುಕೊಂಡು ಬಾ. ಹಾಗೆಯೇ ಬಂದರೆ ನೆಟ್ಟಗಾಗಲಿಕ್ಕಿಲ್ಲ, ಎಂದು ಗದ್ದರಿಸಿದರು. ಆಗಂತೂ ಲಕ್ಷ್ಮೀಬಾಯಿಗೆ ದಿಕ್ಕೇ ತೋರದಂತಾಯಿತು. ಶ್ರೀಕೃಷ್ಣ ಮೂರ್ತಿಯನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ಹೇ....ಅನಾಥ ಬಂಧುವೇ ಜಗನ್ನಾಯಕನೇ ಸರ್ವವ್ಯಾಪಕನೇ, ನಾನೇನು ಅಪರಾಧ ಮಾಡಿದ್ದೇನೆ ? ನನಗೇಕೆ ಈ ಶಿಕ್ಷೆ ಪತಿಗೆ ಏನೆಂದು ಉತ್ತರ ಕೊಡಲಿ. ಎಂದು ದುಃಖಿಸುತ್ತ ಯಾವದೋಕಾರಣದಿಂದ ಎಂದೋ ತಂದಿಟ್ಟಿದ್ದ ವಿಷದ ಪುಡಿಕೆಯನ್ನು ಬಿಚ್ಚಿ ಬಟ್ಟಲಲ್ಲಿ ಹಾಕಿದಳು. ಅದಕ್ಕೆ ನೀರು ಹಾಕಿ ಕಲಸಿದಳು. ಕೃಷ್ಣಾ ! ನಾನು ಅನ್ಯಾಯವಾಗಿ ಹಿಂಸೆಗೊಳಪಡುವದನ್ನು ತಪ್ಪಿಸಿ ನಿನ್ನ ಚರಣ ಕಮಲದಲ್ಲಿ ನನಗೆ ಆಶ್ರಯ ಕೊಡು ಎಂದು ದುಃಖಿಸುತ್ತ ಕುಡಿಯಲು ವಿಷದ ಬಟ್ಟಲವನ್ನು ಮೇಲಕ್ಕೆತ್ತಲು ಅದರಲ್ಲಿ ಫಟ್ಟನೆಂದು ಏನೋ ಬಿದ್ದ ಹಾಗಾಯಿತು. ಆಗ ಲಕ್ಷ್ಮೀಬಾಯಿಯು ಏನೆಂದು ನೋಡಲು ಬಟ್ಟಲವನ್ನು ಕೆಳಗಿಟ್ಟು ಕಣ್ಣೀರೊರಸಿಕೊಂಡು ನೋಡಲು ಅದರಲ್ಲಿ ತನ್ನ ಮೂಗತಿಯನ್ನೇ ಕಂಡಳು. ಮೂಗತಿಯನ್ನು ಬಟ್ಟಲದಿಂದ ಹೊರಗೆ ತೆಗೆದು ಚೆನ್ನಾಗಿ

ಒರೆಸಿ ನೋಡಿದಳು ಮೂಗುತಿಯು ತನ್ನದೇ ಆಗಿದ್ದಿತು. ಸಂತೋಷಭರಿತಳಾಗಿ ಇದು ಭಗವಂತನ ಲೀಲಾಮಹಿಮೆಯೆಂದು ತಿಳಿದು, ಆ ಮಹಿಸಾಗರನನ್ನು ಅನಂತರೀತಿಯಲ್ಲಿ ಸ್ಮರಿಸುತ್ತ ಗಂಡನಲ್ಲಿಗೆ ಬಂದು ಮೂಗುತಿಕೊಟ್ಟಳು.

ನಾಯಕರು ಮೂಗುತಿ ನೋಡಿ ತಬ್ಬಿಬ್ಬಾದರೂ; ಅದನ್ನು ಪುನಃ ಪರೀಕ್ಷಿಸಿ ನೋಡಿದರು; ಅದೇ ಮೂಗುತಿಯೆಂದು ಮನಗಂಡರು; ಆ ಕೂಡಲೇ ಅಂಗಡಿಗೆ ಬಂದರು; ಕೂಡ್ರಹೇಳಿದ ಬ್ರಾಹ್ಮಣನೂ ಇರಲಿಲ್ಲ; ಚಕಿತರಾದರು. ಎಲ್ಲಾದರೂ ಹೋಗಿರಬಹುದು ಈಗ ಬರಬಹುದು ಎಂದು ಸಮಾಧಾನ ಹೊಂದಿ ಟ್ರೇಜರಿ ತೆಗೆದು ಪೆಟ್ಟಿಗಿ ನೋಡುತ್ತಾನೆ ಅಲ್ಲೇನಿದೆ? ಖಾಲಿಪೆಟ್ಟಿಗೆಯಿದೆ; ಮೂಗುತಿ ಮಾತ್ರ ಮಾಯವಾಗಿದ್ದಿತು. ವಿಸ್ಮಯದ ವಿಚಾರಗಳು ತಲೆಯಲ್ಲಿ ಸುಳಿದಾಡತೊಡಗಿದವು. ಇದರ ನಿಜ ವಿಚಾರವನ್ನರಿತುಕೊಳ್ಳಬೇಕೆಂದು ಆತುರದಿಂದ ಪುನಃ ಮನೆಗೆ ಬಂದನು.

ಆಗಲೇ ನಾಯಕರ ಕ್ರೋಧವು ಕರಗಿ ಕರುಣೆಯು ಕುಣಿಯುತ್ತಿತ್ತು. ಹೆಂಡತಿಯನ್ನು ಕರೆದು ಮೃದುಸ್ವರದಲ್ಲಿ ನೀನು ಯಾರಿಗಾದರೂ ನಿನ್ನ ಮೂಗುತಿಯನ್ನು ಕೊಟ್ಟಿದ್ದಿಯೇನು? "ನಿಜ ಹೇಳು" ಎನ್ನಲು ಲಕ್ಷ್ಮೀಬಾಯಿಯು ಎಲ್ಲವನ್ನು ಹೇಳಿದಳು; ಆಗ ನಾಯಕರಿಗೆ ಜ್ಞಾನೋದಯವಾಯಿತು. ಆ ಬ್ರಾಹ್ಮಣನು ಮತ್ತಾರೂ ಇರದೆ ಸಾಕ್ಷಾತ್ ಭಗವಂತನೇ ಎಂದು ಮನಗಂಡನು. ಈ ಎಲ್ಲ ಆಟವೂ ಅವನಿಂದ ನಡೆಯಿತು ಎಂದಾಲೋಚಿಸಿ ತನ್ನ ಸತಿಯನ್ನು ಕುರಿತು, ಲಕ್ಷ್ಮೀ ನಿನ್ನಿಂದ ಇಂದು ನನಗೆ ಜ್ಞಾನೋದಯವಾಯಿತು. ನೀನು ಸಾಕ್ಷಾತ್ ಭಗವಂತನಿಗೆ ದಾನಮಾಡಿದ ಪುಣ್ಯಾತ್ಮಳು, ಆ ಭಾಗ್ಯ ನನಗಿಲ್ಲ. ಇನ್ನು ಈ ಸಂಸಾರದ ವ್ಯಾಮೋಹವು ಸಾಕು; ಎಂದು ಚಿಂತಿಸಿ ತನ್ನೆಲ್ಲ ಸಂಪತ್ತನ್ನೂ, ಆಸ್ತಿಗಳನ್ನೂ ದಾನಮಾಡಿ ಕೈಯಲ್ಲಿ ತಂಬೂರಿ ಹಿಡಿದು, ಸತಿಯೊಡನೆ ತನ್ನ ಗ್ರಾಮವಾದ ಪುರಂದವನ್ನು ಬಿಟ್ಟನು. ಊರು ಊರುಗಳನ್ನಲೆಯುತ್ತ ಭಿಕ್ಷೆಬೇಡಿ ಭೋಜನ ಮಾಡ ಹತ್ತಿದನು. ಅನೇಕ ಸುಖ ದುಃಖಗಳ ಸಂಸಾರಗಳನ್ನು ಕಂಡು ಸಂಗ್ರಹಿಸಿದ ಅನುಭವಗಳನ್ನು ಪದ್ಯರೂಪದಲ್ಲಿ ಅಂದು ಜನತೆಗೆ ಜ್ಞಾನಬೋಧೆಯನ್ನು ನೀಡುತ್ತಲಿದ್ದನು.

ಚಿನ್ನದ ವ್ಯಾಪಾರ ಮಾಡುತ್ತಿದ್ದವರು ಚಿಂದಿ ಬಟ್ಟೆಯನ್ನುಟ್ಟು ತಿರುಗುತ್ತ ತಿರುಪೆಯ ಕೂಳುಣ್ಣಬೇಕಾದರೆ ಸಾಮಾನ್ಯವಾದುದಲ್ಲ. ಪರಿಪಕ್ವಗೊಂಡ ಜ್ಞಾನದಿಂದ ಷಡ್ವರ್ಗಗಳನ್ನು ತಿಳಿದಿದ್ದರೆ ಮಾತ್ರ ಸಾಧ್ಯ.

---

## ೭. ಕನಕದಾಸರು

ಕಾಗಿನೆಲ್ಲಿ ಎಂಬ ಗ್ರಾಮದಲ್ಲಿ ಬ್ಯಾಡ ಜಾತಿಯ ಬೀರೇಗೌಡನು ತನ್ನ ಸತಿಯಾದ ಬುಚ್ಚಮ್ಮಾಳೆಂಬ ಸಾಧ್ವಿಯೊಡನೆ ಸುಖಸಂಸಾರ ಮಾಡಿಕೊಂಡಿದ್ದನು. ಅವನು ಆ ಊರ ಗೌಡನು. ಇವನು ೭೮ ಹಳ್ಳಿಗಳ ಉಂಬಳಿಗಾರನಾಗಿದ್ದುದರಿಂದ ಧನ ಧಾನ್ಯಗಳಿಗೆ ಕೊರತೆಯಿರಲಿಲ್ಲ. ಆದರೆ ಸಂತಾನ ಕೊರತೆಯೊಂದು ಸದಾ ಕೊರೆಯುತ್ತಿತ್ತು. ಯೌವನದ ವರ್ಷಗಳು ಒಂದೊಂದಾಗಿ ಗತಿಸಿದರೂ ಮಕ್ಕಳಾಗದಿದ್ದರೆ ಯಾರಿಗೆ ತಾನೆ ದುಃಖವಾಗಲಿಕ್ಕಿಲ್ಲ!

ಹೀಗೆ ಒಂದದಿನ ಆ ದಂಪತಿಗಳು ಮಕ್ಕಳಿಲ್ಲದೆ ಮುಕ್ತಿ ದೊರೆಯಲಾರದು ಎಂಬ ನಂಬಿಗೆಯಿಂದ ಚಿಂತಿಸುತ್ತಿರಲು ಒಬ್ಬ ಸಾಧುಪುರುಷನು ಬಂದನು. ಆಗಾ ದಂಪತಿಗಳು ಅವನ್ನು ಆದರದಿಂದ ಒಳಗೆ ಕರೆದೊಯ್ದು ಉಚಿತಾಸನದಲ್ಲಿ ಕುಳ್ಳಿರಿಸಿ ಆದರ ಸತ್ಕಾರಗಳನ್ನು ಮಾಡಿದರು. ತಮ್ಮ ದುಃಖವನ್ನು ಅವನಿಗೆ ಅರುಹಿದರು. ಆಗಾ ಸಾಧುಪುರುಷನು ಗೌಡರೇ ಹೀಗೆ ಮಕ್ಕಳಿಗಾಗಿ ಚಿಂತಿಸಬಾರಧು ಎಂದನು.

ಗೌಡರು:—ಹೌದು; ಅದು ನಿಜ. ಆದರೆ ಮಕ್ಕಳಿಲ್ಲದೆ ಮುಕ್ತಿ ದೊರೆಯಲಾರದು ಎಂದು ಅನ್ನುವದು ಸುಳ್ಳೇ? ·

ಸಾಧು— ಅದು ಸುಳ್ಳಲ್ಲ, ಆದರೆ ಸ್ವಂತ ಮಕ್ಕಳೇ ಇರಬೇಕೆಂಬ ನಿಯಮವಿಲ್ಲ. ಅನೇಕ ಅನಾಥ ಮಕ್ಕಳು ಹೊಟ್ಟೆಗಿಲ್ಲದೆ ಅಲೆಯುತ್ತಿವೆ; ಅಂಥ ಮಕ್ಕಳನ್ನು ತಂದು ಜೋಪಾನ ಮಾಡಿದವರಾಗುವದಿಲ್ಲವೇ?

ಗೌಡರು— ಅದು ಹೇಗೆ ಸಾಧ್ಯ? ಮಕ್ಕಳ ಮಮತೆಯನ್ನೇ ಅರಿಯದ ನಾವು ಅನ್ಯ ಮಕ್ಕಳನ್ನು ಎತ್ತಿ ಮುದದಿಂದ ಮುದ್ದಿಡುವದು ಸಾಧ್ಯ

ವಾಗಲಾರದು. ಸ್ವಂತ ಮಕ್ಕಳಮೇಲೆ ನಮ್ಮ ರಕ್ತ ಸಂಬಂಧದ ಸಂಯೋಗದಿಂದ ಸಹಜವಾದ ಪುತ್ರವಾತ್ಸಲ್ಯವು ಪ್ರಾಪ್ತವಾಗುವದು.

ಸಾಧು:— ಭಕ್ತಾ, ನೀನನ್ನುವದೂ ನಿಜವೇ. ಹಾಗಾದರೆ ನೀನು ತಿರುಪತಿ ಯಾತ್ರೆಯನ್ನಾದರೂ ಮಾಡು. ವೆಂಕಟೇಶನ ಕೃಪೆಯಿಂದ ನಿನಗೆ ಕಲ್ಯಾಣವಾಗುವದು ಎಂದು ಹೇಳಿ ಹೋದನು.

ಸಾಧುವಿನ ಹೇಳಿಕೆಯಂತೆ ಬೀರೇಗೌಡನು ತನ್ನ ಸತಿಯಿಂದ ಕೂಡಿಕೊಂಡು ಸಾಕಷ್ಟು ದ್ರವ್ಯವನ್ನು ತಕ್ಕೊಂಡು ಹೊರಟನು. ಪ್ರಯಾಣದ ಮೇಲೆ ಪ್ರಯಾಣ ಮಾಡುತ್ತ ತಿರುಪತಿಯನ್ನು ಸೇರಿದರು. ಅಲ್ಲಿ ಸರ್ವ ತೀರ್ಥಗಳಲ್ಲಿ ಸ್ನಾನಮಾಡಿ ನಾರುಮಡಿಯನ್ನುಟ್ಟು ತುಳಸಿಮಣಿಯನ್ನು ಧರಿಸಿ, ಗೋವಿಂದ ನಾಮಸ್ಮರಣೆಯನ್ನು ಮಾಡುತ್ತ ವೆಂಕಟೇಶನಿಗೆ ಅನೇಕ ಪೂಜಾ ವಿಧಾನಗಳನ್ನು ಮಾಡಿದನು. ದಾನ ಧರ್ಮಗಳಿಂದ ಬ್ರಾಹ್ಮಣರಿಗೆ ತೃಪ್ತಿಪಡಿಸುತ್ತ ಅಲ್ಲಿಯೇ ಕೆಲದಿನಗಳ ವರೆಗೆ ಇದ್ದರು.

ಹೀಗಿರುತ್ತಿರಲು, ಒಂದು ದಿನ ರಾತ್ರಿ, ಬೀರೇಗೌಡನ ಸ್ವಪ್ನದಲ್ಲಿ ಅರ್ಚಕ ರೂಪದಿಂದ ವೆಂಕಟೇಶನು ಪ್ರಸನ್ನನಾಗಿ, ಎಲೈ ಭಕ್ತನೇ ಇಗೋ ಈ ಫಲವನ್ನು ತೆಗೆದುಕೋ. ಇದನ್ನು ನಿನ್ನ ಹೆಂಡತಿಗೆ ಕೊಡು ಪರಮ ಭಕ್ತ ಶಿರೋಮಣಿಯಾದ ಒಬ್ಬ ಪುತ್ರ ಜನಿಸುವನು. ಚಿಂತಿಸ ಬೇಡವೆಂದು ಹೇಳಿ ಅದೃಶ್ಯನಾದನು.

ಬೀರೇಗೌಡನು ಪ್ರಾತಃಕಾಲ ಸ್ವಪ್ನ ಸಮಾಚಾರವನ್ನು ತನ್ನ ಸತಿಗೆ ತಿಳಿಸಿ ಸಂತೋಷದಿಂದ ಸ್ನಾನಾದಿಗಳನ್ನು ತೀರಿಸಿಕೊಂಡು ವೆಂಕಟೇಶನ ದರ್ಶನ ತಕ್ಕೊಂಡು ಅಲ್ಲಿಯ ಅರ್ಚಕ ಬ್ರಾಹ್ಮಣರಿಗೆ ತನ್ನ ಸ್ವಪ್ನ ಸಮಾಚಾರವನ್ನು ತಿಳಿಸಲು ಅವರು ಎಲೈ ಭಕ್ತಾ, ನಿನ್ನ ಸ್ವಪ್ನ ಫಲವು ಬಹಳ ಶುಭಕರವಾದದ್ದು. ನಿನಗೆ ನಿಶ್ಚಯವಾಗಿ ಪುತ್ರ ಪ್ರಾಪ್ತಿಯಾಗುವದು. ಎಂದು ಹೇಳಲು ಬೀರೇಗೌಡನು ಅತ್ಯಾನಂದಭರಿತನಾಗಿ ಭಗವಂತನನ್ನು ಸ್ಮರಿಸುತ್ತ ತನ್ನ ಬಿಡಾರಕ್ಕೆ ಬಂದನು. ಅಲ್ಲಿಂದ ಒಂದೆರಡು ದಿನಗಳಲ್ಲಿ ತನ್ನ ಸತಿಯೊಡನೆ ತಿರುಪತಿಯನ್ನು ಬಿಟ್ಟು ಸ್ವಗ್ರಾಮವಾದ ಕಾಗಿನೆಲ್ಲಿಗೆ ಬಂದನು.

ಬುಚ್ಚಮ್ಮನಿಗೆ ಕೆಲದಿನಗಳಲ್ಲಿ ಭಗವಂತನ ಕೃಪೆಯಿಂದ ಗರ್ಭ ಧಾರಣ ಚಿಹ್ನಗಳು ತೋರುತ್ತ ಬಂದವು. ನವಮಾಸಗಳು ಕಳೆದು ಒಂದು ದಿನ ಶುಭಮುಹೂರ್ತದಲ್ಲಿ ಪುತ್ರರತ್ನದ ಪ್ರಾಪ್ತಿಯಾಯಿತು. ಆ ಮಗು ತಿರುಪತಿಯ ವೆಂಕಟೇಶನ ಕರುಣೆಯಿಂದ ಜನಿಸಿದ್ದರಿಂದ ತಿಮ್ಮನೆಂಬ ನಾಮಕರಣ ಮಾಡಿದರು. ಪುತ್ರಸಂತಾನದ ಆನಂದದ ಮೂಲಕ ಸಕ್ಕರೆ ಯನ್ನು ಬೀದಿಬೀದಿಗಳಲ್ಲಿ ಹಂಚಿದರು. ಪಂಚ ಪಕ್ವಾನ್ನಗಳ ಪ್ರಸ್ತ ಮಾಡಿಸಿದನು. ತಿಮ್ಮನು ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತ ಬಾಲ ಲೀಲೆಗಳಿಂದ ಮಾತಾಪಿತೃಗಳನ್ನು ಸಂತೋಷಪಡಿಸುತ್ತಿದ್ದನು. ಆದರೆ ದೇವರ ನಿಯಮವನ್ನು ಮುರಿಯುವವರಾರು ? ತಿಮ್ಮನು ತನಗೆ ಐದು ವರ್ಷಗಳು ತುಂಬುವದರೊಳಗೆ ತಂದೆಯನ್ನು ಕಳೆದುಕೊಂಡನು. ಮುಂದೆ ಐದು ವರ್ಷಗಳಲ್ಲಿ ತಾಯಿಯನ್ನೂ ಕಳೆದುಕೊಂಡು ತಬ್ಬಲಿಯಾದನು. ವಿಶಾಲ ಮನೆ, ಕಾಳು-ಕಡಿಗಳಿಗೆ ಕೊರತೆಯಿಲ್ಲ ಧನಕನಕಾದಿಗಳು ಹೇರಳವಿವೆ. ಆದರೇನು ಮಾಡುವದು ? ಇದ್ದದ್ದನ್ನು ಅಟ್ಟಿಹಾಕುವವ ರಿಲ್ಲ. ಮಮತೆಯಿಂದ ಕರೆದು ಮಾತನಾಡಿಸುವವರಿಲ್ಲ. ಮುದದಿಂದ ಮಂಪೆ ಕೊಡು ಉಣಿಸುವವರಿಲ್ಲ. ಇಂಥ ಸ್ಥಿತಿಯುಳ್ಳ ಅನಾಥ ಬಾಲಕ ನಾದ ತಿಮ್ಮನು ದುಃಖದಿಂದ ಕಾಲ ಕಳೆಯುತ್ತಿರುವಾಗ ಒಂದು ದಿನ ದಾರಿಯಲ್ಲಿ ಕೇಶವ ವಿಗ್ರಹವು ದೊರೆಯಿತು. ಅದನ್ನು ತನ್ನ ಗ್ರಾಮವಾದ ಕಾಗಿನೆಲ್ಲಿಯಲ್ಲಿಯೇ ಒಂದು ಗುಡಿಯನ್ನು ಕಟ್ಟಿಸಿ ಅದರಲ್ಲಿ ಆ ವಿಗ್ರಹ ವನ್ನು ಪ್ರತಿಷ್ಠಿಸಿ ಅದರ ಪೂಜಾದಿಗಳಲ್ಲಿ ಕಾಲ ಕಳೆಯುತ್ತಿರಲು ಒಂದು ದಿನ ರಾತ್ರಿ ತಿಮ್ಮನಿಗೆ ಕನಸಿನಲ್ಲಿ ಪ್ರಭುವು ಪ್ರತ್ಯಕ್ಷನಾಗಿ, ನೀನು ಕನಕ ದಾಸನೆಂಬ ನಾಮಧರಿಸಿ, ಕೀರ್ತನೆಗಳನ್ನು ಹೇಳುತ್ತ ಜನತೆಗೆ ಜ್ಞಾನ ಬೋಧೆಯನ್ನು ಮಾಡುತ್ತ ದೇಶ ಸಂಚಾರಿಯಾಗಿ ತಿರುಪತಿ ಯಾತ್ರೆ ಯನ್ನು ಮುಗಿಸು ಎಂದು ಹೇಳಿ ಅದೃಶ್ಯನಾದನು.

ತಿಮ್ಮನು ಮರುದಿನವೇ ಕೀರ್ತನೆಗಳನ್ನು ಹಾಡಲು ಪ್ರಾರಂಭಿಸಿ

ಬದುಕಿದೆನು–ಬದುಕಿದೆನು ಭವವೆನ್ನ ಹಿಂಗಿತು |
ಪದುಮನಾಭನ ಪಾದದೊಲುಮೆ ಎನಗಾಯಿತು ||
ಸಾರ, ಸುಖ ಸಂಪದವು ಎನಗಾಯಿತು |
ಭೋಗದಾಶೆಯು ಬಯಲು ಎನಗಾಯಿತು ||

ಎಂದು ಕೀರ್ತನೆಗಳನ್ನು ಪರಮಾನಂದದಿಂದಲೂ, ಪರಮ ಭಕ್ತಿಯಿಂದಲೂ ಹಾಡುತ್ತ ಸ್ವಗ್ರಾಮದಿಂದ ತೆರಳಿದನು; ಅಂದಿನಿಂದ ಅವನು ಕನಕದಾಸನೆಂದು ಹೆಸರಾದನು.

ಆಗಿನ ಕಾಲದಲ್ಲಿ ಈಗಿರುವಂತೆ ಪ್ರಯಾಣ ಸೌಕರ್ಯಗಳು ಇರಲಿಲ್ಲವಾದ್ದರಿಂದ ತಿರುಪತಿಯ ಯಾತ್ರಿಕರು ತಿರುಪತಿಗೆ ಹೋಗಿಬರುವದು ಬಹು ಕಷ್ಟಕರವಾಗಿದ್ದಿತು. ಆದ್ದರಿಂದ ತಿರುಪತಿಯ ಭಕ್ತರು ಸಂಚಾರಿ ಯಾತ್ರಿಕರಿಗೆ ವೆಂಕಟೇಶನ ಮುಡುಪು, ಸೇವೆಗಳನ್ನು ಸಲ್ಲಿಸುವ ಪದ್ಧತಿ ಇದ್ದಿತು. ಅದರಂತೆ ಕನಕದಾಸರಿಗೂ ಕೂಡ ವೆಂಕಟೇಶನ ಮುಡುಪು, ಸೇವೆಗಳನ್ನು ಅರ್ಪಿಸಿದರು. ಈ ರೀತಿಯಾಗಿ ತಿರುಪತಿಯ ಭಕ್ತರು ಕೊಡುತ್ತಿದ್ದ ಮುಡುಪು, ಸೇವೆಗಳನ್ನು ಸ್ವೀಕರಿಸಿ ಅವರ ಸುಖ ದುಃಖಗಳನ್ನು ವಿಚಾರಿಸುತ್ತಲೂ, ಅನಾಥರ ಅಧೋಗತಿಯನ್ನು ವಿಚಾರಿಸಿ ಅವರಿಗೆ ಸಹಾಯ ಮಾಡುತ್ತಲೂ, ಸ್ವಂತದ ಸುಖ–ಸಂತೋಷಗಳನ್ನು ತೊರೆದು ಸಂಚರಿಸುತ್ತ ತಿರುಪತಿಯನ್ನು ಮುಟ್ಟಿ ವೆಂಕಟೇಶನ ದರ್ಶನ ತಗೊಂಡು ಕೆಲದಿನಗಳನ್ನು ಅಲ್ಲೇ ಕಳೆದು ಅಲ್ಲಿಂದ ಮರಳಿದನು.

ಕನಕನಿಗೆ ತುಂಬಿದ ಯೌವ್ವನ, ಸಾಕಷ್ಟು ಸಂಪತ್ತು ಇರುವಾಗ ಬೇಕಾದ ಸುಖ-ಭೋಗಗಳನ್ನು ಅನುಭವಿಸಲು ಸಾಧ್ಯವಿತ್ತು. ಇಂಥ ಪರಿಸ್ಥಿತಿಯಲ್ಲಿ ಸರ್ವಸ್ವವನ್ನೂ ತ್ಯಾಗಮಾಡಿ, ಸನ್ಯಾಸಿಯಾಗಿ ಭಿಕ್ಷಾಟನೆ ಮಾಡುವದೆಂದರೆ ಸರ್ವಸಾಮಾನ್ಯ ವಿಷಯವಲ್ಲ, ಮಹಾ ಮನೋನಿಗ್ರಹ ಬೇಕು. ಮಾನಾಪಮಾನಗಳನ್ನು ಹರಿದೊಗೆದು ಮುನ್ನಡೆಯಬೇಕಾಗುತ್ತದೆ. ಆದರೆ ಇಲ್ಲದ್ದನ್ನು ತ್ಯಾಗಮಾಡುವವರು ಬಹಳ, ಇದ್ದದ್ದನ್ನು ತ್ಯಾಗಮಾಡುವದು ಬಹಳ ಕಠಿಣ. ನಿತ್ಯವೂ ಅನೇಕ ಸುಖಿ-ದುಃಖಿಗಳನ್ನು ಕಂಡು ಅವರ ಸ್ಥಿತಿಗಳನ್ನು ಕೇಳಿ ಅವರಿಗೆ ಉಪಾಯ ಹೇಳಿ ಸಮಾಧಾನಗೊಳಿಸುತ್ತಲೂ, ಬೋಧಪರ ಕೀರ್ತನೆಗಳನ್ನು ಹೇಳಿ ಅವರನ್ನು ಸಂತೋಷಪಡಿಸುತ್ತಲೂ, ಊರಿಂದೂರಿಗೆ ಸಂಚರಿಸುತ್ತ ಹಾದಿಯಲ್ಲಿ ಹತ್ತಿದ ಕ್ಷೇತ್ರಗಳನ್ನು ಸಂದರ್ಶಿಸಿ ದರ್ಶನ ಪಡೆಯುತ್ತ ಉಡುಪಿಗೆ ಬಂದುಮುಟ್ಟಿದನು. ಅಷ್ಟೊತ್ತಿಗೆ ಅವನಿಗೆ ಮೂವತ್ತೈದು ವರ್ಷಗಳು ತುಂಬಿದ್ದವು.

ಅಂದು ಏಕಾದಶಿ. ಕೃಷ್ಣಸ್ವಾಮಿಯ ಪೂಜಾ ಸಮಾರಂಭವು ಬಹು ವಿಜೃಂಭಣೆಯಿಂದ ನಡೆದಿದ್ದಿತು. ದೇವಾಲಯವು ಬ್ರಾಹ್ಮಣರಿಂದ ತುಂಬಿ ತುಳುಕುತ್ತಿತ್ತು. ಆಗ ಕೃಷ್ಣಸ್ವಾಮಿಯ ದರ್ಶನಕ್ಕೆಂದು ಕನಕದಾಸರು ಹೊಸ್ತಿಲಲ್ಲಿ ಕಾಲಿಡುತ್ತಲೇ, ಏ.... ನೀನಾರು? ಶುದ್ಧಗೊಳಿಸಲ್ಪಟ್ಟ ಮಂದಿರದಲ್ಲಿ, ನಿನ್ನಂಥ ಅಧಮರು ಬರಲಾರರೆಂಬುದು ನಿನಗೆಗೊತ್ತಿಲ್ಲವೆ, ನಡಿ ನಡಿಯಾಚೆಗೆ ಎಂದು ಕನಕದಾಸರು ಮಾತಾಡುವದಕ್ಕೂ ಕೂಡ ಅವಕಾಶ ಕೊಡದೆ ಹೊರದಬ್ಬಿದರು. ಆಗ ಕನಕದಾಸರು ಬಹು ವ್ಯಸನಗೊಂಡರು ಮಂದಿರದಿಂದ ಹೊರದಬ್ಬಿದುದಕ್ಕೆ ಕನಕದಾಸರು ದುಃಖಗೊಳ್ಳಲಿಲ್ಲ ಕೃಷ್ಣಸ್ವಾಮಿಯ ದರ್ಶನವಾಗಲಿಲ್ಲವಲ್ಲಾ; ಎಂದು ಕನವರಿಸಿ ಕಣ್ಣೀರಿಟ್ಟು ಗುಡಿಯ ಹಿಂಬದಿಯಲ್ಲಿ ಹೋಗಿ ಕೂತು.

ತೊರೆದು ಜೀವಿಸಬಹುದೆ ಹರಿ, ನಿನ್ನ ಚರಣವನು ।
ಸುಖ ಸೌಭಾಗ್ಯವೆಲ್ಲ ನೀನೆನ್ನ ಹರಿಯೇ ॥
ತೊರೆದು ಜೀವಿಸಬಹುದೆ ಹರಿ, ನಿನ್ನ ಚರಣವನು ।
ಕಾಣದೆ, ಮತ್ತಾರಿಗೆ ಅರಿತು ಪೇಳಲಯ್ಯಾ ॥
ತೋರಿ ನಿನ್ನ, ಚರಣವ ಹರಿನೆನ್ನ ಸಂಕಟವ

ಎಂದು ಪ್ರಾರ್ಥಿಸಲು ಕೂಡಲೇ ಶ್ರೀಕೃಷ್ಣಮೂರ್ತಿಯು ಹಿಂದು ಮುಂದಾಗಿ ಗೋಡೆಯಲ್ಲಿ ಒಂದು ಕಿಂಡಿಬಿದ್ದು ಅದರಲ್ಲಿಂದ ಕೃಷ್ಣಮೂರ್ತಿಯ ದರ್ಶನವಾಯಿತು ಕನಕದಾಸರಿಗೆ. ಇಗ ಎಲ್ಲರೂ ಆಶ್ಚರ್ಯಗೊಂಡು ತಮ್ಮ ಮೂರ್ಖತನಕ್ಕೆ ನಾಚಿಕೊಂಡು ಮಹಾನುಭಾವರಾದ ಕನಕದಾಸರ ಕ್ಷಮೆ ಬೇಡಿದರು. ಭಗವಂತನ ಕೃಪೆಯಿಂದ ಕನಕದಾಸರು ಅನೇಕ ದೇವರ ಸ್ತೋತ್ರಗಳನ್ನೂ ನಳಚರಿತ್ರೆ, ಹರಿಭಕ್ತಿಸಾರ ಮೊದಲಾದ ಗ್ರಂಥಗಳನ್ನೂ ಬರೆದು ಕೀರ್ತಿ ಸಂಪನ್ನರಾಗಿ ಭಗವಂತನ ಸನ್ನಿಧಿಯಲ್ಲಿ ಸಂಗಮರಾದರು.

---

## ೮. ಭಕ್ತ ಗಿರಿಧರಲಾಲ

ಬೃಂದಾವನವು ಶ್ರೀಕೃಷ್ಣಪರಮಾತ್ಮನ ಲೀಲಾವಿಲಾಸಗಳ ಪವಿತ್ರ ಸ್ಥಾನವು ಅಲ್ಲಿ ಗಿರಿಧರಲಾಲನೆಂಬ ಸದ್ಭಕ್ತ ಬ್ರಾಹ್ಮಣನು ಸದಾ ಹರಿಧ್ಯಾನ ಪಾರಾಯಣನಾಗಿ ಸತಿಯೊಡನೆ ಸಂಸಾರ ಸಾಗಿಸಿಕೊಂಡಿದ್ದನು.

ಆತನು ಶ್ರೀಕೃಷ್ಣ ಲೀಲೆಯಲ್ಲಿ ಅತ್ಯಂತ ಪ್ರೀತಿಯನ್ನಿಟ್ಟಿದ್ದನು. ಆತನ ಹೃದಯವು ಹರಿ ಧ್ಯಾನದಲ್ಲಿ ಸಂಗಮವಾಯಿತೆಂದರೆ ಕಾಲಿಗೆ ಗೆಜ್ಜೆ ಕಟ್ಟಿ ತಂಬೂರಿ ತಾಳಗಳನ್ನು ಧರಿಸಿ, "ಶ್ರೀರಾಜಗೋಪಾಲ"ನೆಂಬ ಜಯದೇವರು ರಚಿಸಿದ ಅಷ್ಟಪದಿಯನ್ನು ಸಂಕೀರ್ತನೆ ಮಾಡುತ್ತಿದ್ದನು. ಇಂತಹ ಹರಿ ನಾಮ ಸಂಕೀರ್ತನೆಯನ್ನು ಸದಾ ಮಾಡುತ್ತ ಆನಂದಸಾಗರದಲ್ಲಿ ಲೋಲಾಡುತ್ತಿದ್ದನು. ಈತನು ಇಂತಿರಲು ಆತನ ಕುಟುಂಬದ ನಿರ್ವಹಣೆಯ ಭಾರವನ್ನು ಶ್ರೀಕೃಷ್ಣಪರಮಾತ್ಮನೇ ವಹಿಸಿಕೊಂಡಿದ್ದನು.

ಒಂದು ದಿನ ಕೆಲ ಸಾಧುಸಂತರು ದೇಶಾಟನೆ ಮಾಡುತ್ತ ಬೃಂದಾವನಕ್ಕೆ ಬಂದರು. ಆಗ ಗಿರಿಧರಲಾಲನು ಶ್ರೀಕೃಷ್ಣ ಮಂದಿರದಲ್ಲಿ ಆತನ ಲೀಲಾಮಂಥವೆಂಬ ಕವನವನ್ನು ತನ್ನ ಮಧುರ ಕಂಠದಿಂದ ಅನ್ನುತ್ತಿದ್ದನು. ಗಾನವಿದ್ಯೆಯ ಪರಿಚಯವೂ ಆತನಿಗೆ ಇದ್ದುದರಿಂದ ರಸವತ್ತಾದ ಆತನ ಕವನದ ರುಚಿಯನ್ನು ಎಷ್ಟೆಂದು ಹೇಳಬೇಕು ! ಶ್ರೀಕೃಷ್ಣ ಮಂದಿರದಲ್ಲಿ ಗಿರಿಧರಲಾಲನು ಇಂತಿರುವಾಗ ಆ ಸಾಧುಸಂತ ಜನರೂ ಶ್ರೀಕೃಷ್ಣ ದರ್ಶನಾಪೇಕ್ಷಿಗಳಾಗಿ ಮಂದಿರಕ್ಕೆ ಬಂದರು. ಅಲ್ಲಿ ಹಾಡುತ್ತಿದ್ದ ಗಿರಿಧರಲಾಲನ ಭಕ್ತಿ ಪ್ರಭಾವವುಳ್ಳ ಕವನದ ಮಾಧುರ್ಯವನ್ನು ಕೇಳಿ ಸಂತಸಗೊಂಡು ಗಿರಿಧರಲಾಲನನ್ನು ಕುರಿತು, ''ಕವಿಭಕ್ತನೇ ! ಶ್ರೀರಾಸಕ್ರೀಡಾ ವಿಲಾಸವನ್ನು ಕೀರ್ತನ ಮಾಡಬೇಕೆಂದು ಬೇಡಿಕೊಂಡರು. ಆದರೆ ಆಗ ಆತನ ಬಳಿಯಲ್ಲಿ ತಕ್ಕ ವಾದ್ಯಗಳಿರಲಿಲ್ಲ. ಅವುಗಳಿಲ್ಲದೇ ಹಾಡುವದರಿಂದ ಜನರಿಗದು ರುಚಿಸದೆಂದು ಆಲೋಚಿಸುತ್ತಿರಲು ಆತನ ಆಲೋಚನೆಯನ್ನರಿತು ತಂಬೂರಿ, ಚಿಟಕೇ, ತಾಳ, ಗೆಜ್ಜೆ, ಪಿತಾಂಬರಗಳು ಶ್ರೀಹರಿಯ ಅನುಗ್ರಹದಿಂದ ಪಟಪಟನ ಆತನ ಎದುರು ಬಿದ್ದುಕೊಂಡವು. ಆಗ ಅಲ್ಲಿದ್ದವರೆಲ್ಲರೂ ಆಶ್ಚರ್ಯಚಕಿತರಾದರು. ಗಿರಿಧರಲಾಲನು ಅವುಗಳನ್ನು ಧರಿಸಿ ತಂಬೂರಿಯನ್ನು ಬಾರಿಸುತ್ತ ಚಿಟಗೆಗಳಿಂದ ತಾಳ ಹಾಕುತ್ತ ಕಾಲಿಗೆ ಗೆಜ್ಜೆ ಕಟ್ಟಿ ಕುಣಿಯುತ್ತ ಕೀರ್ತನಾರಂಭ ಮಾಡಿದನು. ತಾಳ ತಂಬೂರಿ ಸ್ವರಗಳಿಂದ ಮೇಳಗೊಂಡ ಕರ್ಣ ಮಧುರ ಕೀರ್ತನವು ಎಲ್ಲರನ್ನೂ ಆನಂದಸಾಗರದಲ್ಲಿ ತೇಲಿಸಿತು. ಅನಂತರ ಸಾಧು-ಸಂತರಿಗೆ ಭೋಜನ ಸಮಾರಂಭವಾಯಿತು.

ಗಿರಿಧರಲಾಲನು ಬ್ರಾಹ್ಮಣನಾಗಿದ್ದರೂ, ವಿಶಾಲ ಹೃದಯವುಳ್ಳವನಾಗಿ ಎಲ್ಲ ಜೀವಿಗಳನ್ನು ಸಮದೃಷ್ಟಿಯಿಂದ ನೋಡುತ್ತಿದ್ದನು. ಅಂತೆಯೇ

ಅವನು ಸಂತ ಸಾಧುಗಳೊಡನೆ ಕೂಡಿ ಭೋಜನ ಮಾಡಿದನು. ಇದು ಮತಾಭಿಮಾನಿಗಳಾದ ಬ್ರಾಹ್ಮಣರಿಗೆ ಸರಿದೋರಲಿಲ್ಲ. ಅವರು ಗಿರಿಧರ ಲಾಲನ ಕೈಕೊಂಡ ನಡತೆಗಳು ಹೇಯುವಾದವುಗಳೆಂದು ಭಾವಿಸಿ, ಆತನನ್ನು ಕುಲದಿಂದ ಬಹಿಷ್ಕರಿಸತಕ್ಕದ್ದೆಂದು ತೀರ್ಮಾನಿಸಿದರು. ತಮ್ಮ ತೀರ್ಮಾನ ವನ್ನು ಗಿರಿಧರಲಾಲನಿಗೆ ತಿಳಿಸಬೇಕೆಂದು ನಿಶ್ಚಯಿಸಿ ಎಲ್ಲರೂ ಒಟ್ಟಾಗಿ ಆತನ ಮನೆಗೆ ಬಂದು ಎಲೈ ಗಿರಿಧರ' ನೀನು ನಡೆಸುತ್ತಿದ್ದ ಕಾರ್ಯ ಗಳು ಬ್ರಾಹ್ಮಣ ಧರ್ಮಕ್ಕೆ ಅಸಹ್ಯಕರವಾಗಿವೆ. ಕಾರಣ ನೀನು ಅವುಗ ಳನ್ನು ಬಿಟ್ಟುಬಿಡು. ಇಲ್ಲವೇ ನಿನ್ನಿಚ್ಛೆಯಂತೆ ನಡೆಯುವದಾದರೆ ಬ್ರಾಹ್ಮಣ ವರ್ಗವನ್ನು ಬಿಟ್ಟು ಮತ್ತೆಲ್ಲಾದರೂ ಮನೆ ಕಟ್ಟಿಕೋ. ಇಲ್ಲವಾದರೆ ನಿನಗೆ ಅನೇಕ ತೊಂದರೆಗಳುಂಟಾಗುವವು. ಎಚ್ಚರಿಕೆ. ಎಂದು ಕಠಿಣವಾಗಿ ಹೇಳಿ ಹೋದರು. ಗಿರಿಧರಲಾಲನು ಅವರ ಮಾತುಗಳಿಗೆ ಹೆದರಲಿಲ್ಲವಾದರೂ ವಿರೋಧಿಗಳ ಮಧ್ಯದಲ್ಲಿರುವದು ಅಪಾಯಕರ. ಆದ್ದರಿಂದ ಮತ್ತೆಲ್ಲಾದರೂ ಗುಡಿಸಲು ಹಾಕಿಕೊಂಡಾದರೂ ಇರುವದುಚಿತವೆಂದೆಣಿಸಿ ಅದಕ್ಕಾಗಿ ಪ್ರಯ ತ್ನವನ್ನೂ ನಡೆಸಿದನು.

ಭಕ್ತವತ್ಸಲನಾದ ಆ ಪರಮಾತ್ಮನು ತನ್ನ ನಿಜ ಭಕ್ತರಿಗೆ ಉಂಟಾದ ತೊಂದರೆಗಳನ್ನು ನಿವಾರಿಸದೆ ಸುಮ್ಮನಿರುವನೆ? ಅದಕ್ಕಾಗಿ ನೀಚ ಕುಲದ ದಾಸರಂತೆ ವೇಷ ಧರಿಸಿದನು. ಕೈಯಲ್ಲಿ ತಂಬೂರಿಯನ್ನು ಹಿಡಿದು ತಾಳ ಹಾಕುತ್ತ ಭಗವಂತನ ನಾಮಸ್ಮರಣೆ ಮಾಡುತ್ತ ಬೀದಿ ಹಿಡಿದು ಗಿರಿಧರ ಲಾಲನ ಮನೆಗೆ ಬಂದನು. ಒಳಗಿದ್ದ ಗಿರಿಧರನು ತಾಳದ ಸಪ್ಪಳವನ್ನು ಕೇಳಿ ಹೊರಗೆ ಬಂದು ಆ ವೇಷಧಾರಿ ದಾಸನಿಗೆ ನಮಸ್ಕರಿಸಿ ಒಳಕ್ಕೆ ಕರೆದೊಯ್ದು ಉಚಿತ ಸ್ಥಾನದಲ್ಲಿ ಕುಳ್ಳಿರಿಸಿ ಆತನು ಹಾಡುತ್ತಿದ್ದ ಸಂಕೀ ರ್ತನೆಯನ್ನು ಮನಃಪೂರ್ವಕ ಕೇಳುತ್ತಲಿದ್ದನು. ಆ ಹೊತ್ತು ಸಾಧಿಸಿ ಬ್ರಾಹ್ಮಣರೆಲ್ಲರೂ ಒಟ್ಟುಗೂಡಿ ಗಿರಿಧರಲಾಲನ ಮನೆಗೆ ಬಂದರು. ಆಗ ಗಿರಿಧರಲಾಲನು ದಾಸಯ್ಯನ ಮಗ್ಗಲಲ್ಲಿ ಕೂತು ಪದ ಕೇಳುತ್ತಲಿದ್ದನು. ಅದನ್ನು ಕಂಡನಂತರವಂತೂ ಆ ಬ್ರಾಹ್ಮಣರು ಕಡುಕೋಪಗೊಂಡು ಎಲೈ ಗಿರಿಧರಲಾಲನೆ! ನಿನಗೆಷ್ಟುಸಲ ಹೇಳಿದರೂ ನೀನು ಕೇಳುವದಿಲ್ಲ, ಇಲ್ಲಿಂದ ಹೊರಡಲೂ ಇಲ್ಲ, ಈಗ ಕೆಲ ದಿನಗಳಿಂದಂತೂ ಈ ನೀಚ ಕುಲಾ

ಧವನು ನಿನ್ನನ್ನು ದಿನಾಲೂ ಸಂಧಿಸುತ್ತಿರುವನು ಎಂದು ಅನ್ನಲು ಆಗ ಗಿರಿ ಧರಲಾಲನು ಮಾನ್ಯವಂತರೇ! ನೀವಿಷ್ಟು ಕೋಪಗೊಳ್ಳಬಾರದಲ್ಲದೆ ಸಾಕ್ಷಾತ್ ಪಾಂಡುರಂಗನೇ ಆಗಿರುವ ಈ ಮಹಾನ್ ಅತಿಥಿಗೆ ದೂಷಿಸಬೇಡಿರಿ; ಬೇಕಾದರೆ ನನಗೇ ಬೇಕಾದಷ್ಟು ದೂಷಿಸಿರಿ; ಅದರಿಂದ ತಮ್ಮಮೇಲಾವ ವಿಧದಲ್ಲೂ ಕ್ರೋಧಕೊಳ್ಳಲಾರೆನೆಂದನು. ಆಗ ಬ್ರಾಹ್ಮಣನು ನೀನು ಕ್ರೋಧಗೊಂಡರೂ ಮಾಡುವಿಯೇನು? ಇವನು ನಿನ್ನ ಪಾಂಡುರಂಗನೋ. ಪಾಂಡುರಂಗನಾಥನಾದಲ್ಲಿ ಸತ್ತವರನ್ನು ಬದುಕಿಸಬಲ್ಲನೋ? ಎಂದು ಅನ್ನುತ್ತಿರುವಾಗ ವೇಳೆಗೆ ಸರಿಯಾಗಿ ಅದೇ ದಾರಿಯಿಂದ ಒಬ್ಬ ಸತ್ತವನ ಶ್ರವವನ್ನು ಹೊತ್ತುಕೊಂಡು ಹೋಗುತ್ತಿದ್ದರು. ಆಗ ಬ್ರಾಹ್ಮಣರು ಇದೇ ಸಮಯವೆಂದು ಆ ಶ್ರವವನ್ನು ತರಿಸಿ ದಾಸಯ್ಯನ ಮುಂದಿಡಿಸಿ ಇದನ್ನು ಬದುಕಿಸಲಿ ನೋಡುವಾ! ಎಂದರು. ಆಗ ಗಿರಿಧರಲಾಲನು ಪ್ರತ್ಯುತ್ತರ ಹೇಳಬೇಕೆನ್ನುವಷ್ಟರಲ್ಲಿ ಆ ದಾಸಯ್ಯನು ನಡುವೆ ಬಾಯಿಹಾಕಿ ಅದರಲ್ಲೇನು ಸಂದೇಹ ಭಕ್ತಶಿರೋಮಣಿಯಾದ ಗಿರಿಧರಲಾಲನು ಬಯಸುವದಾದರೆ ಈ ಹೆಣಕ್ಕೆ ಜೀವಬರುವದು ಆಶ್ಚರ್ಯವೇನಲ್ಲ; ಎಂದೆನ್ನುತ್ತ ಆ ಹೆಣವನ್ನು ದೃಷ್ಟಿಸಿನೋಡುತ್ತಿರಲು ಸತ್ತವನು ಚಟ್ಟನೆದ್ದು ಕೂತನು; ಆಗ ಬ್ರಾಹ್ಮಣರು ಆಶ್ಚರ್ಯಚಕಿತರಾದರು. ದಾಸಯ್ಯನು ತನ್ನ ನಿಜರೂಪವಾದ ವಿಠ್ಠಲನ ರೂಪತಾಳಿ ಎಲೈ ಬ್ರಾಹ್ಮಣರೇ! ಗಿರಿಧರಲಾಲನು ಸಾಮಾನ್ಯನಲ್ಲ, ಮಹಾ ಸದ್ಭಕ್ತಶಿರೋಮಣಿಯು. ಆತನು ಅನುಸರಿಸುತ್ತಿರುವ ಕಾರ್ಯಗಳು ನನಗೆ ವಂದ್ಯವಾಗಿವೆ. ಉಚ್ಚ ನೀಚವೆಂಬ ಜಾತಿ ಮತಗಳಲ್ಲಿ ಬೇಧವಿಲ್ಲ, ನೀತಿ ನಿಯಮಗಳಲ್ಲಿ ಬೇಧವಿದೆ. ಯಾವ ಜಾತಿಯವನೇ ಇರಲಿ, ಅವನ ನಡೆನುಡಿಗಳು ಶುದ್ಧವಾಗಿದ್ದರೆ ಅವನೇ ಉಚ್ಚ ಧರ್ಮದವನು. ಇಂತಿರುವಾಗ ನೀವು ಪರಮಸಾಧುವಾದ ಗಿರಿಧರಲಾಲನಿಗೆ ಅಪಕಾರ ಬಗೆದದ್ದಾದರೆ ನಿಮಗೆ ಕ್ರೂರ ಯಮಯಾತನೆಯು ಎಂದಿಗೂ ತಪ್ಪದು; ಎನಲು ಆಗೆಲ್ಲರೂ ತಮ್ಮ ಮಹಾಮೂರ್ಖತನಕ್ಕೆ ತಲೆಬಾಗಿ ಆ ದಿವ್ಯ ಮಂಗಳಮೂರ್ತಿಗೆ ಸಾಷ್ಟಾಂಗ ನಮಸ್ಕಾರ ಮಾಡಲು ಆ ಪರಂಧಾಮನು ಆಶೀರ್ವದಿಸಿ ಅದೃಶ್ಯನಾದನು. ಆಗ ಬ್ರಾಹ್ಮಣರು ಪರಮಭಕ್ತನಾದ ಗಿರಿಧರಲಾಲನಿಂದ ನಮಗೆ ಶ್ರೀ ವಿಠ್ಠಲನ ದರ್ಶನ ದೊರೆಯಿತೆಂದು ಕೊಂಡಾಡುತ್ತ ಆತನ ಕ್ಷಮೆ ಕೇಳಿ ಹೊರಟುಹೋದರು.

ಒಂದುದಿನ ಗಿರಿಧರಲಾಲನು ರಾಸಕ್ರೀಡಾವಿಲಾಸವನ್ನು ಕೀರ್ತನೆ ಮಾಡುತ್ತಿರುವಾಗ ಶ್ರೀಕೃಷ್ಣಪರಮಾತ್ಮನು ತಾನು ಹಿಂದೆ ದ್ವಾಪರದಲ್ಲಿ ನಡೆಸಿದ ಕ್ರೀಡಾವಿಲಾಸವನ್ನು ಪ್ರತ್ಯಕ್ಷವಾಗಿ ತೋರಿಸಲು, ಎಲ್ಲರೂ ಆನಂದಭರಿತರಾದರು. ಗಿರಿಧರಲಾಲನಂತೂ ಆತನ ದಿವ್ಯ ಮಂಗಳಮೂರ್ತಿಯನ್ನು ತದೇಕಚಿತ್ತದಿಂದ ನೋಡಿನೋಡಿ ಆನಂದಿಸುತ್ತಿದ್ದನು. ಬಳಿಕ ಭಾಗವತದ ಮಹಿಮೆಯನ್ನು ಹೇಳಿ ಭಕ್ತರಿಗೆಲ್ಲರಿಗೂ ಆನಂದವನ್ನುಟ್ಟು ಮಾಡಿದನು ಇಂತು ಶ್ರೀಕೃಷ್ಣಭಕ್ತಿಯನ್ನು ಕೀರ್ತನೆಮಾಡುತ್ತ ಪರಂಧಾಮನ ಸನ್ನಿಧಿಯನ್ನು ಸೇರಿ ನಿರಂತರ ಸುಖಿಯಾದನು.

---

# ೯. ರಮಾಬಾಯಿಯ ಚರಿತ್ರೆಯು

ಪೂರ್ವದಲ್ಲಿ ಕಾಶೀ ಕ್ಷೇತ್ರವನ್ನು ಸಾಮಂತರಾಜನೆಂಬ ಕ್ಷತ್ರಿಯನು ಪರಿಪಾಲಿಸುತ್ತಿದ್ದನು. ಆ ತ ನು ಧರ್ಮಾತ್ಮನೂ ದಯಾಭರಿತನೂ ಆಗಿದ್ದು ಪ್ರಜೆಗಳನ್ನು ಮಕ್ಕಳಂತೆ ಪರಿಪಾಲಿಸುತ್ತಿದ್ದನು. ಈತನಿಗೆ ಸಕಲೈಶ್ವರ್ಯಗಳಿದ್ದರೂ; ಪುತ್ರಸಂತಾನವಿರದ್ದರಿಂದ ಬಹು ವಿಧವಾಗಿ ಕೊರಗುತ್ತಿದ್ದನು, ಸಂತಾನ ಫಲಪ್ರಾಪ್ತಿಗಾಗಿ ಪ್ರತಿ ಶುಕ್ರವಾರ ರಮಾದೇವಿಯ ವ್ರತಕೈಕೊಂಡು ಭಕ್ತಿಯಿಂದ ಪೂಜಿಸುತ್ತಿದ್ದಳು. ಇಂತು ಕೆಲಕಾಲ ಕಳೆದ ಬಳಿಕ ಆತನಿಗೋರ್ವ ಸುಕುಮಾರಿಯು ಜನಿಸಿದಳು. ರಮಾದೇವಿಯ ಕೃಪೆಯಿಂದ ಹುಟ್ಟಿದ ಮಗುವಿಗೆ ರಮಾಬಾಯಿಯೆಂದೇ ಹೆಸರಿಟ್ಟರು. ರೂಪ ಲಾವಣ್ಯಗಳಲ್ಲಿಯೂ, ಲಲಿತ, ವಿಲಾಸಗಳಲ್ಲಿಯೂ, ಅಪ್ರತಿಮಳಾಗಿದ್ದರಿಂದ ಕಂಡವರು ಮುದದಿಂದ ಮುದ್ದಿಸದೆ ಮುಂದೆ ಹೋಗುತ್ತಿರಲಿಲ್ಲ.

ರಮಾಬಾಯಿಯ ವಯೋಮಾನಕ್ಕನುಸರಿಸಿ ಆಕೆಗೆ ತಮ್ಮಕುಲಗುರುವಿನೊಡನೆ ವಿದ್ಯಾಭ್ಯಾಸಂಗವನ್ನು ಪ್ರಸ್ತಾಪಿಸಿದರು. ರಮಾಬಾಯಿಯು ಅಲ್ಪಕಾಲದಲ್ಲಿಯೇ ಸರ್ವವಿದ್ಯಾ ಪಾರಂಗತಳಾದಳು. ಗುರುವಿಗೆ ಸಹ ಆಕೆಯ ವಿದ್ಯಾ ವೈಶಿಷ್ಟಗಳು ಆಶ್ಚರ್ಯವನ್ನುಂಟು ಮಾಡಿದವು. ಇಂತು

ಈಕೆಯು ಕಾಲಕ್ರಮದಲ್ಲಿ ಸರ್ವ ವಿದ್ಯಾವೈಭವಗಳಲ್ಲಿ ಮಹಾ ಪಾಂಡಿತ್ಯ ವೆನ್ನು ಪಡೆದಳು. ಅಷ್ಟೊತ್ತಿಗೆ ಯೌವನವು ಅಂಕುರಿಸಿತು. ಆಗಂತೂ ರೂಪ ಲಾವಣ್ಯಗಳು ಶ್ರೀಲಕ್ಷ್ಮೀದೇವಿಯಂತೊಪ್ಪುತಿದ್ದವು. ಇಂತೊಪ್ಪು ತಿದ್ದ ರಮಾಬಾಯಿಯು ವಿವಾಹಕ್ಕೆ ತಕ್ಕ ಪರಿವಾರವನ್ನು ಕಳುಹಿಸಿ ವರಾನ್ವೇಷಣೆ ಕೈಕೊಂಡರು. ರಮಾಬಾಯಿಗೆ ರೂಪ, ವಿದ್ಯಾ, ವಿಲಾಸಗಳಲ್ಲಿ ಅನುರೂಪವಾದ ಸುಕುಮಾರನನ್ನು ಹುಡುಕುವಲ್ಲಿ ನಿರತರಾಗಿದ್ದರು. ಕಡೆಗೆ ಸಮೀಪದಲ್ಲೇ ಒಂದು ರಾಜ್ಯದಧಿಪತಿಯಾಗಿದ್ದ ಅವರ ನೆಂಟರ ಮಗನಾದ ರಾಜಕುಮಾರನಿಗೆ ಕೊಟ್ಟು ವಿಜೃಂಭಣೆಯಿಂದ ವಿವಾಹ ಮಾಡಿದರು. ಸಾಮಂತರಾಜರು ಮಗಳಿಗೆ ಕೊಡತಕ್ಕ ವಸ್ತ್ರಾಭರಣಗಳನ್ನು ಕೊಟ್ಟು, ಅಳಿಯನೊಂದಿಗೆ ಕಳುಹಿಸಿಕೊಟ್ಟರು.

ರಮಾಬಾಯಿಯು ಅತ್ತೆಯ ಮನೆಯಲ್ಲಿ ಪತಿಸೇವಾಸಕ್ತಳಾಗಿ ಸಂಸಾ ರವನ್ನು ಕೈಕೊಂಡಳು. ಮನೆಗೆಲಸಗಳಲ್ಲಿ ಸೇವಕಳಂತೆಯೂ, ಸಮಯೋಚಿತ ಆಲೋಚನೆಗಳಲ್ಲಿ ಮಂತ್ರಿಯಂತೆಯೂ, ಶಯ್ಯಾಲದಲ್ಲಿ ರಂಭೆಯಂತೆಯೂ ಇಂತಿರುವ ಸತಿಯ ಸದ್ಗುಣಗಳನ್ನು ಕಂಡು, ರಾಜಕುಮಾರನು ಸಂತೋಷಪ ಡುತ್ತಲಿದ್ದನು. ಆದರೆ ರಮಾಬಾಯಿಯು ಕೈಕೊಂಡು ನಡೆಸುತ್ತಿದ್ದ ಹರಿ ಸೇವೆಯನ್ನು ಮಾತ್ರ ಆತನು ಸೈರಿಸುತ್ತಿರಲಿಲ್ಲ. ಪ್ರತಿನಿತ್ಯವೂ ಶ್ರೀಹರಿ ಪೂಜೆ ಯನ್ನೂ ಸಾಧು-ಸಂತರಿಗೆ ಅನ್ನ ನೀರುಗಳನ್ನು ಕೊಟ್ಟು ಸತ್ಕರಿಸುವದನ್ನೂ ಹರಿದಾಸರ ಏಕಾದಸಿ ವ್ರತಾಚರಣೆಯನ್ನೂ ಜೀವಿತದಲ್ಲಿ ರಮಾಬಾಯಿಯು ಮುಖ್ಯವಾಗಿಟ್ಟುಕೊಂಡಿದ್ದಳು. ಆದರೆ ಇದು ರಾಜಕುಮಾರನಿಗೆ ಸರಿಬರು ತ್ತಿರಲಿಲ್ಲ. ಆದಕ್ಕಾಗಿ ಹಲವುಸಾರೆ ಎಚ್ಚರಿಸಿದನು. ಸಂಸಾರಿಗಳಿಗೆ ಇಂಥ ವ್ರತಾಚರಣೆಗಳು ಸರಿಯಲ್ಲವೆಂದು ಬುದ್ಧಿ ಹೇಳಿದನು. ಅದಕ್ಕೆ ಸಮಯೋ ಚಿತ ಸಮಾಧಾನ ಹೇಳಿ ಆ ಕೂಡಲೇ ಗ್ರಹಸಂಪತ್ತಿಯನ್ನುಂಟುಮಾಡಿ ತದ ನಂತರ ಹರಿಸೇವಾದಿಗಳನ್ನು ನಡೆಸುತ್ತಿದ್ದಳು.

ಇಂತಿರಲು ಆ ದಂಪತಿಗಳಿಗೊಂದು ಸುಂದರ ಕುಮಾರನು ಜನಿಸಿ ದನು. ಸತಿಯು ಎಲ್ಲ ವಿಷಯಗಳಲ್ಲಿಯೂ ಅಸಮಾನ ಬುದ್ಧಿ ಚತುರಳೆಂದು ಒಪ್ಪುತ್ತಿದ್ದರೂ, ಆಕೆ ಅನುಸರಿಸುತ್ತಿದ್ದ ಹರಿಸೇವಾದಿಗಳನ್ನು ಎಂತಾದರೂ ಭಂಗಪಡಿಸಿ ತನ್ನ ಪಂಥಕ್ಕೆ ಸೆಳೆದುಕೊಳ್ಳಬೇಕೆಂದು ಹವಣಿಸುತ್ತಿದ್ದನು.

ಇಂತು ಕಾಲಕಳೆಯುತ್ತಿರಲು ಹರಿವ್ಯಾಸರ ಏಕಾದಶಿ ವ್ರತಾಚರಣೆಯ ದಿನ ಒದಗಿಬಂತು; ರಾಜಕುಮಾರನು ಇದೇ ಸಮಯವೆಂದರಿತು ಅದೇ ದಿನವೇ ಒಂದು ಮೇಕೆಯನ್ನು ಹಿಡಿತರಿಸಿದನು. ಸತಿಯನ್ನು ಕರೆಯಿಸಿ ನನಗಿಂದು ಈ ಮೇಕೆಯ ಮಾಂಸವನ್ನು ಭುಂಜಿಸಲಪೇಕ್ಷೆಯಿರುವದು, ಕಾರಣ ನೀನೇ ಇದನ್ನು ಕ್ರಮವಾಗಿ ಅಡಿಗೆಮಾಡಿ ನನಗೆ ಬಡಿಸಬೇಕು ಎಂದು ಆಜ್ಞೆಮಾಡಿದನು. ಹರಿವ್ಯಾಸರ ವ್ರತಾಚರಣೆಯನ್ನು ಭಂಗಮಾಡಿ ನನಗೂ ಮಾಂಸ ತಿನ್ನಿಸಬೇಕೆಂದಿದ್ದ ಪತಿಯ ಇಂಗಿತವನ್ನು ರಮಾಬಾಯಿಯು ಅರಿತವಳಾಗಿ ನಾಥಾ, ಇದೇನೀ ವಿಪರೀತ ಹಠ ಸಾಧನೆ! ಇದರಿಂದಾಗಿ ಸಿಗತಕ್ಕ ಪ್ರಯೋಜನವಾದರೂ ಏನು, ಕಾಡುಮೃಗಗಳಂತೆ ಕಂಡ ಪ್ರಾಣಿಯ ಮಾಂಸ ತಿಂದು ಹೊಟ್ಟೆಬಾಕರಾದರೆ ಮಾನವ ಜೀವನವೆನಿಸಲಾರದು; ಬೇಡ ಈ ಹಠವನ್ನು ಬಿಟ್ಟುಬಿಡಿರಿ. ಉತ್ತಮ ಮಾರ್ಗವನ್ನನುಸರಿಸಿರಿ ಎಂದೆನಲು ಎಲೈ ದುರ್ಭಾಗ್ಯಳೇ, ನನಗೇಕೆ ನೀನು ನೀತಿವಚನಗಳನ್ನು ಬೋಧಿಸಲು ಕ್ರಮಿಸಿದಿಯಾ ಸಾಕು, ನಿಲ್ಲಿಸು ನಿನ್ನ ಪುರಾಣವನ್ನು, ನೀನಿದನ್ನು ಅಡಿಗೆ ಮಾಡಿದರೆ ನೆಟ್ಟಗೆ ಇಲ್ಲವಾದರೆ ಕಠಿಣ ಶಿಕ್ಷೆಯಾದೀತು; ಜಾಗ್ರತೆಯೆಂದು ಹೇಳಿ ಹೊರಟುಹೋದನು. ಆಗಾತನ ಆವೇಶವನ್ನು ಹಿಮ್ಮೆಟ್ಟಿಸುವ ಉಪಾಯಗಳಾವೂ ಆಕೆಗೆ ತೋಚಲಿಲ್ಲ; ವಿಚಾರಮಗ್ನಳಾದಳು. ಪತಿಗೆ ನಾನು ಮಾಂಸಭಕ್ಷಳಲ್ಲವೆಂದು ಗೊತ್ತಿದ್ದರೂ ಇಂಥ ಹಠವೇಕೆ? ಮೇಲಾಗಿ ಇಂದಿನ ಪವಿತ್ರ ಏಕಾದಶಿ ದಿನದಲ್ಲಿ ಇಂಥ ದುಷ್ಕೃತ್ಯವನ್ನು ನನ್ನಿಂದಲೇ ಮಾಡಿಸಬೇಕೆಂದು ಹಠವಿದೆಯೆಂದ ಮೇಲೆ ಮಾಡುವೆನು! ಹೇ ಪಾಂಡುರಂಗಾ, ನೀನೇ ಈ ಪ್ರಸಂಗದಿಂದ ಪಾರುಮಾಡು ಎಂದು ಪಾಂಡುರಂಗನನ್ನು ಧ್ಯಾನಿಸಿ, ಆ ಕೂಡಲೇ ಎದ್ದು ಹೋಗಿ ತನ್ನ ಆಪ್ತಸಖಿಯನ್ನು ಕರೆದು ಆಕೆಯಿಂದ ವಿಷತರಿಸಿ, ಅದನ್ನು ಹಾಲಿನಲ್ಲಿ ಬೆರಸಿ ಮುದ್ದು ಮಗನನ್ನು ಕರೆದು, ಪಾಂಡುರಂಗನ ಧ್ಯಾನ ಮಾಡುತ್ತ ಆತನಿಗೆ ಕುಡಿಸಿಬಿಟ್ಟಳು. ಕ್ಷಣಕಾಲದಲ್ಲಿ ಆ ಮಗುವು ಮರಣ ಹೊಂದಿತು. ಈ ವಿಚಾರ ಎಲ್ಲೆಡೆಯಲ್ಲಿ ಹರಡಿ ರಾಜಕುಮಾರನಿಗೂ ಮುಟ್ಟಿತು. ಆತನು ಆ ಕೂಡಲೇ ಬಂದು ಎದೆ ಎದೆ ಬಡೆದುಕೊಂಡು ಅಳತೊಡಗಿದನು. ಕಾರಣವೇನೆಂದು ಸತಿಯನ್ನು ಕೇಳಲಾಕೆಯು ನಿಮ್ಮ

ಅನಾಚರವೇ ಕಾರಣವೆಂದು ಘಟ್ಟಿಯಾಗಿ ಹೇಳಿಬಿಟ್ಟಳು. ಆಗ ರಾಜ ಕುಮಾರನು ತನ್ನ ತಪ್ಪಿಗಾಗಿ ಪಶ್ಚಾತ್ತಾಪಗೊಂಡನು. ಎಲ್ಲರೂ ಆಳುತ್ತಿದ್ದರೂ ರಮಾಬಾಯಿ ಮಾತ್ರ ಸುಮ್ಮನೆ ಇದ್ದಳು ಇದನ್ನು ಕಂಡು ರಾಜ ಕುಮಾರನು ಪುತ್ರ ಮರಣದಲ್ಲಿಯೂ ಅಳದಿರುವದು ಮಹಾಮಾರಿಯ ಲಕ್ಷಣವಲ್ಲವೇ ? ಎಂದನು ಆಗಾಕೆಯು ಮೇಕೆಯನ್ನು ಕೊಲ್ಲಬಾರ ದೆಂದು ಹೇಳಿದಾಗ ಪ್ರಾಣಿಗಳಿಗೆ ಮರಣವು ಸ್ವಭಾವ ಸಿದ್ಧವೆಂದು ಹೇಳಿದ ತಮಗೆ, ಈಗೆಲ್ಲಿಂದ ದುಃಖಬಂದಿತು ಪ್ರಾಣಿಗಳಂತೆ ಮಾನವನಿಗೂ ಮರ ಣವು ಸ್ವಭಾವ ಸಿದ್ಧವೆಂದಮೇಲೆ ದುಃಖಿಸುವದೇಕೆ, ಎಂದು ಹೇಳಿದಾಗ ರಾಜಕುಮಾರನು ಮರುಮಾತನಾಡದೆ ಸುಮ್ಮನಾದನು. ಆಗ ಅಲ್ಲಿದ್ದ ಮಂತ್ರಿಯು ರಮಾಬಾಯಿಯನ್ನು ಕುರಿತು ಅವ್ವಾ ತಮ್ಮ ಹೃದಯವು ಅತ್ಯಂತ ಪವಿತ್ರವಾದುದು. ತಮ್ಮನ್ನು ಮಹಾದೇವಿಯೆಂದು ಭಾವಿಸತಕ್ಕ ಸೇವಕ ನಾನು ಆದ್ದರಿಂದ ಮೃತ ಮಗುವಿನ ಪುನರ್ಜಿವಕ್ಕೇನಾದರೂ ಉಪಾಯವಿದ್ದರೆ ತಿಳಿಸಬೇಕೆಂದು ಬೇಡುವೆನವ್ವಾ ಎಂದು ನುಡಿಯಲು ಆಗ ರಮಾಬಾಯಿಯು ಮಂತ್ರಿವರ್ಯರೇ ! ಕಾಶೀ ಕ್ಷೇತ್ರದ ಗಂಗಾ ತೀರದಲ್ಲಿ ವೈಷ್ಣವ ಮಠವೊಂದುಂಟು. ಅಲ್ಲಿ ಪರಮಪೂಜ್ಯಭಾಗವತ ಭಕ್ತ ರುಂಟು. ಅವರನ್ನು ಅಲ್ಲಿಗೆ ಕರೆತಂದರೆ ಅವರ ಅನುಗ್ರಹದಿಂದ ಬಾಲಕನು ಬದುಕಬಹುದೆಂದರುಹಿದಳು. ರಾಜಪುತ್ರನು ಧೈರ್ಯಗೊಂಡು ಮಂತ್ರಿ ಯೊಡನೆ ಕೂಡಲೆ ಇಲ್ಲಿಗೆ ತೆರಳಿ, ಅಲ್ಲಿ ಹರಿಭಜನೆ ಮಾಡುತ್ತಿದ್ದ ಭಾಗವತ ಭಕ್ತರನ್ನು ಕಂಡು ನಮಸ್ಕರಿಸಿ, ಪೂಜ್ಯರೇ ತಾವು ನಮ್ಮ ನಗರಕ್ಕೆ ದಯ ಮಾಡಿಸಬೇಕೆಂದು ಪ್ರಾರ್ಥಿಸಿದನು. ಆಗವರು ರಾಜ ಮಂತ್ರಿವರ್ಯರೇ ! ಈಗ ನೀವು ಬಂದ ಸಮಯವೆಂತಹದೆಂಬದು ನಮಗೆ ಗೊತ್ತು, ರಾಜ ಪುತ್ರನೇ, ನಿನ್ನ ಪೂರ್ವಜನ್ಮದ ಪುಣ್ಯಫಲವಾಗಿ ನಿನಗೆ ರಮಾಬಾಯಿಯು ಸತಿಯಾಗಿ ದೊರೆತಿರುವಳು. ಆಕೆಯ ಹರಿವ್ಯಾಸರ ವ್ರತವನ್ನಾಚರಿಸಲಿಕ್ಕೆ ಪುಣ್ಯಾತ್ಮರಲ್ಲಿ ಅಗ್ರಗಣ್ಯಳು ಅಂಥ ಸತಿಯ ಮಹಿಮೆಯನ್ನರಿಯದೆ ಆಕೆ ಯನ್ನು ತಿರಸ್ಕಾರದಿಂದ ಕಾಣುವದು ನಿನ್ನ ಮೊದಲನೇ ತಪ್ಪು. ಬಳಿಕ ಏಕಾದಶಿ ವ್ರತಾಚರಣೆಯ ದಿನವೇ ನಿನಗೆ ಮಾಂಸ ಭಕ್ಷಣೆಯ ಅನುಕೂಲ ದಿನವೆಂದು ಹಠಹಿಡಿದು ನಿನ್ನ ಸತಿಯ ಮನಸ್ಸು ನೋಯಿಸಿದ್ದು ಎರ ಡನೇ ತಪ್ಪು, ಇಂಥಹ ತಪ್ಪಿನಿಂದಾಗಿ ನಿನ್ನ ಮಗನಿಗೆ ಮರಣವುಂಟಾ

ಯಿತು. ಈಗ ನೀನು ನಿನ್ನ ಮಗನ ಪುನರ್ಜೀವನ ಪಡೆಯಬೇಕೆಂದು ಆಶಿಸಿದರೆ "ಶ್ರೀಕೃಷ್ಣಪರಮಾತ್ಮನ ಸನ್ನಿಧಿಯಲ್ಲಿ ಕುಳಿತು ನಿನ್ನ ಸತಿಯಾದ ರಮಾಬಾಯಿಯು ಮನಸ್ಸಿನ ವಿರುದ್ಧವಾಗಿ ನಡೆಯುವದಿಲ್ಲವೆಂದು ದೃಢವಾದ ಪ್ರತಿಜ್ಞೆ ಮಾಡಬೇಕು" ಎಂದು ಆ ಭಕ್ತರೆಂದೊಡನೆ ರಾಜಕುಮಾರನು ನಿಸ್ಸಂಶಯವಾಗಿ ಕೂಡಲೇ ಶ್ರೀಕೃಷ್ಣನ ಸನ್ನಿಧಿಯಲ್ಲಿ ಭಾಗವತ ಭಕ್ತರ ನುಡಿಯಂತೆ ಪ್ರತಿಜ್ಞೆಮಾಡಿದನು. ಆಗಾ ಮಹಾನುಭಾವನು ಆತನ ಕೈಯಲ್ಲಿ ಒಂದು ತುಳಸೀದಳವನ್ನು ಕೊಟ್ಟು ಇದನ್ನು ರಮಾಬಾಯಿಯು ತನ್ನ ಕೈಯಿಂದ ಬಾಲಕನ ಮೇಲೆ ಹಾಕಲು ಆತನು ಕೂಡಲೇ ಎದ್ದೇಳುವನೆಂದು ತಿಳಿಸಿದನು. ರಾಜನೂ, ಮಂತ್ರಿಯೂ ತೀವ್ರವಾಗಿ ಮನೆಗೆ ಬಂದು ಆ ಮಹಾಭಕ್ತರು ತಿಳಿಸಿದ್ದನ್ನು ರಮಾಬಾಯಿಗೆ ತಿಳಿಸಿ, ತುಳಸೀದಳವನ್ನು ಆಕೆಯ ಕೈಯಲ್ಲಿ ಕೊಟ್ಟರು. ರಮಾಬಾಯಿಯು ಕೂಡಲೇ ತುಳಸೀದಳವನ್ನು ಕಣ್ಣಿಗೊತ್ತಿಕೊಂಡು ಶ್ರೀಹರಿಯ ಧ್ಯಾನಮಾಡುತ್ತ ಬಾಲಕನ ಮೇಲೆ ಹಾಕಲು ಆ ಮಗುವು ನಿದ್ರೆಯಿಂದೆಚ್ಚತ್ತವರಂತೆ ಎದ್ದು ಕುಳಿತನು. ತಂದೆ ಬಾಲಕನನ್ನೆತ್ತಿ ಮುದ್ದಾಡಿದನು. ಬಾಲಕನು ತಂದೆ ತಾಯಿಗಳೆಲ್ಲರಿಗೆ ನಮಸ್ಕರಿಸಿದನು; ಎಲ್ಲರೂ ಆಶೀರ್ವದಿಸಿದರು. ಅಂದಿನಿಂದ ರಮಾಬಾಯಿಯು ತನ್ನ ಸಂಸಾರವನ್ನು ಇಹಲೋಕ ಸ್ವರ್ಗದಂತೆ ಆನಂದಕರವಾಗಿ ನಡೆಸುತ್ತಿದ್ದಳು. ಇಂತು ಆ ದಂಪತಿಗಳು ಸುಖಸಂಸಾರದಲ್ಲಿ ಕಾಲಕಳೆದು ಮಗನಿಗೆ ವಿವಾಹವನ್ನೂ, ರಾಜ್ಯ ಪಟ್ಟಾಭಿಷೇಕವನ್ನೂ ಮಾಡಿ ರಮಾಬಾಯಿಯು ಪತಿ ಸಮೇತ ಪರಂಧಾಮನ ದಿವ್ಯಸನ್ನಿಧಿಯನ್ನು ಸೇರಿದರು.

---

## ೧೦. ಭಕ್ತ ಸೂರದಾಸ

ದ್ವಾರಕಾನಗರದಲ್ಲಿ ಸೂರದಾಸನೆಂಬ ಕವಿಭಕ್ತನಾಗಿ ಹೋದನು; ಇವನು ಹುಟ್ಟುಗುರುಡನು. ಬಾಹ್ಯಪ್ರಪಂಚವನ್ನು ಕಂಡು ಕಾಲಿಡದ ಕುಮಾರನು; ಆದರೆ ಅಂತರಂಗವನ್ನು ಆಳವಾಗಿ ಅರಿತು ಆನಂದಿಸುವ ಮಹಾತ್ಮನು.

ಸೂರದಾಸನು ಕುರುಡನಾಗಿದ್ದರಿಂದ ಚಿಕ್ಕವನಿರುವಾಗ ಓದು-ಬರಹ ಕಲಿಯಲು ಸಾಧ್ಯವಾಗಲಿಲ್ಲ. ಆದರೆ ಬುದ್ಧಿಯು ಬಹು ಚುರುಕಾಗಿದ್ದಿತು. ಕೇಳಿದ್ದನ್ನು ಜ್ಞಾಪಕದಲ್ಲಿಟ್ಟುಕೊಂಡು ಪುನರುಚ್ಚರಿಸುತ್ತಿದ್ದನಲ್ಲದೆ ಅದನ್ನು ವಿಚ್ಛೇದಿಸಿ ಆಳವಾಗಿ ವಿಚಾರಿಸುತ್ತಿದ್ದನು. ಈತನ ಲಕ್ಷ್ಯವು ಸಂಗೀತದ ಕಡೆಗೆ ಹೆಚ್ಚಾಗಿದ್ದಿತು. ಭಗವದ್ಭಕ್ತರ ಭಜನೆಯ ಹಾಡುಗಳನ್ನು, ಸಂಕೀರ್ತನೆಯನ್ನು ಕೇಳಿ ಅವುಗಳನ್ನು ನೆನಪಿನಲ್ಲಿಟ್ಟು ಹಾಡುತ್ತಲಿದ್ದನು. ಇಂತು ಈತನು ಬೆಳೆದು ದೊಡ್ಡವನಾದಂತೆಲ್ಲ ಆತನ ಸಂಗೀತ ವಿದ್ಯೆಯೂ ಬೆಳೆದು ಭಕ್ತಕವಿ ಸೂರದಾಸನೆಂದು ಪ್ರಸಿದ್ಧಿಗೊಂಡನು. ಭಕ್ತಿ, ಜ್ಞಾನ, ವೈರಾಗ್ಯ ರಸರಂಜಿತವಾದ ಸಾವಿರಾರು ಪದ್ಯಗಳನ್ನು ರಚಿಸಿ, ಕೇಳುವವರ ಕಿವಿಗಿಂಪಾಗುವಂತೆ ತನ್ನ ಮಧುರಕಂಠದಿಂದ ಹಾಡುತ್ತಿದ್ದನು. "ಕೃಷ್ಣಾನಂದ ಮುಕುಂದ ಮುರಾರೇ ವಾಮನ ಶ್ರೀಧರ ಗೋವಿಂದ ಎಂದು ಹಾಡುತ್ತ ಕೈಗೆ ತಾಳ ತಗೊಂಡನೆಂದರೆ, ಬೆಲ್ಲಕ್ಕೆ ನೊಣ ಸೇರಿದಂತೆ. ಜನರು ಆತನ ಕೀರ್ತನೆಗಳನ್ನು ಕೇಳುವದಕ್ಕೆ ಗುಂಪು ಗುಂಪಾಗಿ ನೆರೆಯುತ್ತಿದ್ದರು.

ಓದುಬರಹವನ್ನರಿಯದ ಸೂರದಾಸನ ಸಂಗೀತವೂ ಕವಿತ್ವವೂ ಸರಸ್ವತಿಯ ಸಹವಾಣಿಯೆಂದು, ಸೂರದಾಸನ ಸಂಗಾತಿಗಳು ಅನ್ನುತ್ತಲಿದ್ದರು ಸೂರದಾಸನು ಬುದ್ಧಿಬಲ್ಲಂದಿನಿಂದ ತನ್ನ ಅಂಧತ್ವದಿಂದಾಗುತ್ತಿರುವ, ನೊಂದಮನಸ್ಸಿನ ಶಾಂತಿಗಾಗಿ ಪರಮಾತ್ಮನ ಪಾದಕಮಲಗಳಿಗೆ ಮೊರೆ ಹೊಕ್ಕನು. ಆತನು ಭಜನೆಯ ಹಾಡುಗಳನ್ನು ಸಂಕೀರ್ತನೆಗಳನ್ನೂ ಸ್ವಯಂಸ್ಫೂರ್ತಿಯಿಂದ ಹಾಡಿ, ಮನಸ್ಸಿನ ಶಾಂತತೆಯನ್ನು ಕಾಯ್ದುಕೊಂಡು ತದೇಕಚಿತ್ತದಿಂದ ಭಗವಂತ ಸ್ತೋತ್ರಗಳನ್ನು ಸಂಗೀತದಲ್ಲಿ ಅನ್ನುತ್ತಿದ್ದನು. ಈತನ ತಾಯಿ ತಂದೆಗಳು ಸೂರದಾಸನ ಮನೋವೇದನೆಯನ್ನರಿತು ಆತನಿಗಾವರೀತಿಯಿಂದಲೂ ದುಃಖವಾಗದಂತೆ ನೋಡಿಕೊಳ್ಳುತ್ತಿದ್ದರು. ಆತನ ದೈವಭಕ್ತಿಯನ್ನೂ ಸಂಗೀತಾಮೃತ ಸ್ತೋತ್ರಗಳನ್ನೂ ಕಂಡು ಕೇಳಿ ಆನಂದಿಸುತ್ತಿದ್ದರು.

ಇಂತು ಕಾಲಕಳೆಯುತ್ತಿರಲು ಆತನ ತಂದೆಯು ಕಾಲಾಧೀನನಾದನು. ಮುಂದೆ ಕೆಲದಿನಗಳಲ್ಲಿಯೇ ಆತನ ತಾಯಿಯೂ ಪತಿಯ ವಿಯೋಗ ದುಃಖದಿಂದ ಕಾಲಾಧೀನಳಾದಳು. ಆಗ ಸೂರದಾಸನು ಒಂಟಿಗನೂ ಪರದೇ

ಶಿಯೂ ಆದನು. ಆ ವರೆಗೂ ಅನ್ಯರಿಗೇನನ್ನೂ ಕೇಳಿದವನಲ್ಲ. ತನಗಾಗಿ ಮಂದಿಗೆ ತ್ರಾಸ ಕೊಡಬೇಕೆಂಬ ವಿಚಾರವುಳ್ಳವನೂ ಅಲ್ಲ. ಇಂತಿರುವ ಸೂರದಾಸನನ್ನು ಲಾಲನೆ ಪಾಲನೆಯಿಂದ ಪೋಷಿಸಿದ ಮಾತೆಯು ಅತ್ತ ಮರಣಹೊಂದಿದಳು. ಇತ್ತ ಸೂರದಾಸನು ಭಗವಂತನ ಭಜನೆಯಲ್ಲಿ ತದೇಕಚಿತ್ತದಿಂದ ಲೀನನಾದನು. ಸೂರದಾಸನ ತಾಯಿಯ ಶ್ರವಸಂಸ್ಕಾರವನ್ನು ಊರ ಜನರೇ ಮಾಡಿಬಂದರು. ಆದರೂ ಸೂರದಾಸನು ತನ್ನ ಭಜನೆಯನ್ನೆ ಮುಗಿಸಿರಲಿಲ್ಲ. ಆತನನ್ನು ಪ್ರೀತಿಯಿಂದ ಕರೆದು ಕೂಡ್ರಿಸಿ ಊಟ ಮಾಡಿಸುವವರಾರು, ಹೊತ್ತಾಗಿದೆ ಮಲಗು ಎಂದು ಹೇಳುವವರಾರು, ಇಂತು ಸೂರದಾಸನು ಕೂತ ಸ್ಥಳದಿಂದ ಸ್ವಲ್ಪವೂ ಕದಲದೆ ತದೇಕಚಿತ್ತದಿಂದ ಒಂದೇಸವನೆ ಹಗಲು ರಾತ್ರಿಗಳೆನ್ನದೆ ನಾಲ್ಕು ದಿನಗಳ ಪರ್ಯಂತರವೂ ಅನ್ನ ನೀರುಗಳನ್ನು ತೊರೆದು ಭಗವಂತನ ಸ್ತೋತ್ರದಲ್ಲಿ ತಲ್ಲೀನನಾಗಿದ್ದನು. ಸೂರದಾಸರ ಭಕ್ತಿಭಾವಕ್ಕೆ ಮೆಚ್ಚಿ ಭಗವಂತನು ಆತನಿಗೆ ಸಹಾಯ ಮಾಡಬೇಕೆಂದು ಯೋಚಿಸಿ ಸ್ತ್ರೀವೇಷದಿಂದ ಸೂರದಾಸನಲ್ಲಿಗೆ ಬಂದು ಆತನನ್ನು ಕುರಿತು— ಮಗು ಸೂರದಾಸ! ತಾಯಿಯ ಮರಣದಿಂದ ವ್ಯಸನಗೊಂಡು ಹೀಗೆಯೇ ನೀನೆಷ್ಟು ದಿನಗಳವರೆಗೆ ಕೂಡಬಲ್ಲಿ, ಹೀಗೆ ಕೂತರೇ ನಿನಗೆ ಅನ್ನ ನೀರುಗಳನ್ನು ಆ ಭಗವಂತನು ತಂದುಕೊಡಬಲ್ಲನೇ? ಎಂದು ಅನ್ನಲು ಆಗ ಸೂರದಾಸನು ಅಮ್ಮಾ, ಆತನ ಕೃಪಾವಿಲಾಸವಲ್ಲದೆ ಏನೂ ನಡೆಯದು. ಆ ಭಗವಂತನು ಈ ವರೆಗೆ ತಂದೆಯ ರೂಪದಿಂದ ನನಗಾಡಿ ದುಡಿದನು. ತಾಯಿಯ ರೂಪದಿಂದ ಅಟ್ಟುಅಡಿಗೆಯ ಮಾಡಿ ಪ್ರೀತಿಯಿಂದ ಕರೆದುಣಿಸಿ ಪೋಷಿಸಿದಳು. ಇನ್ನಾವರೂಪದಿಂದ ನನ್ನ ಯೋಗಕ್ಷೇಮವನ್ನು ನೋಡುವನೋ ಯಾರು ಕಂಡವರು! ಆತನ ಹೊರ್ತು ನಿರಂತರವೂ ನನ್ನ ಯೋಗಕ್ಷೇಮವನ್ನು ನೋಡುವವರಾರು? ಎಂದು ನುಡಿದನು. ಇಂತು ಅಖಂಡ ಭಕ್ತಿಸಂಪನ್ನನಾದ ಸೂರದಾಸನ ಯೋಗಕ್ಷೇಮದ ಹೊಣೆಯನ್ನು ತಾನೇ ಹೊತ್ತು ವೇಳೆ ವೇಳೆಗೆ ಊಟೋಪಚಾರಗಳಿಂದ ಸಂತೈಸುತ್ತಿದ್ದನು.

ಒಂದು ದಿನ ಸೂರದಾಸನು ಒಬ್ಬರ ಸಹಾಯದಿಂದ ಶ್ರೀಕೃಷ್ಣ ದೇವಾಲಯಕ್ಕೆ ತೆರಳಿ ತಾಳಗಳನ್ನು ಬಾರಿಸುತ್ತಲೂ, ಭಜನೆ ಮಾಡು

ತ್ತಲೂ ಆನಂದಲಹರಿಯಲ್ಲಿ ವಿಹರಿಸುತ್ತಿದ್ದನು. ಸ್ವಲ್ಪ ಹೊತ್ತಿನ ನಂತರ ಶ್ರೀಕೃಷ್ಣನ ದರ್ಶನವನ್ನು ಕುರಿತು ಶ್ಲೋಕಗಳನ್ನು ಈ ರೀತಿ ಬಣ್ಣಿಸ ತೊಡಗಿದನು.

ಎಲೈ ಭಗವಂತನೇ ! ನಿನ್ನ ಅಪಾರ ಮಹಿಮೆಯನ್ನು ಬಣ್ಣಿಸಲು ಯಾರಿಂದ ಸಾಧ್ಯ. ಅಖಂಡಕೋಟಿ ಬ್ರಹ್ಮಾಂಡನಾಯಕನಾಗಿ ಆದಿ ಮಧ್ಯಾಂತರಹಿತನಾಗಿ, ಅಪ್ರೇಯನಾಗಿ, ಜಗದೇಕ ಕರ್ತನಾಗಿ ಮೆರೆಯುತ್ತಿರುವ ನಿನ್ನ ಚರಣಾರವಿಂದಕ್ಕೆ ನಮುಸ್ಕಾರಗಳು.

"ಏಕಮೇವಾದ್ವಿತಿಯಂ, ಬ್ರಹ್ಮಆನಂದಂ ಬ್ರಹ್ಮಂ, ವಜ್ಞನಂ ಬ್ರಹ್ಮ ವಿಜ್ಞನಂ ಬ್ರಹ್ಮ, ಸರ್ವಂ ಚಲಿಪಿತ ಬ್ರಹ್ಮ"

ಎಂದು ಯಾವ ವೇದವಚನಗಳು ಯಾವ ಪರಮಾತ್ಮನನ್ನು ಒಣ್ಣಿಸುವವೋ ಅಂತಹ ಪರಬ್ರಹ್ಮನು ನೀನೂ, ವ್ಯಕ್ತಾವ್ಯಕ್ತನಾಗಿಯೂ, ನಿರ್ವಿಕಾರ, ನಿರ್ಮೋಹನ, ನಿರ್ಲಿಪ್ತನಾಗಿಯೂ ರಾಜಿಸುತ್ತಿರುವ ನಿನಗೆ ಅನಂತ ನಮಸ್ಕಾರಗಳು. ಹೇ ಮುರಾರಿ, ರಾಧಾರಮಣ, ಈ ಜನ್ಮದಲ್ಲಿ ನಿನ್ನ ದಿವ್ಯ ಮಂಗಳಮೂರ್ತಿಯನ್ನು ನೋಡುವ ಭಾಗ್ಯ ನನಗಿಲ್ಲವಾಯಿತು. ನನಗೀ ಹುಟ್ಟು ಕುರುಡತ್ವವು ಉಂಟಾಗಲು ಕಾರಣವೇನು ? ಎಂದು ಬೇಡಿ ಕೊಳ್ಳಲು ಭಗವಂತನ ಅನುಗ್ರಹದಿಂದ ಹಿಂದಿನ ಅರಿವುಂಟಾಗಿ ತಾಮಾಡಿದ ದುಷ್ಟ ಕರ್ಮದ ಫಲವಾಗಿ ಈ ಜನ್ಮದಲ್ಲಿ ನನಗೆ ಅಂಧತ್ವವು ಪ್ರಾಪ್ತವಾಯಿತು ! ಎಂದು ದುಃಖಿಸುತ್ತಿರಲು ಕಣ್ಣೀರು ಕಪೋಲಗಳ ಮೇಲಿಂದ ಹರಿದು ನೆಲಕ್ಕೆ ಬೀಳುತ್ತಿದ್ದವು. ಆಗ ಭಗವಂತನು ಸೂರದಾಸನ ಮನಸ್ಸಿನ ಪರಿಪಕ್ವವನ್ನು ಕಂಡು ಆತನಿಗೆ ನೇತ್ರದಾನ ಮಾಡಿದನು. ಸೂರದಾಸನು ಆತ್ಮಾನಂದಭರಿತನಾಗಿ ಭಗವಂತನ ದಿವ್ಯ ಮಂಗಳಮೂರ್ತಿಯನ್ನು ಕಣ್ತುಂಬ ನೋಡಿ ಸಂತೋಷಪಟ್ಟು ಇಂತೆಂದನು.

ಹೇ ಜಗನ್ಮೋಹನ ಮೂರ್ತಿಯೇ, ಶಂಖ ಚಕ್ರ ಗಧಾಧರನೇ, ದೇವಾಧಿದೇವನೇ, ನಿನಗೆ ನನ್ನ ನಮಸ್ಕಾರಗಳು. ನಿನ್ನ ಈ ಪಾಕೃತ ದಿವ್ಯ ಮಂಗಳಮೂರ್ತಿಯನ್ನು ನೋಡಿದ ನಂತರ ಮತ್ತಾವದನ್ನೂ ನೋಡಲು ನನ್ನ ಮನಸ್ಸು ಒಗ್ಗದು. ಮತ್ತು ಈ ಕಣ್ಣಿನ ಚಂಚಲ ನೋಟದಿಂದ ನಿನ್ನ ಕೃಪಾಕಟಾಕ್ಷವನ್ನು ಕಡೆಗಣಿಸಬಹುದು. ಆದ್ದರಿಂದ ಎಂದಿನಂತೆ ನನಗೆ

ಅಂಧತ್ವವನ್ನೇಕೊಡು ಎಂದು ಬೇಡಿಕೊಳ್ಳಲು ಆಗ ಆ ಭಗವಂತನು ನಸು ನಕ್ಕು ಆತನ ಇಚ್ಛೆಯಂತೆ ಕುರುಡನನ್ನಾಗಿಯೇ ಮಾಡಿಬಿಟ್ಟನು.

ಇಂತಿರಲು ಆವಂತೀ ನಗರದ ರಾಜನು ಸಂಗೀತದಲ್ಲಿ ಬಹಳಪ್ರೀತಿಯುಳ್ಳವನು. ಇವನು ತನ್ನ ಆಸ್ಥಾನದಲ್ಲಿ ಸಂಗೀತವಿಶಾರದರಿಗೆ ಆಶ್ರಯ ಕೊಟ್ಟು ಪೋಷಿಸುತ್ತಿದ್ದನು. ಒಂದು ದಿನ ಸಂಗೀತಾಸ್ಥಾನವು ನಡೆದಿರಲು ಆಗೊಬ್ಬ ಆಸ್ಥಾನಕವಿಪುಂಗವನು ತನ್ನ ಮಧುರವಾದ ಕಂಠದಿಂದ ಹಾಡಲು ಕ್ರಮಿಸಿದರೆ ಕಠೋರ ಕಲ್ಲುಗಳು ಕೂಡ ಕರಗಿ ನೀರಾಗಿಹೋದವು. ಆಗ ರಾಜನು ಆತನ ಸಂಗೀತಕ್ಕೆ ಮೆಚ್ಚಿ ನಿನ್ನ ಗಾಯನದಿಂದ ಕಠೋರ ಕಲ್ಲುಗಳು ಕೂಡ ಕರಗಿ ನೀರಾದಮೇಲೆ ನೀನೆಂಥ ಪುಣ್ಯಶಾಲಿಯು ಎಂದು ಅಭಿನಂದಿಸಿ ಪಾರಿತೋಷಕವನ್ನು ಕೊಟ್ಟನು ಆಗ ಆ ಗಾಯಕನು ರಾಜನ್! ನನ್ನ ಗಾಯನಕ್ಕಿಂತಲೂ ಮಧುರಾನಗರದಲ್ಲಿದ್ದ ಸೂರದಾಸನೆಂಬ ಭಗವದ್ಭಕ್ತ ಶಿರೋಮಣಿಯುಂಟು, ಆತನು ಕೀರ್ತನೆ ಮಾಡಲಾರಂಭಿಸಿದರೆ ದೇವ ಗಂಧರ್ವರೇ ಸ್ವಯಂ ಬಂದು ಕೇಳುತ್ತಿರುವರು. ಅವನ ಕೀರ್ತನೆ ಕೇಳುವಭಾಗ್ಯ ನನಗೆಂದೊದಗುವದೋ ಎಂದು ಚಿಂತಿಸುತ್ತಿರುವೆನು ಎಂದೆನ್ನಲು ಆತನ ಮಾತುಗಳನ್ನು ಕೇಳಿ ಆಶ್ಚರ್ಯಗೊಂಡ ರಾಜನು ಕೂಡಲೇ ಮಧುರಾ ನಗರಕ್ಕೆ ಕೆಲವರನ್ನು ಕಳಿಸಿ ಸೂರದಾಸರನ್ನು ಬರಮಾಡಿಕೊಂಡನು ಆದರ ಸತ್ಕಾರದಿಂದ ಸತ್ಕರಿಸಿ ಉಚಿತಾಸನದಲ್ಲಿ ಕುಳ್ಳಿರಿಸಿದನು.

ರಾಜನು ಆತನಿಗೆ ಕೈಮುಗಿದು ಇಂತೆಂದನು ಪರಮ ಭಕ್ತ ಶಿರೋಮಣಿಯೇ ನೀನು ಮಾಡತಕ್ಕ ಹರಿಕೀರ್ತನೆಯನ್ನು ಕೇಳಬೇಕೆಂಬ ಹಂಬಲವುಂಟಾಗಿದ್ದರಿಂದ, ಆ ನನ್ನ ಇಚ್ಛೆಯನ್ನು ಪೂರೈಸಬೇಕು. ಎಂದು ಬೇಡಿಕೊಂಡನು ಅದಕ್ಕೆ ಆ ಸೂರದಾಸನು ಒಪ್ಪಿಕೊಂಡು ಕೀರ್ತನೆಯನ್ನು ಹಾಡತೊಡಗಿದನು. ಆಗ ಶ್ರೀ ಮಹಾಗಣಾಧಿಪತಿಯು ಬಾರಿಸತೊಡಗಿದನು. ಶಾರದಾದೇವಿಯು ವೀಣೆಯನ್ನು ನುಡಿಸಿದಳು. ಗಂಧರ್ವಾದಿಗಳು ಕುತೂಹಲದಿಂದ ಕೇಳುತ್ತಿದ್ದರು ರುಕ್ಮಿಣಿಕಾಂತನು ಸೂರದಾಸನ ಅಗ್ರಭಾಗದಲ್ಲಿ ನಿಂತು ಆಲಿಸಿ ನಲಿಯುತ್ತಿದ್ದನು. ಆತನ ಕೀರ್ತನೆಯಿಂದ ಬ್ರಹ್ಮಾನಂದರಸವು ಉಕ್ಕುತ್ತಿರಲು ರಾಜ ಮುಂತಾದವರೆಲ್ಲರೂ ಸ್ತಂಭೀಭೂತರಾಗಿದ್ದರು. ಕೆಲಹೊತ್ತಿನ ಮೇಲೆ ದೇವತೆಗಳು ಅದೃಶ್ಯರಾದರು.

ರಾಜನು ಸೂರದಾಸನ ಪಾದಗಳಿಗೆ ನಮಸ್ಕರಿಸಿ ಮಹಾನುಭಾವಾ, ತಾವು ಇನ್ನು ಕೆಲದಿನ ಇಲ್ಲಿಯೇ ಇದ್ದು ತಮ್ಮ ದಿವ್ಯ ಕ್ಷೇತ್ರಗಳ ಉಪದೇಶಗಳನ್ನರುಹಿ ನಮ್ಮನ್ನುದ್ಧರಿಸಬೇಕು ಎಂದು ಬೇಡಿಕೊಂಡನು. ಆ ಮಾತಿಗೆ ಅವನು ಸಮ್ಮತಿಸಿ ಅಲ್ಲಿಯೇ ಇರತೊಡಗಿದನು. ಆತನನ್ನು ರಾಜನು ಸಕಲೋಪಚಾರಗಳಿಂದ ಉಪಚರಿಸುತ್ತಿದ್ದನು. ಸೂರದಾಸನ ಕೀರ್ತನ ಪ್ರಭುತ್ವವು ಎಲ್ಲೆಡೆಯಲ್ಲಿಯೂ ಹಬ್ಬಿಕೊಂಡಿತು. ಇಂತಿರಲು ಒಂದು ದಿನ ಅಂತಃಪುರದ ರಾಣೀವಾಸ ಪರಿವಾರವು ಅಂತಃಪುರದಲ್ಲಿಯೇ ನಡೆಯುವಂತೆ ಮಾಡಬೇಕೆಂದು ರಾಜನಿಗೆ ತಿಳಿಸಲು, ರಾಜನು ಸೂರದಾಸನಿಗೆ ಆ ವಿಚಾರವನ್ನು ತಿಳಿಸಿದನು. ರಾಜನ ಬಿನ್ನಹದ ಮೇರೆಗೆ ಸೂರದಾಸನೊಂದು ದಿನ ಅಂತಃಪುರದಲ್ಲಿ ಸಂಕೀರ್ತನೆಯನ್ನು ನಡೆಸಿದನು. ಸೂರದಾಸನು ಹುಟ್ಟುಗುರುಡನಾಗಿದ್ದರಿಂದ ಅಂತಃಪುರದ ಕಾಂತೆಯರು ನಿರಾತಂಕವಾಗಿ ಬಂದು ಕುಳಿತು ಕೀರ್ತನ ಕೇಳುತ್ತಲಿದ್ದರು. ಸಂಕೀರ್ತನವು ಆನಂದದಾಯಕವಾಗಿ ನಡೆದಿರಲು ಶ್ರೀ ಸತ್ಯಭಾಮಿನಿಯು ಸೂರದಾಸನ ಅಗ್ರಸ್ಥಾನದಲ್ಲಿ ನಿಂತು ಕೇಳುತ್ತಿರುವದು ಭಗವಂತನ ಕೃಪೆಯಿಂದ ಸೂರದಾಸನಿಗೆ ಕಾಣಿಸಿಕೊಂಡಳು. ಆಗಾತನು ಅಮ್ಮಾ, ನೀನೂ ನನ್ನ ಮನೋನಾಥನ ಸಂಕೀರ್ತನ ಕೇಳಲು ಬಂದೆಯಾ ಎಂದೆನ್ನಲು ಅಂತಃಪುರ ಸ್ತ್ರೀಯರು ಅಹಾ, ನಾವೀ ಮಹಾತ್ಮನು ಅಂಧನೆಂದು ತಿಳಿದಿದ್ದೆವು; ಆದರೆ ಅಗ್ರಭಾಗದಲ್ಲಿ ನಿಂತಿದ್ದ ಶ್ರೀ ಸತ್ಯಭಾಮಾ ದೇವಿಯನ್ನು ಮಾತಾಡಿಸುತ್ತಿರುವರಲ್ಲಾ ಎಂದು ಸಂಶಯಗೊಂಡು ತೆರೆಗಳ ಮರೆಯಲ್ಲಿ ಕುಳಿತುಕೊಂಡರು. ಅಷ್ಟರಲ್ಲಿ ಶ್ರೀಕೃಷ್ಣ ಪರಮಾತ್ಮನು ಪ್ರಸನ್ನನಾಗಿ ಸೂರದಾಸನನ್ನೂ, ಶ್ರೀ ಸತ್ಯಭಾಮಿನಿಯನ್ನೂ ತನ್ನಲೈಕ್ಯ ಮಾಡಿಕೊಂಡು ಎಲ್ಲರೂ ನೋಡುತ್ತಿರುವಂತೆ ಗಗನಮಂಡಲಕ್ಕೇರಿದನು. ಆಗಲ್ಲಿದ್ದವರೆಲ್ಲರೂ ಪರಮಾಶ್ಚರ್ಯಗೊಂಡು ಭಕ್ತ ಸೂರದಾಸನ ಮಹಿಮೆಯನ್ನು ಕೊಂಡಾಡುತ್ತ ತೆರಳಿದರು.

ಇಂಥ ಮಹಾತ್ಮನಾದ ಸೂರದಾಸನ ಮಹಿಮೆಯ ಚರಿತ್ರೆಯನ್ನು ಓದಿದವರಿಗೂ ಕೇಳಿದವರಿಗೂ ಶ್ರೀ ಕೃಷ್ಣಾನುಗ್ರಹ ಉಂಟಾಗುವದು.

—0—

# ೧೧. ಸಮರ್ಥ ರಾಮದಾಸರು

ಮಹಾರಾಷ್ಟ್ರ ದೇಶದಲ್ಲಿ ಜಂಬೂ ಎಂಬ ಗ್ರಾಮವಿರುವದು. ಅಲ್ಲಿ ರಾಮತಾರಕ ಮಂತ್ರವನ್ನು ತುಂಬಿದ ಭಕ್ತಿಯಿಂದ ಭಜಿಸುತ್ತಿದ್ದ ಸೂರ್ಯಾಜಿ ಎಂಬ ಬ್ರಾಹ್ಮಣನು ತನ್ನ ಸತಿಯಿಂದೊಡಗೂಡಿ ಸುಖಸಂಸಾರ ಸಾಗಿಸಿ ಕೊಂಡಿದ್ದನು. ಈ ಪ್ರಕಾರ ಅವನು ಸಜ್ಜನ ಸತ್ಯದಿಂದೊಡಗೂಡಿ ಧರ್ಮ ಕಾರ್ಯದಲ್ಲಿ ಕಾಲಕಳೆಯುತ್ತಿದ್ದರೂ ಅವನಿಗೆ ಮಕ್ಕಳು ಮಾತ್ರ ಇನ್ನೂ ಆಗಿರಲಿಲ್ಲ. ಮಕ್ಕಳಿಗಾಗಿ ಅನನ್ಯ ಭಕ್ತಿಯಿಂದ ಶ್ರೀರಾಮಚಂದ್ರನನ್ನು ಪ್ರಾರ್ಥಿಸಿ ಮೊರೆಹೊಕ್ಕರು. ಆ ಭಕ್ತವತ್ಸಲನ ಅನುಗ್ರಹದಿಂದ ಒಬ್ಬ ಕುಮಾರನುದಯಿಸಿದನು. ಮಗನು ಹುಟ್ಟಿದನೆಂದು ಅನೇಕ ದಾನಧರ್ಮ ಗಳನ್ನು ಮಾಡಿ ಜಾತಕರ್ಮಗಳನ್ನು ಮುಗಿಸಿ ಆ ಮಗುವಿಗೆ "ರಾಮದಾಸ" ನೆಂದು ನಾಮಕರಣಮಾಡಿದರು. ರಾಮದಾಸನು ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತಿರಲು ಸಕಾಲದಲ್ಲಿ ಅಕ್ಷರಾಭ್ಯಾಸವನ್ನು ಮಾಡಿದರು. ಗಹನ ವಿಚಾರಗಳನ್ನೂ, ಕಠಿಣ ವಿಷಯಗಳನ್ನೂ ಕೂಡಾ ತನ್ನ ಕುಶಾಗ್ರ ಬುದ್ಧಿ ಯಿಂದ ಸರಳವಾಗಿ ಬಿಡಿಸಿ ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುತ್ತಿದ್ದನು. ಈ ಪ್ರಕಾರ ರಾಮದಾಸನು ಎಷ್ಟು ಚುರುಕುಬುದ್ಧಿಯುಳ್ಳವನಿದ್ದನೋ ಅಷ್ಟೇ ತುಂಟನೂ ಇದ್ದನು. ಆದರೂ ನಿತ್ಯಕರ್ಮಾನುಷ್ಠಾನುಗಳಲ್ಲಿ ಶ್ರದ್ಧೆಯುಳ್ಳವನಾಗಿದ್ದನು. ಈ ರೀತಿಯ ಇವನ ಸ್ವಭಾವವನ್ನು ತಿಳಿಯು ವದು ಯಾರಿಗೂ ಸಾಧ್ಯವಾಗಲಿಲ್ಲ. ಕಾಲಕ್ರಮದಲ್ಲಿ ಉಪನಯನಾದಿ ಗಳನ್ನು ಮಾಡಿ ಲಗ್ನಮಾಡಬೇಕೆಂದು ನಿಶ್ಚಯಿಸಿದರು. ಆದರೆ ಲಗ್ನದ ವಿಚಾರವನ್ನು ರಾಮದಾಸನ ಮುಂದೆ ತೆಗೆಯಲು ಅವನು ಅದಕ್ಕೆ ಅಸಮ್ಮತಿ ಯನ್ನೇ ವ್ಯಕ್ತಪಡಿಸುತ್ತಿದ್ದನು. ಆದರೂ ಸುರ್ಯಾಜೀ ದಂಪತಿಗಳು ರಾಮದಾಸರು ಲಗ್ನ ಒಲ್ಲೆನ್ನುವದು ಲೋಕರೂಢಿಯ ನಾಚಿಕೆಯೆಂದು ತಿಳಿ ದುಕೊಂಡಳು. ಸುಂದರಳೂ, ಸುಶೀಲಳೂ ಆದ ಕನ್ಯೆಯನ್ನು ಗೊತ್ತುಮಾಡಿ ಲಗ್ನತಯಾರಿಕೆಯನ್ನು ಕೈಕೊಂಡರು. ಲಗ್ನ ದಿನವು ಸಮೀಪಿಸಿತು, ಹಂದ ರವನ್ನು ಹಾಕಿದರು, ಮಂಗಲವಾದ್ಯಗಳು ಬಾರಿಸತೊಡಗಿದವು, ಸುಮಂಗಲೆ ಯರ ಹಾಡುಗಳು ಕೇಳುತ್ತಿದ್ದವು, ಎಲ್ಲಿ ನೋಡಿದರಲ್ಲಿ ಸಂಭ್ರಮದ ಸಂತೋಷವು ತುಂಬಿತುಳುಕುತ್ತಿತ್ತು, ಕನ್ಯೆಯನ್ನು ಅಲಂಕರಿಸಿ ವಿವಾಹ

ಮಂಟಪಕ್ಕೆ ತಂದರು. ಧರ್ಮಪದ್ಧತಿಯಂತೆ ಎಲ್ಲ ವಿವಾಹ ಪದ್ಧತಿಗಳು ಮುಗಿದು ಪುರೋಹಿತರು ಮಂಗಳಸೂತ್ರವನ್ನು ರಾಮದಾಸರ ಕೈಯಲ್ಲಿ ಕೊಟ್ಟು ಕನ್ಯೆಯ ಕಂಠದಲ್ಲಿ ಕಟ್ಟು ಎಂದು ತಿಳಿಸಿದರು. ರಾಮದಾಸರು ಕೈಯಲ್ಲಿಯ ಮಂಗಳಸೂತ್ರವನ್ನು ಏಕದೃಷ್ಟಿಯಿಂದ ನೋಡುತ್ತ ಇದು ಮಂಗಳಸೂತ್ರವಲ್ಲ; ಪ್ರಾಣ-ಮಾನಗಳನ್ನು ತೆಗೆಯಲು ಇದು ತಕ್ಕಪಾಶವು ಇದನ್ನು ನಾನು ಕಟ್ಟಲಾರೆನು. ಈ ಸೂತ್ರವನ್ನು ಈಕೆಗೆ ಕಟ್ಟುವದರಿಂದ ನನಗಾಗಲಿ, ಈಕೆಗಾಗಲಿ ಯಾವ ಪ್ರಯೋಜನವೂ ಆಗಲಾರದು. ಯಾವ ಮಾನವಜೀವಿಯೂ ದುಃಖದೋಷಗಳಿಗೆ ಸಿಲುಕಿ, ಅನಂತ ಪೀಡೆಯನ್ನು ಹೊಂದಿ ಒದ್ದಾಡುತ್ತ ಬಳಲುವದರಿಂದ ಅನಂತ ದುಃಖದಿಂದ ಬಿಡುಗಡೆಯನ್ನು ಈ ಮಂಗಲಸೂತ್ರವೂ ಮಾಡಬಹುದೇ? ಈ ಸೂತ್ರವನ್ನು ಈಕೆಯ ಕಂಠಕ್ಕೆ ಕಟ್ಟಲು ನನಗೆ ಅಧಿಕಾರವಿಲ್ಲ. ನಾನು ಈ ಕಾರ್ಯ ಮಾಡಲಾರೆನೆಂದು ಗಟ್ಟಿಯಾಗಿ ಹೇಳಿ ವಿವಾಹಮಂಟಪದಿಂದ ಒಮ್ಮೆಲೆ ಹೊರಗೆ ಜಿಗಿದು ಯಾರ ಕೈಗೂ ಸಿಗದಂತೆ ಅರಣ್ಯಮಾರ್ಗವಾಗಿ ಹೊರಟುಹೋದರು. ಆತನ ತಂದೆ-ತಾಯಿಗಳೂ, ಬಂಧು-ಬಳಗದವರೂ ಶೋಕಸಾಗರದಲ್ಲಿ ಮುಳುಗಿದರು.

ಅರಣ್ಯಮಾರ್ಗವಾಗಿ ಹೊರಟಿದ್ದ ರಾಮದಾಸರು ಕಾಡುಗಳನ್ನು ತುಳಿಯುತ್ತ ನಿರ್ಜನ ಪ್ರದೇಶವಾದ ಘೋರಾರಣ್ಯದ ಮಧ್ಯದಲ್ಲಿ ಬಂದರು. ಅಲ್ಲೊಂದು ಸರೋವರ ಕಂಡು ಅದರಲ್ಲಿ ಸ್ನಾನಮಾಡಿ, ಸಂಧ್ಯಾವಂದನೆಗಳನ್ನು ಮಾಡಿಕೊಂಡು ಮರದ ಬುಡದಲ್ಲಿ ಕೂತುಕೊಂಡರು. ಆಗ ರಾಮದಾಸರು ಅಪ್ಪಾ! ಎಂಥ ಬಂಧನದಿಂದ ಪಾರಾಗಿಬಂದೆನು; ಸಂಸಾರವೆಂಬ ಬಂಧನದಿಂದ ಬಿಗಿಯಲ್ಪಟ್ಟ ಮೇಲೆ ಅದರಿಂದ ಬಿಡುಗಡೆಹೊಂದುವದು ಸಾಮಾನ್ಯವಾದುದಲ್ಲ; ಅಂಥ ಬಂಧನದಿಂದ ಹೇಗಾದರೂ ತಪ್ಪಿಸಿಕೊಂಡು ಬಂದೆನು. ಇನ್ನು ನಿಶ್ಚಿಂತನಾಗಿ ರಾಮಮಂತ್ರೋಪಾಸನೆ ಮಾಡುವೆನೆಂದು ಪರಮಾನಂದಭರಿತನಾಗಿ ರಾಮಧ್ಯಾನವನ್ನು ಆರಂಭಿಸಿದರು. ಇಪ್ಪತ್ತೇಳು ದಿನಗಳವರೆಗೆ ಆಹಾರದ ಮೇಲಿನ ಆಶೆ ತೊರೆದು ಏಕಾಗ್ರಚಿತ್ತದಿಂದಲೂ, ಪರಮಭಕ್ತಿಯಿಂದಲೂ ಶ್ರೀ ರಾಮಚಂದ್ರನ ಧ್ಯಾನವನ್ನು ಮಾಡಲು ಆಗ ರಾಮಚಂದ್ರನು ತನ್ನ ಪರಮಭಕ್ತನಾದ

ಆಂಜನೆಯುನನ್ನು ಕರೆದು ಭಕ್ತಾ! ರಾಮುದಾಸನ ಬಳಿಗೆ ಹೋಗಿ ಆತನನ್ನು ಪರೀಕ್ಷೆಯಿಂದ ಪಕ್ವಗೊಳಿಸಿ ನನ್ನ ಅನುಗ್ರಹಕ್ಕೆ ಪಾತ್ರಗೊಳಿಸಿ ಬಾ ಎಂದು ಹೇಳಲು ವಾಯುಪುತ್ರನು ರಾಮಾಜ್ಞೆಯನ್ನು ಶಿರಸಾ ವಹಿಸಿ ರಾಮುದಾಸರ ಪರೀಕ್ಷೆಗಾಗಿ ಕ್ರೂರವಾದ ವ್ಯಾಘ್ರ ರೂಪತಾಳಿ ಭೀಕರವಾದ ಘರ್ಜನೆ ಮಾಡುತ್ತ ರಾಮುದಾಸರಿದ್ದೆಡೆಗೆ ಬಂದನು. ಆಗ ರಾಮುದಾಸರು ಆ ಘೋರ ಘರ್ಜನೆಯ ಶಬ್ದದಿಂದ ಧ್ಯಾನವಿಮುಕ್ತರಾಗಿ ಕಣ್ದೆರೆದು ನೋಡಲು ಎದುರಿಗೆ ಭಯಂಕರ ರೂಪವುಳ್ಳ ಹುಲಿಯೊಂದು ದುರುದುಂನೆ ನೋಡುತ್ತ ಈಗಲೇ ತಮ್ಮ ಮೇಲೆ ಬೀಳುವಂತೆ ಬರುತ್ತಿತ್ತು. ಆದರೂ ಹೆದರದೆ ಕೈಮುಗಿದು ವಾಯುಪುತ್ರನನ್ನು ಸ್ತುತಿಸಿ ಇಂತೆಂದನು— ಹೇ, ವಾಯುಪುತ್ರಾ! ಏಕೈಕ ವೀರಾ! ನೀನೀ ರೂಪದಲ್ಲಿ ಬಂದು ನನ್ನನ್ನೇಕೆ ಹೆದರಿಸುತ್ತಿರುವಿ? ನಿನ್ನೀ ಬೆದರಿಕೆಗೆ ಬೆದರುವವರಾರು? ಅಖಂಡ ಶಕ್ತಿಶಾಲಿಯಾದ ಶ್ರೀ ರಾಮನಾಮ ಬಲವು ನನಗಿರುವಾಗ ನಿನ್ನೀ ರೂಪ ನನಗೆ ಗೊತ್ತಾಗುವದಿಲ್ಲವೇ? ನನಗೆ ಗೊತ್ತು; ನೀನು ನನ್ನನ್ನು ಪರೀಕ್ಷಿಸುತ್ತಿರುವಿಯೆಂದು. ವಾಯುಪುತ್ರಾ ಕರುಣಿಸು, ಪ್ರಸನ್ನನಾಗು ಎಂದು ಬಿನ್ನೈಸಿಕೊಳ್ಳಲು ಮಾರುತಿಯು ಪ್ರಸನ್ನನಾಗಿ ತನ್ನ ನಿಜರೂಪ ದರ್ಶನಕೊಟ್ಟು, ರಾಮುದಾಸ ನೀನು ನನ್ನ ಇಂಗಿತವನ್ನರಿತ "ಸಮರ್ಥನು"ನು ಆದ್ದರಿಂದ ನಿನಗೆ ನಾನು ಸಮರ್ಥ ರಾಮುದಾಸನೆಂದು ಕರೆಯುವೆನು. ಮತ್ತು ನಿನ್ನಿಚ್ಛೆಯಂತೆ ಶ್ರೀರಾಮ ನಾಮವು ಸರ್ವೋತ್ತಮವೂ, ಸರ್ವ ಶಕ್ತಿದಾಯಕವೂ ಆಗಿರುವದು ಭಯ ಪಡಬೇಡ. ನಿನಗೆ ಶ್ರೀರಾಮ ದರ್ಶನವಾಗುವದು; ಅದಕ್ಕಾಗಿ ನೀನು ಕೂಡಲೇ ಪಂಢರಪುರಕ್ಕೆ ತೆರಳಿ ಪಾಂಡುರಂಗನನ್ನು ಸೇವಿಸೆಂದು ರಾಮಾಜ್ಞೆಯಾಗಿದೆಯೆಂದು ಹೇಳಿ ಅದೃಶ್ಯನಾದನು.

ರಾಮುದಾಸರಿಗೆ ವಾಯುಪುತ್ರನು "ಸಮರ್ಥ"ನೆಂದು ಕರೆದದ್ದರಿಂದ ಸಮರ್ಥ ರಾಮುದಾಸರೆಂದು ಪ್ರಸಿದ್ಧಿ ಹೊಂದಿದರು.

ರಾಮುದಾಸರು ಮಾರುತಿಯ ಕರುಣಾರಸವನ್ನು ಕೊಂಡಾಡುತ್ತ ಅಲ್ಲಿಂದ ಪಂಢರಪುರಕ್ಕೆ ತೆರಳಿ ಮಾರ್ಗದಲ್ಲಿ ಗಿರಿ-ಗುಡ್ಡಗಳನ್ನೂ, ಹಳ್ಳ ಹೊಳೆಗಳನ್ನೂ ದಾಡುತ್ತ ಪಂಢರಪುರಕ್ಕೆ ಬಂದುಮುಟ್ಟಿದರು.

ಪಂಢರಪುರದ ಮುಂಭಾಗದಲ್ಲಿರುವ ಚಂದ್ರಭಾಗಾ ನದಿಯಲ್ಲಿ ಸ್ನಾನ ಮಾಡಿ ಸಂಧ್ಯಾನುಷ್ಠಾನಗಳನ್ನು ತೀರಿಸಿಕೊಂಡು ಶ್ರೀ ವಿಠ್ಠಲನ ದರ್ಶನಾತುರರಾಗಿ ಸಾಧು-ಸಂತರಿಂದೊಡಗೂಡಿ, ಪಂಢರಪುರವನ್ನು ಹೊಕ್ಕರು. ಎಲ್ಲಿ ನೋಡಿದಲ್ಲಿ ಕೀರ್ತನೆಗಳು, ವಿಠ್ಠಲನಾಮ ಸಂಕೀರ್ತನೆಗಳು, ಚಿಟಿಕೆಗಳನ್ನು ಕೈಯಲ್ಲಿ ಹಿಡಿದು ತಾಳ, ಮೃದಂಗ, ತಂಬೂರಿಗಳನ್ನು ನುಡಿಸುತ್ತ "ವಿಠ್ಠಲ, ವಿಠ್ಠಲ ಜಯ ಜಯ ವಿಠ್ಠಲ, ಭಯಹರ ವಿಠ್ಠಲ"ವೆಂಬ ವಿಠ್ಠಲ ನಾಮ ಘೋಷದೊಡನೆ ನರ್ತನ ಮಾಡುತ್ತಿರುವದನ್ನು ನೋಡಿ ಆನಂದಿಸುತ್ತ ಪಂಢರಿನಾಥನ ಆಲಯಕ್ಕೆ ಬಂದು ಪಾಂಡುರಂಗನ ದಿವ್ಯದರ್ಶನ ಪಡೆದು ಆನಂದದಿಂದ ಆತನ ಸನ್ನಿಧಿಯಲ್ಲಿ ನಿಂತು, ಹೇ....ದೇವಾದಿದೇವಾ ಪಾಂಡುರಂಗಾ, ನೀನನ್ಯರಲ್ಲಿ ಆಯಾ ಕಾಲಕ್ಕನುಸರಿಸಿ ವಿವಿಧ ರೂಪಗಳನ್ನು ಧರಿಸಿ ಜಗತ್ಕಲ್ಯಾಣ ಮಾಡುತ್ತಿರುವ ನಿನ್ನ ಲೀಲಾ ವಿಲಾಸವು ಅನಂತವಾದುದು. ಭಕ್ತರಕ್ಷಕಾ, ದಯಾಘನನೇ ನೀನು ಶ್ರೀರಾಮ ರೂಪದಿಂದ ನನಗೆ ದರ್ಶನಕೊಡು ಎಂದು ಭಕ್ತಿಯಿಂದ ಭಜಿಸಲು ಪಾಂಡುರಂಗನು ಲೋಕಪೂಜ್ಯನಾದ ಶ್ರೀರಾಮಚಂದ್ರನ ರೂಪದಿಂದ ಸಮರ್ಥರಾಮದಾಸರಿಗೆ ದರ್ಶನಕೊಟ್ಟು ಅವರ ಅಭಿಷ್ಟೆಯನ್ನು ಪೂರೈಸಿ ಅದೃಶ್ಯನಾದನು. ರಾಮದಾಸರು ಸಂತೋಷಭರಿತರಾಗಿ ಶ್ರೀರಾಮ ಮೂರ್ತಿಯನ್ನು ಕೊಂಡಾಡಿ ಸಾಷ್ಟಾಂಗನಮಸ್ಕಾರ ಮಾಡಿ, ಅಲ್ಲಿಂದ ತೆಲಿಳಿ ದೇಶಸಂಚಾರ ಮಾಡುತ್ತಾ ಹೊರಟರು. ಆಗ ಅನೇಕ ಗ್ರಂಥಗಳನ್ನು ರಚಿಸಿ ಜನತೆಗೆ ಜ್ಞಾನಯೋಗವನ್ನುಂಟು ಮಾಡಿಕೊಟ್ಟರು.

ಶ್ರೀ ಸಮರ್ಥರು ಸಂಚಾರ ಮಾಡುತ್ತಾ, ಮಾಡುತ್ತಾ ಛತ್ರಪತಿ ಶಿವಾಜಿಯ ರಾಯಗಡ ಕೋಟೆಯನ್ನು ಕಟ್ಟಿಸುವಲ್ಲಿಗೆ ಬಂದರು. ಆಗ ಛತ್ರಪತಿಯು ಅವರನ್ನು ಭಯಭಕ್ತಿಯಿಂದಲೂ, ಆದರ ಸತ್ಕಾರಗಳಿಂದಲೂ ಎದುರುಗೊಂಡು ಕರೆದೊಯ್ದು ಅತಿಥಿಸತ್ಕಾರಗಳಿಂದ ಸೇವೆಮಾಡಿ ತಾನು ಕಟ್ಟಿಸುತ್ತಿದ್ದ ಕೋಟೆಯನ್ನು ತೋರಿಸಲು ಕರೆದೊಯ್ದನು. ಆಗ ಶ್ರೀಸಮರ್ಥರು ಸೂಕ್ಷ್ಮದೃಷ್ಟಿಯಿಂದ ಶಿವಾಜಿಮಹಾರಾಜರನ್ನು ನೋಡಿ ಅವರಲ್ಲಿ ಉಂಟಾಗಿದ್ದ "ಅನೇಕ ಜನರಿಗೆ ನಾನು ಅನ್ನ ಹಾಕುತ್ತೇನೆ" ಎಂಬ ಗರ್ವವನ್ನು ಕಂಡುಹಿಡಿದು ಇದನ್ನು ಹಾಗೆ ಬಿಟ್ಟರೆ ಅನರ್ಥವಾಗು

ವದೆಂದು ಆಲೋಚಿಸಿ ಅದನ್ನು ಮುರಿಯಲು ತಕ್ಕ ಉಪಾಯವನ್ನು ಕಂಡು ಹಿಡಿದರು. ಅಲ್ಲಿಯೇ ಸಮೀಪದಲ್ಲಿ ಬಿದ್ದಿದ್ದ ಒಂದು ದೊಡ್ಡ ದುಂಡು ಬಂಡೆಯನ್ನು ಕಂಡು, ಶಿವುಬಾ ಈ ಬಂಡೆಯನ್ನು ಒಡೆಯಿಸು ಎಂದು ಆಜ್ಞೆ ಮಾಡಲು ಮಹಾರಾಜರು ಇಬ್ಬರು ವಡ್ಡರನ್ನು ಕರೆದು ಈ ಬಂಡೆಯನ್ನು ಮಧ್ಯದಲ್ಲಿ ಒಡೆಯಿರಿ ಎಂದು ಹೇಳಲು, ಅವರು ದೊಡ್ಡ ಸುತ್ತಿಗೆಯಿಂದ ಜೋರಾಗಿ ಹೊಡೆಯಲು ಆ ಬಂಡೆಯು ಎರಡು ಹೋಳಾಗಿಬಿದ್ದಿತು. ಆದರೆ ಅದರ ಮಧ್ಯದಲ್ಲಿ ಒಂದು ತಂಬಿಗೆಯಷ್ಟು ನೀರೂ, ಒಂದು ಕಪ್ಪೆಯೂ ಇದ್ದಿತು. ರಾಮದಾಸರು ಛತ್ರಪತಿಯನ್ನು ಕುರಿತು ಶಿವುಬಾ, ನೋಡಿದೆಯಾ ಆ ಕಪ್ಪೆಯನ್ನು, ಇದು ಎಷ್ಟೋ ದಿನಗಳಿಂದ ಈ ಬಂಡೆಯ ಮಧ್ಯದಲ್ಲಿತ್ತು. ಆದರೆ ಇದಕ್ಕೆ ಅನ್ನವನ್ನಿಟ್ಟವರಾರು? ಎಂದು ಕೇಳಲು ಮಹಾರಾಜರ ಮುಖ ಸಪ್ಪಗೆ ಆಯಿತು. ನನ್ನಲ್ಲಿ ಉಂಟಾಗಿದ್ದ ಗರ್ವವನ್ನು ಮುರಿಯಲು ಮಾಡಿದ ಆಟವೆಂದು ಮನಗಂಡು ಶ್ರೀ ಸಮರ್ಥರ ಚರಣಗಳಿಗೆ ವಂದಿಸಿ ಗುರುಗಳೇ ! ನನ್ನನ್ನು ಕ್ಷಮಿಸಿರಿ, ನನಗೆ ಜ್ಞಾನೋದಯವಾಯಿತು ಎಂದು ಬೆಸಗೊಳ್ಳಲು ಆಗ ಸಮರ್ಥರು ಶಿವುಬಾ ಎಂದು ವಾತ್ಸಲ್ಯದಿಂದ ಹಿಡಿದೆತ್ತಿ, ಯಾರು ಯಾರಿಗೆ ಅನ್ನ ಹಾಕುವರು ! ನೀನು ಮಾಡಿದ ಎಲ್ಲವೂ ನಿಮಿತ್ತ ಮಾತ್ರ ನಿನ್ನದಾಗಿದೆ, ಆದರೆ ಅದು ಭಗವಂತನ ವಿಚಾರದಂತೆ ನಡೆಯುವದು ತಿಳಿ ಯಿತೆ. ಇನ್ನೂ ನಿನ್ನಿಂದ ಮಹತ್ತರ ಕಾರ್ಯಗಳಾಗಬೇಕಾಗಿದೆ, ಮುಸಲ್ಮಾನರಿಂದ ಹಿಂದೂ ಧರ್ಮವನ್ನು ಉಳಿಸಬೇಕಾಗಿದೆ, ಅದಕ್ಕಾಗಿ ನೀನು ಮಾಡಿದ ಕಾರ್ಯದಲ್ಲಿ ಯಶದೊರೆಯುವದು ಎಂದು ಆಶೀರ್ವದಿಸಿ ಅಲ್ಲಿಂದ ತೆರಳಿದರು.

ಈ ರೀತಿಯಾಗಿ ಶಿವಾಜೀ ಮಹಾರಾಜರಿಗೆ ಶ್ರೀ ಸಮರ್ಥರು ರಾಜಕಾರಣ ವಿಷಯಗಳಲ್ಲಿಯೂ, ಯುದ್ಧಕಲೆಯಲ್ಲಿಯೂ, ಆರ್ಥಿಕ ಅಡಚಣೆಯಲ್ಲಿಯೂ ಮಾರ್ಗದರ್ಶಕರಾಗಿದ್ದರು.

——೦——

# ೧೨. ಸಂತಸಖೂಬಾಯಿ

ಕರವೀರಪುರವೆಂಬ ಪಟ್ಟಣದಲ್ಲಿ ಕೃಪಣರಾಯನೆಂಬ ಬ್ರಾಹ್ಮಣನು ಗಯ್ಯಾಳಿಬಾಯಿಯೆ.ಂಬ ಸತಿಯೊಡನೆ ಸಂಸಾರ ಮಾಡಿಕೊಂಡಿದ್ದನು. ಆತನು ಷಟ್‌ಶಾಸ್ತ್ರಗಳಲ್ಲಿ ನಿಪುಣತೆಯನ್ನು ಪಡೆದ ಪಂಡಿತನಾಗಿದ್ದರೂ ಕಡುಲೋಭಿಯಾಗಿದ್ದನು. ಅಂತೆಯೇ ಇವನಿಗೆ ಕೃಪಣರಾಯನೆಂಬ ರೂಢಿನಾಮವು ಬಂದಿತ್ತು. ಆತನ ಹೆಂಡತಿಯಾದರೂ ಮಹಾ ಕ್ರೂರಳೂ, ಪರನಿಂದಕಳೂ ಆಗಿದ್ದು, ಮನೆಗೆಲಸಗಳನ್ನೆಲ್ಲ ಪತಿಯಿಂದಲೇ ಮಾಡಿಸುತ್ತಿದ್ದಳು. ಆಕೆಯನ್ನು ಮಾತನಾಡಿಸಲು ಎಲ್ಲರೂ ಹೆದರುತ್ತಿದ್ದರು ಈ ದಂಪತಿಗಳಿಗೆ ಓದುರಾಯನೆಂಬ ಮಗನಿದ್ದನು. ಇವನು ಸಕಲಶಾಸ್ತ್ರ ಪ್ರವೀಣನಾಗಿದ್ದರೂ ನ್ಯಾಯಾನ್ಯಾಯಗಳ ವಿವೇಚನೆಯಿಲ್ಲದವನಾಗಿದ್ದನು ಆತನ ವಿವಾಹಕ್ಕೆ ತಕ್ಕ ವಯಸ್ಸಾಗಿದ್ದರಿಂದ ಕೃಪಣರಾಯನು ಕನ್ಯಾ ನಿಶ್ಚಯಕ್ಕಾಗಿ ಹೊರಟು ಅನೇಕ ಗ್ರಾಮಗಳನ್ನು ಸುತ್ತಿ ಪಂಡರಪುರಕ್ಕೆ ಬಂದನು. ಅಲ್ಲಿ ವಿಚಾರಿಸುತ್ತಿರಲು ಸಮೀಪದ ಹಳ್ಳಿಯೊಂದರಲ್ಲಿ ಓರ್ವ ಬ್ರಾಹ್ಮಣನ ಮನೆಯಲ್ಲಿ, ಗುಣವತಿಯೂ, ವಿದ್ಯಾವತಿಯೂ ಸುರೂಪಿಯೂ ಆದ ಸಖೂಬಾಯಿಯೆಂಬ ಕನ್ಯೆ ಇರುವಳೆಂದು ತಿಳಿದುಕೊಂಡವನಾಗಿ ಆ ಗ್ರಾಮಕ್ಕೆ ತೆರಳಿದನು. ಅಲ್ಲಿ ಸಖೂಬಾಯಿಯ ತಂದೆಯು ಕೃಪಣರಾಯನನ್ನು ಮನೆಗೆ ಕರೆತಂದು ಆತನ ಯೋಗಕ್ಷೇಮವನ್ನು ವಿಚಾರಿಸಿ ಆ ದಿನ ತನ್ನ ಮನೆಯಲ್ಲಿಯೇ ಊಟೋಪಚಾರಗಳಿಂದ ಆತನಿಗುಪಚರಿಸಿದನು. ಊಟದ ನಂತರ ತಾನುಬಂದ ಕಾರ್ಯಾರ್ಥವನ್ನು ಕೃಪಣರಾಯರು ತಿಳಿಸಲು, ಉಭಯತರು ಕುಲಗೋತ್ರಗಳನ್ನು ಪರಿಶೀಲಿಸಿ ಎಲ್ಲವೂ ಅನುಕೂಲವಾಗಿದೆಯೆಂದು ತಿಳಿದ ಬಳಿಕ, ಪುರೋಹಿತರನ್ನು ಕರೆಯಿಸಿ ಲಗ್ನ ಪತ್ರಿಕೆಯನ್ನು ಬರೆಯಿಸಿದರು. ಲಗ್ನವು ಕರವೀರಪುರದಲ್ಲಿಯೇ ನಡೆಯಬೇಕೆಂದು ನಿಶ್ಚಯಿಸಿದರು ಅದರಂತೆ ಕುಟುಂಬ ಪರಿವಾರ ಸಮೇತ ಮೂರುದಿನಗಳ ಮುಂಚಿತವಾಗಿ ಕರವೀರಪುರವನ್ನು ಸೇರಿದರು. ವಿವಾಹವು ಸಾಂಗವಾಗಿ ನೆರವೇರಿತು. ಸಖೂಬಾಯಿಯ ವಿವಾಹಕ್ಕೆ ಬಂದಿದ್ದ ಬಂಧು ಮಿತ್ರರೆಲ್ಲರಿಗೂ ವಸ್ತ್ರಭೂಷಣಗಳಿಂದ ಸತ್ಕರಿಸಲು ಅವ

ರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಕೆಲದಿನಗಳ ತರುವಾಯ ಸಖೂಬಾಯಿಯ ತಂದೆತಾಯಿಗಳು ಆಕೆಯನ್ನು ಗಂಡನಮನೆಗೆ ಕಳಿಸಿ ಕೊಟ್ಟರು ಅಂದು ಪತಿಯಮನೆಯನ್ನು ಸೇರಿದ ಸಖೂಬಾಯಿಯು ತವರು ಮನೆಯನ್ನು ಒಮ್ಮೆಯೂ ಕಾಣಲಿಲ್ಲ ಇಂತುಪತಿಸೇವೆಯಲ್ಲಿ ನಿರತಳಾದಳು.

ಸಖೂಬಾಯಿಯು ಬಾಲ್ಯದಿಂದಲೂ ಶ್ರೀಕೃಷ್ಣಧ್ಯಾನದಲ್ಲಿ ಆಸಕ್ತಿಯನ್ನಿಟ್ಟಿದ್ದಳು. ಅಂತೆಯೇ ಅತ್ತೆಯ ಮನೆಯಲ್ಲಿಯೂ ಪಾಂಡುರಂಗನ ದಿವ್ಯನಾಮಸ್ಮರಣೆ ಮಾಡುತ್ತ ಆನಂದಬಾಷ್ಪಗಳನ್ನು ಸುರಿಸುತ್ತಿದ್ದಳು. ಇಂತು ಪತಿವ್ರತಾಶಿರೋಮಣಿಯಾದ ಸಖೂಬಾಯಿಯು ಅತ್ತೆಮಾವಂದಿರು ಮೊದಲಾದ ಗುರುಹಿರಿಯರಲ್ಲಿ ಮರ್ಯಾದೆಯನ್ನಿಟ್ಟು, ಕರುಣರಸನಿಧಿಯಾಗಿ ಗೃಹಲಕ್ಷ್ಮಿಯಂತೆ ಇದ್ದಳು. ಮನೆಗೆಲಸಗಳಲ್ಲಿ ಬಹಳ ಜಾಣ್ಮೆಯುಳ್ಳವಳಾಗಿದ್ದಳು. ಒದರಬಡಕಳೂ ಅಸೂಯಾಪರ ಸ್ವಭಾವದವಳೂ ಆದ ಅತ್ತೆ ಕೂಡ ಸೊಸೆಯ ಉಪಚಾರಕ್ಕೆ ಸಂತುಷ್ಟಳಾಗಿದ್ದಳು. ಆದರೆ ಒಂದು ವಿಷಯದಲ್ಲಿ ಆಗಾಗ್ಗೆ ತೊಂದರೆಪಡಸುತ್ತಿದ್ದಳು. ಅದೇನಂದರೆ ತನಗೆ ಜನ್ಮದಾರಭ್ಯ ಅಭ್ಯಾಸವೇ ಇಲ್ಲದ ದೈವಭಕ್ತಿಯು ಸೊಸೆಯಲ್ಲಿ ನಲಿದಾಡುತ್ತಿರುವುದು ಆಕೆಗೆ ಸ್ವಲ್ಪವೂ ಸರಿಬರುತ್ತಿರಲಿಲ್ಲ.

ಸೊಸೆಯ ಹರಿಭಕ್ತಿಯಿಂದ ಮಗನ ಸಂಸಾರವು ಮುರಿದುಬೀಳುವದೆಂದು ನಂಬಿದಳು ಈ ಕಾರಣದಿಂದ ಸೊಸೆಯನ್ನು ಅಸೂಯಾಭಾವದಿಂದ ಕಾಣತೊಡಗಿದಳು. ಯಾವದಾದರೊಂದು ಕಾರಣದಿಂದ ಆಕೆಯನ್ನು ಬಯ್ಯತೊಡಗಿದಳು ಇಂತು ಅತ್ತೆಯಿಂದುಂಟಾಗುತ್ತಿದ್ದ ತಿರಸ್ಕಾರವನ್ನು ಸ್ವಲ್ಪವೂ ಮನಸ್ಸಿಗೆ ಹಚ್ಚಿಕೊಳ್ಳದೆ ಪುಂಡಲೀಕನ ಸೇವೆಯನ್ನು ಏಕನಿಷ್ಠೆಯಿಂದ ನಡೆಸುತ್ತಿದ್ದಳು. ಭಗವದ್ಭಕ್ತರಾರಾದರೂ ಭಜನೆಮಾಡುತ್ತಾ ಮನೆಗೆ ಬಂದರೆ ಅವರನ್ನು ಗೌರವಿಸಿ, ಅವರು ಹಾಡುತ್ತಿದ್ದ ಭಜನಾ ಹಾಡುಗಳನ್ನು ನಿಷ್ಠೆಯಿಂದ ಕೇಳಿ ಕಾಣಿಕೆಕೊಟ್ಟು ಕಳಿಸುತ್ತಿದ್ದಳು ಇಂತು ಮಾಡುತ್ತಿದ್ದ ಹರಿಸೇವೆಯನ್ನು ಆಕೆಯ ಅತ್ತೆಯು ಕಂಡು, ಸಹಿಸಲಾರದೆ ಹೇಗಾದರೂ ಮಾಡಿ ಇದನ್ನು ಬಿಡಿಸಬೇಕೆಂದು ಪಣತೊಟ್ಟಳು ಮೊದಲು ಸೌಮ್ಯರೀತಿಯಲ್ಲಿ ಹೇಳಿದಳು, ತದನಂತರ ಬೈದುಹೇಳಿದಳು. ಅನಂತರ ಹರಿಪೂಜೆಯನ್ನು ಮಾಡುತ್ತಿದ್ದಾಗ ಬಲಾತ್ಕಾರದಿಂದ ಬಡಿದು

ಬಿಡಿಸತೊಡಗಿದಳು. ಇಂತೂ ಸಖೂಬಾಯಿಯ ಹರಿಸೇವೆಗೆ ಪ್ರಬಲವಾದ ವಿರೋಧವುಂಟಾಯಿತು. ಆದರೂ ಸುಗುಣೆಯಾದ ಸಖೂಬಾಯಿ ತನಗೊದಗಿದ ಕಷ್ಟವನ್ನು, ಪಾಂಡುರಂಗನಲ್ಲೇ ತೋರೆಯಿಟ್ಟುಕೊಳ್ಳುತ್ತಿದ್ದಳಲ್ಲದೆ ಅನ್ಯರಿಗಾರಿಗೂ ಹೇಳಿಕೊಳ್ಳುತ್ತಿರಲಿಲ್ಲ.

ಅತ್ತೆ ದ್ವೇಷಾಸೂಯದವಳು, ಮಾವ ಸವಿನಯ ಸ್ವಭಾವವಿಲ್ಲದವನು, ಗಂಡನು ನ್ಯಾಯಾನ್ಯಾಯ ವಿವೇಕವಿಲ್ಲದವನು ಇಂತಿರುವ ಇವರು ದೈವ ಭಕ್ತಳಾದ ಸಖೂಬಾಯಿಗೆಷ್ಟು ಕಠಿಣ ಕಷ್ಟಗಳನ್ನು ಕೊಡುವರೆಂಬುದನ್ನು ಊಹಿಸುವದು ಕೂಡ ಅಸಾಧ್ಯ.

ಈ ವರೆಗೆ ಅತ್ತೆಯಿಂದ ಕಷ್ಟ ಕಡಿಮೆಯೆಂದೆಣಿಸಿ ಮಾವನೂ ಭಾಗ ತಗೊಂಡನು. ಬರಬರುತ್ತ ಗಂಡನೂ ಕೈಗೂಡಿದನು. ಇಂತೀ ಮೂವರು ಏಕೈಕ ಅಭಿಪ್ರಾಯವುಳ್ಳವರಾಗಿ ಸಖೂಬಾಯಿಗೆ ಅನಂತ ರೀತಿಯಲ್ಲಿ ಹಿಂಸೆಪಡಿಸಿದರು. ಕೂತರೂ ತಪ್ಪು, ನಿಂತರೂ ತಪ್ಪು, ಕೆಲಸ ಮಾಡಿದರೂ ತಪ್ಪು, ಬಿಟ್ಟರೂ ತಪ್ಪು ಮಾಡತಕ್ಕದ್ದೇನು ? ಬೈಗಳ ಸುರಿಮಳೆಯೊಡನೆ ಬಡಿತದ ಸಿಡಿಲುಗಳೂ ಉಂಟಾದವು. ಆದರೂ ಪ್ರತ್ಯುತ್ತರವನ್ನು ಕೊಡಳು. ಶಾಂತ ರೀತಿಯಿಂದ ಎಲ್ಲವನ್ನೂ ಸಹಿಸಿಕೊಳ್ಳುವಳು. ಆದರೂ ಅತಿ ದುಃಖವಾದಾಗ– ಹೇ ಪಾಂಡುರಂಗಾ ಇದು ನಿನ್ನ ಇಚ್ಛೆಯೋ ! ನನ್ನ ಪ್ರಾರಬ್ಧವೋ ತಿಳಿಯದು. ಎಂದು ಅಂದು ಒಂದು ತೊಟ್ಟು ಕಣ್ಣೀರುದುರಿಸಿ ಪುನಃ ನಗುಮುಖದೊಡನೆ ಕೆಲಸ ಕೈಕೊಳ್ಳುತ್ತಿದ್ದಳು.

ಇಂತು ಸಖೂಬಾಯಿಯ ಕಷ್ಟಗಳನ್ನು ಕಂಡನೆರೆಹೊರೆಯವರು ಸಂತಾಪಗೊಳ್ಳುತ್ತಿದ್ದರು. ಆದರೂ ಉಪಾಯವಿರಲಿಲ್ಲ. ಯಾಕಂದರೆ ಸಖೂಬಾಯಿಯ ಅತ್ತೆಮಾವಂದಿರ ದುಷ್ಟಸ್ವಭಾವಕ್ಕೆ ಬೆದರಿ ಅವರಿಗೆ ಬುದ್ಧಿವಾದ ಹೇಳುವ ಗೊಡವೆಗೆ ಹೋಗುತ್ತಿರಲಿಲ್ಲ. ಅವರಲ್ಲಿಯೇ ಕೆಲವರು ಧೈರ್ಯಗೊಂಡು ಬಂದು, ಹೇ ಕೃಪಣರಾಯರೆ! ಹೀಗೆ ಅನ್ಯಾಯವಾಗಿ ನಿಮ್ಮ ಸೊಸೆಯನ್ನು ಹಿಂಸೆಪಡಿಸುವದು, ನಿಮ್ಮಂಥ ಪಂಡಿತರಿಗೆ ಶೋಭಿಸಲಾರದು ದೇವಭಕ್ತ ನಿಮ್ಮ ಸೊಸೆಯನ್ನು ಗೌರವಿಸುವ ಬದಲು ಹಿಂಸಿಸುತ್ತಿರುವಿರಲ್ಲಾ ನಿಮ್ಮಲ್ಲಿ ಕರುಣೆ ಇಲ್ಲವೇ ? ದಯಾರಸವಿಲ್ಲದ ಪಾಂಡಿತ್ಯ

ದಿಂದೇನು ಫಲ; ಎಂದು ಹೇಳಿದ ಬುದ್ಧಿಮಾತುಗಳಿಂದ ಅವರು ಮತ್ತಷ್ಟು ಕೋಪಗೊಂಡರೇ ಹೊರ್ತು ಮತಿವಂತರಾಗಲಿಲ್ಲ.

ಇನ್ನು ಕೆಲವರು ಸಖೂಬಾಯಿಯನ್ನು ಕಂಡು ಏನಮ್ಮಾ! ನಿನ್ನ ತಂದೆ ತಾಯಿಗಳಿಲ್ಲವೇ? ನಿನ್ನ ಕಷ್ಟಗಳನ್ನು ಪರಿಹರಿಸುವವರಾರೂ ಇಲ್ಲವೆ? ಎಂದು ಕೇಳಲು ಆಗಾಕೆಯು ಮಾತೆಯರೇ, ಮಹಾ ಮಹಾ ಮಹಾತ್ಮರನ್ನೇ ಬಿಡದ ಪ್ರಾರಬ್ಧವು ನನ್ನಂಥ ಪಾಮರಳನ್ನು ಬಿಡುವದೇ? ಅನಾದಿಯೂ, ಅನಂತನೂ, ಅಪ್ರಮೇಯನೂ, ಭಕ್ತವತ್ಸಲನೂ ಆದ ಆ ಪಾಂಡುರಂಗ ಪರಬ್ರಹ್ಮನೇ ನನ್ನ ತಂದೆ. ನಿತ್ಯಕಲ್ಯಾಣಿಯೂ, ಅಖಿಲ ಜಗನ್ಮಾತೆಯೂ ಆದ ಆ ರುಕ್ಮಾಬಾಯಿಯೇ ನನ್ನ ತಾಯಿ. ಅಖಂಡ ಭಕ್ತಿಭಾವದಿಂದ ಪುಂಡರೀಕನನ್ನು ಭಜಿಸುವವರೇ ನನ್ನ ಒಡಹುಟ್ಟಿದವರು. ಇಂತು ಉತ್ತರ ಕೊಟ್ಟ ಸಖೂಬಾಯಿಯ ಅಮೃತ ನುಡಿಗಳನ್ನು ಕೇಳುತ್ತಲೇ ಇಂಥ ಭಾಗ್ಯ ಲಕ್ಷ್ಮಿಯನ್ನು ಸೊಸೆಯನ್ನಾಗಿ ಪಡೆದದ್ದು ತಮ್ಮ ಭಾಗ್ಯೋದಯವೆಂದು ತಿಳಿಯದೆ ಇರುವವರು ದುರಾತ್ಮರೇ ಸರಿ! ಆಕೆಯನ್ನು ರಕ್ಷಿಸುವವನು ಆ ಪಂಢರೀನಾಥನೇ ಎಂದು ಅನ್ನುತ್ತಾ ಹೋದರು.

ಇಂತಿರಲು ಕಾರ್ತೀಕ ಶುದ್ಧ ಏಕಾದಶಿ ಸಮೀಪಿಸಿತು. ಅಂದು ಪಂಢರೀಪುರದಲ್ಲಿ ನಡೆಯುತಕ್ಕ ಉತ್ಸವಕ್ಕಾಗಿ ದೇಶ ದೇಶಗಳಿಂದ ಭಕ್ತ ಜನರು ಗುಂಪು ಗುಂಪಾಗಿ ಹೋಗುತ್ತಿದ್ದರು. ಪಂಢರೀಪುರದಲ್ಲಿ ಪುಂಢರೀಕವರದ ಸೇವೆಯು ಬಹು ವಿಜೃಂಭಣೆಯಿಂದ ನಡೆಯುವದೆಂಬ ವಾರ್ತೆಯನ್ನು ಸಖೂಬಾಯಿಯು ಕೇಳಿದ್ದಳು. ಆ ಉತ್ಸವಕ್ಕೆ ಹೋಗಿ ನೋಡಿ ಬರಬೇಕೆಂಬ ಆಶೆ ಆಕೆಯಲ್ಲಿಯೂ ಮೂಡಿತು. ಆ ವೇಳೆಗೆ ಉತ್ಸವಕ್ಕೆ ಹೋಗತಕ್ಕ ಭಕ್ತಜನರದೊಂದು ಗುಂಪು ಒಂದು ಕರವೀಪುರದ ಕೃಷ್ಣವೇಣಿ ತೀರದಲ್ಲಿಳಿದು ಸ್ನಾನಾದಿ ನಿತ್ಯಾನುಷ್ಠಾನಗಳನ್ನು ತೀರಿಸಿಕೊಂಡು ತಾಳ, ತಂಬೂರಿ, ಮೃದಂಗಗಳನ್ನು ಬಾರಿಸುತ್ತ ಹರಿಭಜನೆಗಾರಂಭ ಮಾಡಿದರು. ಸಖೂಬಾಯಿಯು ತನ್ನ ಸಖಿಯಿಂದೊಡಗೂಡಿ ನೀರಿಗಾಗಿ ಕೊಡಗಳನ್ನು ತಗೊಂಡು ಅಕಸ್ಮಾತ್ತಾಗಿ ಕೃಷ್ಣಾನದಿಗೆ ಬಂದಳು. ಅಲ್ಲಿ ನಡೆದಿದ್ದ ಹರಿಭಜನೆಯನ್ನು ಕೇಳಿ ಅತ್ಯಾನಂದಭರಿತಳಾದಳು. ಆ ವರೆಗೆ ಆಕೆಯ ಹೃದಯದಲ್ಲಿ ಹುದುಗಿಕೊಂಡಿದ್ದ ಭಕ್ತಿರಸವು ಹೊರಹೊಮ್ಮಿತು. ಅವರ

ಭಜನೆಯನ್ನು ತದೇಕಚಿತ್ತದಿಂದ ಕೇಳುತ್ತ ಅಲ್ಲಿಯೇ ನಿಂತುಕೊಂಡಳು. ಅವರು ಭಜನೆಯನ್ನು ಮುಗಿಸಿ ಪಂಡರೀಪುರಕ್ಕೆ ಹೊರಡಲನುವಾದರು ಆಗ ಸಖೂಬಾಯಿಯು ಮನೆಗೆ ಹೋಗಲು ಮನ ಒಪ್ಪದೆ ಅವರೊಡನೆ ತಾನೂ ಪಂಡರೀಪುರಕ್ಕೆ ಹೋಗಲು ನಿರ್ಧರಿಸಿದ ಸಂಗತಿಯನ್ನು ಮನೆಯಲ್ಲಿ ತಿಳಿಸೆಂದು ತನ್ನ ಗೆಳತಿಗೆ ಹೇಳಿಕಳಿಸಿದಳು. ಅದರಂತೆ ಆಕೆಯು ಸಖೂಬಾಯಿಯ ಮನೆಗೆ ಬಂದು ಆಕೆಯ ಅತ್ತೆಗೆ ಸಖೂಬಾಯಿ ತಿಳಿಸಿದ ಸಂಗತಿಯನ್ನು ಹೇಳಿದಳು, ಈ ಸಂಗತಿಯನ್ನು ಸಖೂಬಾಯಿಯ ಗಂಡನು ಕೇಳಿ ಕಡುಕೋಪಗೊಂಡು ಭರಭರನೇ ಹೊರಟು ಭಜನೆಯ ಗುಂಪನ್ನು ಸೇರಿ ಅಲ್ಲಿದ್ದ ಸಖೂಬಾಯಿಯನ್ನು ಆಕೆಯ ಕೂದಲು ಹಿಡಿದು ಎಳೆತಂದು ಚನ್ನಾಗಿ ಥಳಿಸಿ ಮನೆಯಲ್ಲಿಯ ಒಂದು ಮೂಲೆಯಲ್ಲಿಯ ಕಂಬಕ್ಕೆ ಕಟ್ಟಿ ಹಾಕಿದನು. ಅನ್ನ ನೀರುಗಳನ್ನು ಬಂದುಮಾಡಿ ಕಠಿಣವಾಗಿ ಪೀಡಿಸಿದನು. ಆದರೂ ಅತ್ತೆಮಾವಂದಿರ ಮೇಲಾಗಲೀ ಗಂಡನ ಮೇಲಾಗಲೀ ಕ್ರೋಧಗೊಳ್ಳಲಿಲ್ಲ. ಅವರನ್ನು ಬಯ್ಯಲಿಲ್ಲ. ಆದರೆ ಆ ಪಾಂಡುರಂಗನ ಸನ್ನಿಧಿಯಲ್ಲಿ ನಡೆಯುತಕ್ಕ ಉತ್ಸವವನ್ನು ಕಣ್ಣಾರೆ ಕಂಡು ಸಂತೋಷಪಡುವ ಭಾಗ್ಯ ತನಗಿಲ್ಲವಾಯಿತಲ್ಲಾ ಎಂದು ನೊಂದುಕೊಂಡಳು. ಇಂತು ಪಾಂಡುರಂಗನ ಚರಣಕಮಲಗಳಲ್ಲಿ ತನ್ನ ಚಿತ್ತವನ್ನು ಸಲ್ಲಿಸಿದಳು.

ಇಂತು ಸಖೂಬಾಯಿಯ ಸಂಕಷ್ಟಗಳನ್ನರಿತ ಶ್ರೀ ರುಕ್ಮಿಣೀ ವಲ್ಲಭನು ಆಕೆಯ ಸಂಕಷ್ಟಗಳನ್ನು ಸರಿಪಡಿಸಿ, ಉತ್ಸವಕ್ಕೆ ಹೋಗಬೇಕೆಂಬಾಕೆಯ ಬಯಕೆಯನ್ನು ಈಡೇರಿಸಬೇಕೆಂದು ನಿರ್ಧರಿಸಿದನು. ಇಂತು ಪಾಂಡುರಂಗನು ಕರುಣಾರಸನಿಧಿಯಾದ ಶ್ರೀ ರುಕ್ಮಾಯಿಗಿಂತೆಂದನು ದೇವೀ ಕರವೀರಪುರದಲ್ಲಿರುವ ಸಖೂಬಾಯಿಯೆಂಬ ನನ್ನ ಪರಮ ಭಕ್ತಳು ನನ್ನ ಉತ್ಸವಕ್ಕೆ ಬರಲು ಪ್ರಯತ್ನಿಸುತ್ತಿರಲು ಆಕೆಯನ್ನು, ಆಕೆಯ ಅತ್ತೆ ಮಾವಂದಿರೂ ಗಂಡನೂ ಕೂಡಿ ನಿರ್ಬಂಧಪಡಿಸಿ ಕಂಬಕ್ಕೆ ಕಟ್ಟಿಹಾಕಿದ್ದಾರಲ್ಲದೆ ಬಹು ವಿಧದಲ್ಲಿ ಹಿಂಸೆಪಡಿಸುತ್ತಿದ್ದಾರೆ. ಆದಕಾರಣ ನಾನೀಗಲೇ ಆಕೆಯನ್ನು ರಕ್ಷಿಸಲು ಅಲ್ಲಿಗೆ ತೆರಳುವೆನು ಎಂದು ಹೇಳಿ ಹೊರಟು ಹೋದನು.

ಮಧ್ಯರಾತ್ರಿಯ ಸಮಯದಲ್ಲಿ ಶ್ರೀ ಪಾಂಡುರಂಗನು ಸಖೂಬಾಯಿಯಂತೆ ಸ್ತ್ರೀ ವೇಷ ಧರಿಸಿ ಅವರ ಮನೆಗೆ ಬಂದು, ಸಖೂಬಾಯಿಯು

ಎದುರು ನಿಲ್ಲಲು ಆಕೆಯು ಬಂದವಳನ್ನು ಕುರಿತು— ಏನವ್ವಾ ನೀನಾರು, ಎಲ್ಲಿಂದ ಬಂದೆ, ಯಾಕೆ ಬಂದಿಯೆಂದು ಕೇಳಲು ಆ ಮಾಯಾ ಸ್ತ್ರೀಯು ನಾನು ಪಂಢರೀಪುರಕ್ಕೆ ತೆರಳುತ್ತಿರುವ ಯಾತ್ರಿಕಳು, ದಾರಿಯಲ್ಲಿ ನಿನ್ನ ವಿಷಯವನ್ನರಿತು ನಿನ್ನನ್ನೂ ಸಂಗಡ ಕರೆದೊಯ್ಯಬೇಕೆಂದು ಬಂದೆ. ನಿನ್ನಂಥ ಭಕ್ತಳನ್ನು ಸಂಗಡ ಕರೆದೊಯ್ದರೆ ಹರಿ ಮಹಿಮೆಯನ್ನು ವರ್ಣಿಸುತ್ತ ದಾರಿಯನ್ನು ಸರಳವಾಗಿ ನಡೆಯಬಹುದೆಂದು ತಿಳಿದು ನಿನ್ನಲ್ಲಿಗೆ ಬಂದೆನು. ದಯವಿಟ್ಟು ನೀನೂ ನನ್ನ ಸಂಗಡ ಬರುವೆಯಾ ? ಎಂದಳು. ಅದಕ್ಕೆ ಸಖೂಬಾಯಿಯು ಅವ್ವಾ, ಇಲ್ಲಿಯ ಸಂಗತಿಯು ನಿನಗೆ ಗೊತ್ತಿದ್ದಂತೆ ಕಾಣುವದಿಲ್ಲ; ನಾನು ಪಂಢರೀಪುರಕ್ಕೆ ಹೋಗಬೇಕೆಂಬ ಕಾರಣದಿಂದಲೇ ನಾನು ಈ ರೀತಿ ಬಂಧನಕ್ಕೊಳಗಾಗಿದ್ದೇನೆ; ಪತಿಯನ್ನೊಳಗೊಂಡು ಅತ್ತೆ-ಮಾವಂದಿರು ಕಡುಕೋಪಗೊಂಡಿದ್ದಾರೆ. ನಿನ್ನೀ ಪ್ರಯಾಣವು ಅವರಿಗೆ ತಿಳಿದರೆ ನನ್ನ ಸಲುವಾಗಿ ನೀನೂ ಸಂಕಟಕ್ಕೊಳಗಾಗುವಿ; ಕಾರಣ ನೀನೀಗಲೇ ಇಲ್ಲಿಂದ ತೆರಳು. ನಿಶ್ಚಿಂತಳಾಗಿ ಪಂಢರೀಪುರ ಸೇರಿ ಆತನ ಸನ್ನಿಧಿಯಲ್ಲಿ ನನ್ನ ನಮಸ್ಕಾರಗಳನ್ನು ಹೇಳು ಎನ್ನಲು ಅದಕ್ಕಾಕೆಯು ತಂಗೀ ಸಖೂ! ನಾನು ಅನೇಕ ಸಲ ಪಂಢರೀಪುರ ಉತ್ಸವವನ್ನು ನೋಡಿದ್ದೇನೆ; ಈ ಸಲ ನೀನೇ ಹೋಗಿ ಬಾ, ನಿನ್ನ ಬದಲಾಗಿ ನಾನಿಲ್ಲಿರುವೆನು ಎಂದು ಹೇಳಿ, ಸಖೂಬಾಯಿಯನ್ನು ಸಮಾಧಾನಪಡಿಸಿ, ಕಟ್ಟುಗಳನ್ನು ಬಿಚ್ಚಿ, ಹೊರಗೆ ಕರೆತಂದು, ಆಕೆಯನ್ನು ತನ್ನ ಅನುಗ್ರಹದಿಂದ ನಿರಾಯಾಸವಾಗಿ ಪಂಢರೀಪುರನ್ನು ಸೇರಿಸಿದನು. ಇತ್ತ ಪರಮಾತ್ಮನು ಆಕೆಯನ್ನು ಕಟ್ಟಿದ ಕಂಬಕ್ಕೆ ತಾನು ನಿಂತು ಬಂಧಿಸಿಕೊಂಡನು; ದಿನವೂ ಆ ಮನೆಯ ಯಜಮಾನ ಯಜಮಾನಿಯರು ಕೊಡುತ್ತಿದ್ದ ಕಷ್ಟಗಳನ್ನು ಭಕ್ತಳಿಗಾಗಿ ತಾನೇ ಸಹಿಸಿಕೊಂಡನು.

ಒಂದೆರಡು ದಿನಗಳ ವರೆಗೆ ಆಕೆಗೆ ಅನೇಕ ರೀತಿಯಲ್ಲಿ ಹಿಂಸೆಪಡಿಸಿದರೂ ಆಕೆಯು ನನ್ನನ್ನೇಕೆ ಹೀಗೆ ಹಿಂಸೆ ಪಡಿಸುವಿರೆಂದು ಕೇಳಲೂ ಇಲ್ಲ; ಕ್ಷಮಿಸಬೇಕೆಂದು ಕೇಳಿಕೊಳ್ಳಲೂ ಇಲ್ಲ. ಇದನ್ನು ಕಂಡು ಸಖೂಬಾಯಿಯ ಗಂಡನಿಗೂ, ಅತ್ತೆ-ಮಾವಂದಿರಿಗೂ ಆಶ್ಚರ್ಯವಾಯಿತು. ಸಖೂಬಾಯಿಯ ಗಂಡನು ಬಂದು ನೀನೇನು ಮಾನವಳೋ ? ಹಾಳೂರ

ದೆವ್ವವೋ ತಿಳಿಯದು. ಇದು ನಿನ್ನ ಪ್ರಾರಬ್ಧ ಕರ್ಮವು ಎಂದೆನ್ನುತ್ತ ಕಟ್ಟುಗಳನ್ನು ಬಿಚ್ಚಿ, ಹೋಗು ನದಿಗೆ ಹೋಗಿ ಸ್ನಾನಮಾಡಿ ಬಂದು ಅಡಿಗೆ ಮಾಡು ಎಂದು ಆಜ್ಞಾಪಿಸಲು, ಆ ವೇಷಧಾರಿ ಸಖೂಬಾಯಿಯು ಮರು ಮಾತನಾಡದೆ ಹೊಳೆಗೆ ಹೋಗಿ ಸ್ನಾನಮಾಡಿ ಬಂದು ಅಡಿಗೆ ಮಾಡಿ ಎಲ್ಲರಿಗೂ ಊಟಕ್ಕೆ ಬಡಿಸಿದಳು. ಅಂದಿನ ಅಡಿಗೆಯನ್ನು ಅವರು ಇಂಥ ರುಚಿಯಾದ ಅನ್ನವನ್ನು ಎಂದೂ ಉಂಡಿಲ್ಲವೆಂದೂ, ಅಡಿಗೆಯಲ್ಲಿ ಸಖೂಬಾಯಿಯು ಬಲು ಜಾಣೆಯೆಂದು ಹೊಗಳಿದರು. ಆದರೂ ಆ ಹಾಳು ಪಾಂಡುರಂಗನ ಭಜನೆಯಿಂದ ಕೆಡುವಳೆಂದೇ ನಮ್ಮ ಚಿಂತೆ, ಎಂದು ಸೂರೆಳೆದರು. ಈ ಸಖೂಬಾಯಿಯ ಸಹನೆ ಸೇವಾಬುದ್ಧಿಯಿಂದಲೂ. ವಿನಯಶೀಲತೆಯಿಂದಲೂ ಸಂತೋಷಗೊಳ್ಳುವದೂ ಪುನಃ ಆಕೆಯ ದೇವರ ಪೂಜಾದಿಗಳನ್ನು ಕಂಡರೆ ಸಿಡಿಮಿಡಿಗೊಳ್ಳುವದೂ, ಇಂತು ಸಖೂಬಾಯಿಯ ವಿಷಯದಲ್ಲಿ ಅವರಚಿತ್ತವು ದೋಲಾಂಧೋಲನದಲ್ಲಿ ತೇಲಾಡುತಿತ್ತು.

ಅತ್ತ ಪಾಂಡುರಂಗ ಕ್ಷೇತ್ರದಲ್ಲಿ ನಿಜ ಸಖೂಬಾಯಿಯು ದೇವರ ಸನ್ನಿಧಿಯಲ್ಲಿ ಕೂತು, ಆತನ ಧ್ಯಾನಾಸಕ್ತಳಾಗಿ ಆತ್ಮ ಸಂತೋಷವನ್ನು ಪಡೆಯುತ್ತಿರಲು ಇದ್ದಕಿದ್ದ ಹಾಗೆ ಪಾಂಡುರಂಗನ ಪಾದಕಮಲದಲ್ಲಿ ತಲೆಯಿಟ್ಟು ಪ್ರಾಣಬಿಟ್ಟಳು. ಇದನ್ನು ಕಂಡು ಭಾಗವತ ಜನರು ವಿಸ್ಮಿತರಾಗಿ ಎಲ್ಲವೂ ಹರಿಲೀಲೆಯೆಂದು ನಿಶ್ಚಯಿಸಿದರು. ಆಕೆಯ ಶರೀರವನ್ನು ಕೊಂಡೆಯ್ದು ಶವಸಂಸ್ಕಾರ ಮಾಡಿ ಚಂದ್ರಭಾಗಾ ನದಿಯಲ್ಲಿ ಸ್ನಾನ ಮಾಡಿ ತಮ್ಮ ಸ್ಥಳಗಳಿಗೆ ತೆರಳಿದರು.

ಈಗ ಪರೀಕ್ಷಾಕಾಲದ ಸಮಯ ಬಂದೊದಗಿತು, ನಿಜ ಸಖೂಬಾಯಿಯು ಸತ್ತುಹೋದಳು. ವೇಷಧಾರಿ ಸಖೂಬಾಯಿಯು ಕರವೀರಪುರದಲ್ಲುಳಿದಳು. ಈ ಸಂಗತಿಯಿಂದ ಶ್ರೀ ರುಕ್ಮಾದೇವಿಗೆ ಯೋಚನೆಯುಂಟಾಯಿತು. ಮುಂದೇನು ಮಾಡತಕ್ಕದ್ದೆಂದು ಆಲೋಚಿಸಿ, ಶವಸಂಸ್ಕಾರವನ್ನು ಮಾಡಿದ ಭಕ್ತರ ಕನಸಿನಲ್ಲಿ ಪ್ರಸನ್ನಳಾಗಿ, ಅವರಿಗಾವಿವರವನ್ನು ತಿಳಿಸಿ, ಆಕೆಯ ಅಸ್ಥಿಗಳನ್ನು ತಂದು ಕೊಡಲು ಆಜ್ಞೆಮಾಡಿದಳು. ಆ ಭಕ್ತರು ಕೂಡಲೆ ಎಚ್ಚತ್ತು ಜಗನ್ಮಾತೆಯ ಆಜ್ಞೆಯಂತೆ ಸಖೂಬಾಯಿಯ ಎಲುಬುಗಳನ್ನು ತಂದು ಸನ್ನಿಧಿಯಲ್ಲಿಟ್ಟರು. ಆಗ ಜಗನ್ಮಾತೆಯು ಆ ಎಲುಬುಗಳನ್ನು

ತನ್ನ ದಿವ್ಯಹಸ್ತದಿಂದ ಸ್ಪರ್ಶಿಸಿ ಎಂದಿನಂತೆ ಸಖೂಬಾಯಿಯನ್ನು ಬದುಕಿಸಿ ಸಖೂ! ನಿನಗಾಗಿ ನಿನ್ನ ವೇಷದಿಂದ ನಿನ್ನ ಪತಿಗೃಹದಲ್ಲಿ ವಿಠ್ಠಲನು ಸೇವೆ ಮಾಡುತ್ತಿರುವನು; ನೀನು ಶೀಘ್ರ ತೆರಳಿ ಪರಮಾತ್ಮನನ್ನು ಇಲ್ಲಿಗೆ ಕಳುಹಿಸು ಎಂದು ಆಶೀರ್ವದಿಸಿ ಕಳುಹಿಸಿದಳು.

ಸಖೂಬಾಯಿಯು ಪಂಢರಿಪುರದಿಂದ ಹೊರಟು ದಾರಿ ನಡೆಯುತ್ತ ಕರವೀಪುರದ ಮಾರ್ಗದಲ್ಲಿಯ ಕೃಷ್ಣಾನದಿಯ ದಂಡೆಯ ಮೇಲೆ ಬರುತ್ತಿದ್ದಳು. ಇದನ್ನರಿತ ಸಖೂಬಾಯಿ ರೂಪದಲ್ಲಿಯ ಪಾಂಡುರಂಗನು ನೀರು ತರುವ ನೆವದಿಂದ ನೀರಿನ ಕೊಡತಗೊಂಡು ನದೀತೀರಕ್ಕೆ ಬಂದು ಸಖೂಬಾಯಿಯನ್ನು ಕಂಡು ಏನಮ್ಮಾ, ಪಂಢರೀನಾಥನ ಸೇವೆ ಚನ್ನಾಗಿ ಲಭಿಸಿತೆ ಎಂದು ಕೇಳಲು ಆಗ ಸಖೂಬಾಯಿಯು ಪರಮ ಪಿತನಿಗೆ ಭಕ್ತಿಪೂರ್ವಕ ನಮಿಸಿ, ಕೈಮುಗಿದು ನಿಂತು ದೇವಾಧಿದೇವಾ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕಾ, ಕೃಪಾಸಾಗರಾ, ಅನಾಥಬಂಧುವೇ ನಿನ್ನ ದರ್ಶನವು ಅಲ್ಲಿಯೂ, ಇಲ್ಲಿಯೂ ಆನಂದಕರವಾಗಿ ಲಭಿಸಿತು. ನನಗಾಗಿ ನೀನು ಇಂಥ ನೀಚ ಕಾರ್ಯಗಳನ್ನು ಕೈಕೊಂಡು ಮಾಡಿದಿ, ಯಾರ ಪಾದಕಮಲಗಳನ್ನು ಸರ್ವಸ್ವವೂ ಸಂಗಮಗೊಂಡಿದೆಯೋ ಅಂಥವರನ್ನು ಇಂಥ ನೀಚಕಾರ್ಯಗಳನ್ನು ಮಾಡಹಚ್ಚಿದ ನನ್ನೀ ಅಪರಾಧವನ್ನು ಕ್ಷಮಿಸು ಎಂದು ಬಿನ್ನೈಸಿದಳು. ಆಗ ಭಗವಂತನು ಸಾಧ್ವೀ, ಭಕ್ತರಿಗಾಗಿ ನಾನು ಎಂಥ ಕಾರ್ಯಗಳನ್ನಾದರೂ ಮಾಡಬಲ್ಲೆನು; ಆದಕ್ಕಾಗಿ ನೀನು ಚಿಂತಿಸಬೇಡ. ನೀನು ಧನ್ಯಳು ಎಂದು ಹೇಳಿ, ಆಶೀರ್ವದಿಸಿ ತಲೆಯ ಮೇಲೆ ಜಲಕುಂಭವನ್ನಿಟ್ಟು ಮನೆಗೆ ಕಳುಹಿಸಿ, ತಾನು ಪಂಢರೀಪುರವನ್ನು ಸೇರಿ ರುಕ್ಮಾದೇವಿಗೆ ಸಂದರ್ಶನವಿತ್ತು ಆನಂದಲಹರಿಯಲ್ಲಿ ಭಕ್ತಕೋಟಿಯನ್ನು ಅನುಗ್ರಹಿಸುತ್ತಿದ್ದನು.

ಸಖೂಬಾಯಿಯು ಮನೆಗೆ ಬರುವದರೊಳಗಾಗಿ ಪಂಢರಪುರದಲ್ಲಿ ನಡೆದ ಸಮಾಚಾರವನ್ನು ತಿಳಿಸಬೇಕೆಂದು ಹೊರಟಿದ್ದ ಬ್ರಾಹ್ಮಣಭಕ್ತನು ಸಖೂಬಾಯಿಯ ಮನೆಗೆ ಬಂದು ಆಕೆಯ ಪತಿ ಮತ್ತು ಮಾವಂದಿರಿಗೆ ಅಲ್ಲಿ ನಡೆದ ವೃತ್ತಾಂತವನ್ನೂ, ಮನೆಯಲ್ಲಿದ್ದು ಸೇವೆಮಾಡಿದ ಸಖೂಬಾಯಿಯು ವೇಷಧಾರಿ ವಿಠ್ಠಲನೆಂದೂ, ಸಖುಬಾಯಿಯು ಪರಮ ಭಕ್ತಳೆಂದೂ ತಿಳಿಸಿಹೇಳಿದನು. ಅದನ್ನು ಕೇಳಿದನಂತರ ಅವರು ತಮ್ಮ ತಪ್ಪಿ

ಗಾಗಿ ಪರಿತಾಪಗೊಂಡು. ವಿಷಾದಪಡುತ್ತಿದ್ದರು. ಅಷ್ಟರಲ್ಲಿ ಸಖೂಬಾಯಿಯು ಆನೀರಿನ ಕೊಡಹೊತ್ತುಕೊಂಡು ಮನೆಯನ್ನು ಪ್ರವೇಶಿಸಿದಳು. ಆಗ ಆ ಬ್ರಾಹ್ಮಣನು ಸಖೂಬಾಯಿಯನ್ನು ಕುರಿತು ಏನಮ್ಮಾ ಪರಮಾತ್ಮನನ್ನು ಕಳುಹಿಸಿಕೊಟ್ಟು ಬಂದಿಯಾ? ಎಂದುಕೇಳಲು ಅದಕ್ಕೆ ಆಕೆ ನಸುನಕ್ಕು ಸುಮ್ಮನಾದಳು. ಆಗ ಆಕೆಯ ಪತಿಯೂ ಅತ್ತೆಮಾವಂದಿರೂ ಕೂಡಿ ನಡೆದ ವೃತ್ತಾಂತವನ್ನು ತಿಳಿಸೆಂದು ಸಖೂಬಾಯಿಯನ್ನು ಕೇಳಲು ಆಗ ಆಕೆಯು ಕಂಬದಿಂದ ಬಿಡುಗಡೆ ಹೊಂದಿದಲ್ಲಿಂದ ನಡೆದ ಯಾವತ್ತೂ ವೃತ್ತಾಂತವನ್ನು ತಿಳಿಸಲು ಎಲ್ಲರೂ ವಿಸ್ಮಯಗೊಂಡದಲ್ಲದೆ ಭಗವತ್ಕೃಪೆಯಿಂದ ಅವರ ಮನೋಭಾವಗಳೇ ಬೇರೆ ಬದಲಾದವು. ಅಂದಿನಿಂದ ಸೊಸೆಯನ್ನು ಪೂಜ್ಯಳಂತೆ ಕಾಣತೊಡಗಿದರು. ಆಕೆ ಜೀವರೆಲ್ಲರಿಗೂ ವಿಠ್ಠಲ ಸಂಕೀರ್ತನೆಗಳನ್ನು ಹೇಳಿ ಜನ್ಮಸಾಫಲ್ಯವನ್ನೂ, ಸಂಸಾರದಲ್ಲಿ ಶಾಂತಿ-ಸಂತೋಷಗಳನ್ನೂ ಪೋಷಿಸಿ ಇಹಲೋಕದಲ್ಲಿ ಆನಂದವನ್ನು ಹೊಂದಿ ಕುಟುಂಬಸಹಿತ ಸಖೂಬಾಯಿಯು ಶ್ರೀಹರಿ ಸಾನ್ನಿಧ್ಯವನ್ನು ಸೇರಿದಳು.

---

## ೧೩. ಭದ್ರಾಚಲ ರಾಮದಾಸ

ನೆಲಗೊಂಡವೆಂಬ ಗ್ರಾಮದಲ್ಲಿ ಲಿಂಗಣ್ಣ ಮಂತ್ರಿಯೆಂಬವನು ಸುಶೀಲೆಯಾದ ಕನಕಾಂಬೆಯೆಂಬ ಪತ್ನಿಯೊಡನೆ ಸುಖಸಂಸಾರಮಾಡಿಕೊಂಡು ಇದ್ದನು. ಇವನು ಅಷ್ಟೈಶ್ವರ್ಯಸಂಪನ್ನನಾದರೂ ಭಗವಂತನ ಸೇವೆಯಲ್ಲಿ ಸದಾ ನಿರತನಾಗಿದ್ದನು. ಇವರಿಗೆ ಯಾವ ಕೊರತೆ ಇರದಿದ್ದರೂ ಸಂತಾನದ ಕೊರತೆಯೊಂದು ಸದಾ ಕೊರೆಯುತ್ತಿತ್ತು. ಮಕ್ಕಳಿಗಾಗಿ ಕನಕಾಂಬೆಯು ಅನನ್ಯ ಭಕ್ತಿಭಾವದಿಂದ ಶ್ರೀ ರಾಮಚಂದ್ರನನ್ನು ನಿತ್ಯವೂ ಪೂಜಿಸುತ್ತಿದ್ದಳು. ಹೀಗಿರಲು ಒಂದುದಿನ ಕನಕಾಂಬೆಯ ಕನಸಿನಲ್ಲಿ ಒಬ್ಬ ವೃದ್ಧಬ್ರಾಹ್ಮಣನು ದರ್ಶನಕೊಟ್ಟು ಭಕ್ತಳೇ! ನಿನಗೊಬ್ಬ ಸುಪುತ್ರನ ಜನನವಾಗುವದು, ಚಿಂತಿಸಬೇಡವೆಂದು ಹೇಳಿ ಅದೃಶ್ಯನಾದನು. ಅದನ್ನು

ಮರುದಿನ ತನ್ನ ಪತಿಗೆ ತಿಳಿಸಿ ಸಂತೋಷದಿಂದಿರುತ್ತಿರಲು ಕನಕಾಂಬೆಗೆ ಗರ್ಭವತಿಯ ಚಿನ್ಹಗಳು ಕಾಣತೊಡಗಿದವು. ಆಗಂತೂ ಆ ದಂಪತಿಗಳು ಅತ್ಯಾನಂದಗೊಂಡು ಭಗವಂತನ ಸೇವೆಯನ್ನು ಇನ್ನೂ ಭಕ್ತಿ ವಿಶ್ವಾಸಗಳಿಂದ ಮಾಡತೊಡಗಿದರು. ಕನಕಾಂಬೆಗೆ ನವಮಾಸಗಳು ತುಂಬಿ ಸುಮುಹೂರ್ತದಲ್ಲಿ ಸತ್ಪುತ್ರನನ್ನು ಹೆತ್ತಳು. ಆ ಮಗುವಾದ ಗೋಪಣ್ಣನು ತನ್ನ ಬಾಲಲೀಲೆಗಳಿಂದ ತನ್ನ ತಂದೆ-ತಾಯಿಗಳನ್ನು ಸಂತೋಷಪಡಿಸುತ್ತ ಶುಕ್ಲಪಕ್ಷದ ಚಂದ್ರನಂತೆ ಬೆಳೆಯತೊಡಗಿದನು.

ಗೋಪಣ್ಣನಿಗೆ ವಿದ್ಯೆಗೆ ಯೋಗ್ಯ ವಯಸ್ಸಾದೊಡನೆ ಸರ್ವ ವಿದ್ಯಾಭ್ಯಾಸ ಮಾಡಿಸಿದರು. ಮಾತಾ-ಪಿತೃಗಳ ಇಚ್ಛೆಯಂತೆ ಬಾಲ್ಯದಲ್ಲಿಯೇ ಸರ್ವ ವಿದ್ಯಾಪಾರಂಗತನಾಗಿ ಪಂಡಿತನೆಂದೆನಿಸಿಕೊಂಡನು.

ಗೊಳವಲಕೊಂಡ ಸಂಸ್ಥಾನವನ್ನು ತಾನಿಷಾನೆಂಬ ಮಹಮ್ಮದೀಯ ರಾಜನು ರಾಜ್ಯವಾಳುತ್ತಿದ್ದನು. ಆತನಿಗೆ ಅಕ್ಕಣ್ಣ, ಮಾದಣ್ಣರೆಂಬ ಮಂತ್ರಿ ಪ್ರಧಾನಗಳಿದ್ದರು; ಇವರು ಲಿಂಗಣ್ಣನ ಬಂಧುಗಳಾಗಿದ್ದರು. ಗೋಪಣ್ಣನಿಗೆ ಅಕ್ಕಣ್ಣನು ಸೋದರಮಾವನಾಗಿದ್ದನು. ಆತನಿಗೆ ಕಮಲೆಯೆಂಬ ಮಗಳಿದ್ದಳು; ಲಿಂಗಣ್ಣನು ಕಮಲೆಯನ್ನು ತನ್ನ ಮಗನಿಗೆ ಕೊಟ್ಟು ವಿವಾಹಮಾಡಬೇಕೆಂಬ ಪ್ರಸ್ತಾಪನೆಯನ್ನು ಅಕ್ಕಣ್ಣನಿಗೆ ತಿಳಿಸಲು ಆತನೂ ಆತನ ಸತಿಯೂ ಗೋಪಣ್ಣನ ವಿದ್ಯಾಭ್ಯಾಸವನ್ನೂ, ರೂಪಲಾವಣ್ಯಗಳನ್ನೂ ಕಂಡವರಾದ್ದರಿಂದ ಸಮ್ಮತಿಕೊಟ್ಟರು; ವಿವಾಹದ ಎಲ್ಲ ಸಿದ್ಧತೆಗಳೂ ಏರ್ಪಟ್ಟು ವಿಜೃಂಭಣೆಯಿಂದ ವಿವಾಹವು ಸಾಂಗವಾಯಿತು.

ಗೋಪಣ್ಣನು ಸುಂದರನೂ, ವಿದ್ಯಾಸಂಪನ್ನನೂ, ರಸಿಕನೂ, ಆಗಿದ್ದುದರಿಂದ ಗ್ರಹಸ್ಥಾಶ್ರಮವನ್ನು ಆದರ್ಶಪ್ರಾಯವಾಗಿ ನಡೆಸಿಕೊಂಡು ಹೋಗುತ್ತಿದ್ದನು.

ಒಂದುದಿನ ಕಬೀರದಾಸರು ದೇಶಸಂಚಾರ ಮಾಡುತ್ತ ನೆಲಗೊಂಡ ಗ್ರಾಮಕ್ಕೆ ಬರಲು, ದಂಪತಿಗಳು ಆತನನ್ನು ಆದರ-ಸತ್ಕಾರಗಳಿಂದ ಬರಮಾಡಿಕೊಂಡು ಆತನ ಸೇವೆಮಾಡಲು, ಆ ಮಹಾನುಭಾವರಾದ ಕಬೀರದಾಸರು ಶ್ರೀರಾಮನಿಚ್ಛೆಯಂತೆ ಶ್ರೀರಾಮ ತಾರಕಮಂತ್ರವನ್ನುಪದೇಶಿಸಿ

ಗೋಪಣ್ಣ ಇಂದಿನಿಂದ ನೀನು ಶ್ರೀ ರಾಮದಾಸನಾದಿಯೆಂದು ಹೇಳಿದರು. ಅಂದಿನಿಂದ ಗೋಪಣ್ಣನು " ರಾಮದಾಸರಾದರು. "

ಭದ್ರಾಚಲಕ್ಕೆ ಸ್ವಲ್ಪ ದೂರದಲ್ಲಿದ್ದ ಒಂದು ಹಳ್ಳಿಯಲ್ಲಿ ಶ್ರೀರಾಮನ ಪರಮಭಕ್ತಳಾದ ದಮನಾಂಬೆಯೆಂಬವಳಿದ್ದಳು. ಆಕೆಯು ಸಾಧು-ಸಜ್ಜನ ಸತ್ಕಾರ್ಯಗಳಲ್ಲಿ ತುಂಬಿದ ಮನಸ್ಸಿನವಳಾಗಿದ್ದುದರಿಂದ ಜನರು ಆಕೆಯನ್ನು ದಮ್ಮಕ್ಕನೆಂದು ಕರೆಯುತೊಡಗಿದರು. ಒಂದು ದಿನ ರಾತ್ರಿ ದಮ್ಮಕ್ಕನ ಕನಸಿನಲ್ಲಿ ಕಾಣಿಸಿಕೊಂಡು ದಮ್ಮಕ್ಕಾ! ನಿನ್ನ ಭಕ್ತಿಗೆ ಮೆಚ್ಚಿದೆನು. ನಾನು ಭದ್ರಾಚಲದ ಮೇಲೆ ಮೂರ್ತಿ ಅವತಾರವನ್ನು ತಾಳಿರುವೆನು, ನನ್ನಂತರಂಗ ಭಕ್ತಳಾದ ನೀನು ಅಲ್ಲಿ ನನಗೆ ಗುಡಿಗೋಪುರ ಕಟ್ಟಿಸಿ ಪೂಜೆಮಾಡುವವಳಾಗು ಎಂದು ಹೇಳಿ ಮರೆಯಾದನು. ದಮ್ಮಕ್ಕನು ಕೂಡಲೇ ಎಚ್ಚತ್ತು ಕನಸಿನ ಸಂಗತಿಯನ್ನು ನೆನಸಿಕೊಂಡು ಸಂತುಷ್ಟಳಾಗಿ ಬೇಕಾದ ಸಲಕರಣೆಗಳನ್ನು ಕೂಡಿಸಿಕೊಂಡು ಭದ್ರಾಚಲಕ್ಕೆ ತೆರಳಿ ಅಲ್ಲಿ ತನಗೆ ಸಾಧ್ಯವಾದ ಮಟ್ಟಿಗೆ ಸಣ್ಣ ಗುಡಿಗೋಪುರ ಕಟ್ಟಿಸಿದಳು. ಮತ್ತು ಅಲ್ಲಿ ಪ್ರತಿವರ್ಷವೂ ಚೈತ್ರ ಶುದ್ಧ ನವಮಿಯಲ್ಲಿ ಶ್ರೀ ರಾಮೋತ್ಸವವನ್ನು ಜರುಗಿಸುತ್ತಿದ್ದಳು.

ಅಂದಿನಿಂದ ಭಕ್ತಕೋಟಿಯು ಗುಂಪು ಗುಂಪಾಗಿ ರಾಮೋತ್ಸವದ ಕಾಲದಲ್ಲಿ ಭದ್ರಾಚಲಕ್ಕೆ ಬಂದು ಶ್ರೀ ರಾಮ ಸೇವೆ ಮಾಡಿ ಕೃತಾರ್ಥರಾಗುತ್ತಿದ್ದರು.

ಒಂದುದಿನ ದಮ್ಮಕ್ಕಳು ಚೈತ್ರ ಶುದ್ಧ ನವಮೀ ಕಾಲಕ್ಕೆ ಶ್ರೀರಾಮೋತ್ಸವಕ್ಕೆಂದು ಬೇಕಾದ ಸಾಮಗ್ರಿಗಳನ್ನು ತಕ್ಕೊಂಡು ಕೆಲ ಭಕ್ತರಿಂದೊಡಗೂಡಿ ಭದ್ರಾಚಲಕ್ಕೆ ಪ್ರಯಾಣ ಮಾಡುತ್ತ ನೆಲಗೊಂಡ ಗ್ರಾಮಕ್ಕೆ ಬಂದಳು. ಗ್ರಾಮದ ಮುಂಭಾಗದಲ್ಲಿ ರಾಮದಾಸರು ಆಕೆಯನ್ನು ಕಂಡು ಕೈಮುಗಿದು ಭಕ್ತಿಯೋಗ ಸಂಪನ್ನರಾದ ಸಾಧುಗಳಿರಾ! ತಮ್ಮನ್ನು ಕಂಡ ಈ ದಿನವೇ ಸುದಿನವು. ತಾವು ಎಲ್ಲಿಂದ ಬಂದಿರಿ, ಎಲ್ಲಿಗೆ ಪ್ರಯಾಣ ಬೆಳೆಸುವಿರಿ, ಅಲ್ಲಿ ವಿಶೇಷವೇನು ಎಂಬ ಸಂಗತಿಯನ್ನು ತಿಳಿಯಲು ಅಪೇಕ್ಷೆಪಡುತ್ತೇನೆ ಎಂದು ಕೇಳಿಕೊಳ್ಳಲು ದಮ್ಮಕ್ಕಳು, ರಾಮದಾಸರ ಸವಿನಯವನ್ನು ಕಂಡು ಸಂತೋಷದಿಂದ ಎಲೈ ಸುಗುಣಿಯೇ! ನಾಳೆ ಶ್ರೀರಾಮನವಮೀ

ಮಹೋತ್ಸವವು ಒಳ್ಳೇ ವಿಜೃಂಭಣೆಯಿಂದ ಭದ್ರಾಚಲದಲ್ಲಿ ಭಕ್ತಕೋಟಿಯಿಂದೊಡಗೂಡಿ ಆಚರಿಸಲ್ಪಡುವದು. ನಾವೂ ಅಲ್ಲಿಗೆ ತೆರಳಿ ಉತ್ಸವದಲ್ಲಿ ಭಾಗಿಗಳಾಗುವೆವು ಎಂದು ಹೇಳಿ ಮುಂದಕ್ಕೆ ಪ್ರಯಾಣ ಬೆಳೆಸಿದಳು. ರಾಮದಾಸರು ಮನೆಗೆಬಂದು ಸತಿಗಾಸಂಗತಿಯನ್ನು ತಿಳಿಸಿ ಸತಿಸುತರೊಡನೆ ಭದ್ರಾಚಲಕ್ಕೆ ಪ್ರಯಾಣ ಬೆಳೆಸಿದರು. ಭದ್ರಾಚಲದಲ್ಲಿ ಶ್ರೀರಾಮಚಂದ್ರನ ದರ್ಶನವನ್ನೂ, ಸಾಧುಸಂತರದರ್ಶನವನ್ನೂ ಹೊಂದಿ ಸಂತುಷ್ಟರಾಗಿ ಅಲ್ಲಿ ಕೆಲದಿನಗಳಿದ್ದು ಮರಳಿ ತಮ್ಮೂರಿಗೆ ಬಂದರು.

ನಿತ್ಯವೂ ಶ್ರೀರಾಮಪೂಜೆ, ಭಜನೆ, ಸಾಧುಜನರ ಸತ್ಕಾರ ಮೊದಲಾದವುಗಳಲ್ಲಿ ಕಾಲ ಕಳೆಯುತ್ತಲೂ, ಬಡಬಗ್ಗರಿಗೂ, ಸಾಧುಸಂತರಿಗೂ ಅನ್ನದಾನ ಮಾಡುತ್ತಿರಲು ಒಂದು ದಿನ ರಾಮದಾಸರ ಮಗನು ಆಡುತ್ತ ಹೋಗಿ ಬಿಸಿಗಂಜಿಯಿಂದ ತುಂಬಿದ ಭಾವಿಯಲ್ಲಿ ಕಾಲುಜಾರಿ ಬಿದ್ದನು ಈ ಸಂಗತಿಯನ್ನು ಹುಡುಗರಿಂದ ತಿಳಿದು ಕಮಲಾದೇವಿಯು ರೋಧಿಸುತ್ತ ಪತಿಗಾಸಂಗತಿಯನ್ನು ತಿಳಿಸಿದಳು. ಎಷ್ಟೆ ವೈರಾಗ್ಯಸಂಪನ್ನರಾದಾಗ್ಯೂ ಪುತ್ರ ವಿಯೋಗವನ್ನು ಸಹಿಸಲಾರದೆ ಬಾಲಕನು ಬಿದ್ದಿದ್ದ ಭಾವಿಯ ಬಳಿಗೆ ಬಂದು ಆ ದಂಪತಿಗಳು ಅನನ್ಯ ಭಕ್ತಿಭಾವದಿಂದ ಶ್ರೀರಾಮಸ್ತೋತ್ರ ಮಾಡಲು ದಯಾನಿಧಿಯಾದ ಶ್ರೀರಾಮಚಂದ್ರನು ರಾಮದಾಸರ ಮಗನನ್ನು ಬದುಕಿಸಿಕೊಟ್ಟು ಅಂತರ್ಗತನಾದನು.

ರಾಮದಾಸರು ತಮ್ಮ ಸರ್ವಸಂಪತ್ತನ್ನು ದಾನಮಾಡಿ ಸತಿಸುತರೊಂದಿಗೆ ಭದ್ರಾಚಕ್ಕೆ ಬಂದು ಅಲ್ಲೊಂದುಕಡೆ ಮನೆಮಾಡಿಕೊಂಡಿದ್ದು ಭಿಕ್ಷಾಟನೆ ಮಾಡುತ್ತ ಜೀವನ ನಡೆಸುತ್ತಿದ್ದರು. ಭದ್ರಾಚಲ ತಾಲೂಕಿನ ತಹಶೀಲದಾರನು ಕಾರಣಾಂತರದಿಂದ ಕೆಲಸದಿಂದ ತೆಗೆಯಲ್ಪಟ್ಟಿದ್ದರಿಂದ ಈ ವಿಚಾರವನ್ನು ಗೊಳವಲಕೊಂಡ ರಾಜನು ತನ್ನ ಮಂತ್ರಿಯಾದ ಅಕ್ಕಣ್ಣನೊಡನೆ ವಿಚಾರಮಾಡಿ ತೆರವಾದ ತಹಸೀಲದಾರ ಸ್ಥಳವನ್ನು ಗೋಪಣ್ಣನಿಗೆ ಕೊಡಲು ಆಜ್ಞೆಮಾಡಿದನು ಆದರಂತೆ ಅಕ್ಕಣ್ಣನು ಆಜ್ಞೆಬರೆಯಿಸಿ ರಾಜನ ಸಹಿಮಾಡಿಸಿ ಕುದುರೆ ಸವಾರನ ಕೈಯಲ್ಲಿಕೊಟ್ಟು ಕಳುಹಿದನು. ಸಾಮಾನ್ಯಸ್ಥಿತಿಯಲ್ಲಿದ್ದ ಗೋಪಣ್ಣನಿಗೆ ತಹಸೀಲದಾರಹುದ್ದೆಗೆ ಸಂಬಂಧಿಸಿದ ಮೋಹರ ಮುದ್ರೆಗಳನ್ನು ಶಿರಸ್ತೆದಾರನು ಕೊಟ್ಟು ಗೌರವಿಸಿದನು.

ರಾಮದಾಸರು ಹುದ್ದೆಯನ್ನು ರಾಜಾಜ್ಞೆಯೆಂದು ಭಾವಿಸಿ ಬಹಳ ಧರ್ಮ ದಿಂದ ವರ್ತಿಸುತ್ತಿದ್ದರು. ರಾಮದಾಸರು ಕೆಲದಿನಗಳಿಂದಲೂ ಯೋಚಿಸು ತ್ತಿರುವ ರಾಮಸೇವೆಯನ್ನು ಮಾಡುವದಕ್ಕೆ ತಕ್ಕಸಮಯವೆಂದು ಯೋಚಿ ಸಿದರು. ಸರಕಾರದ ಆರುಲಕ್ಷ ರೂಪಾಯಿಗಳನ್ನು ಖರ್ಚುಮಾಡಿ ಗುಡಿ-ಗೋಪುರ ಛತ್ರಚಾವಡಿಗಳನ್ನೂ ಕಟ್ಟಿಸಿದರು. ನೀರಿನ ಹೊಂಡಗಳನ್ನು ಅಗಿಸಿದರು. ಶ್ರೀರಾಮ ಮೂರ್ತಿಯ ಸರ್ವ ಉತ್ಸವಗಳನ್ನೂ ದೀಪಾರಾಧ ನೆಗಳನ್ನೂ ಏರ್ಪಡಿಸಿದರು. ತಮ್ಮ ಸ್ವಂತಕ್ಕಾಗಿ ಸ್ವಲ್ಪವೂ ಇಟ್ಟುಕೊಳ್ಳದೆ ಎಲ್ಲವನ್ನೂ ದೇವಕಾರ್ಯಕ್ಕಾಗಿ ಉಪಯೋಗಿಸಿ ಖಜಾನೆಯ ಎಲ್ಲ ಧನ ವನ್ನೂ ಖಾಲೀಮಾಡಿದರು. ಇದು ಕೆಲವರಿಗೆ ಸರಿದೋರದೆ ಗೊಳವಲ ಕೊಂಡಕ್ಕೆ ಪತ್ರದಿಂದ ಎಲ್ಲ ಸಮಾಚಾರವನ್ನು ಬರೆದು ತಿಳಿಸಿದರು.

ತಾನಿಷಾ ಬಾದಶಹನು ಭದ್ರಾಚಲಕ್ಕೆ ಚಾರರನ್ನು ಕಳಿಸಿ ಅಲ್ಲಿಯ ಸಮಾಚಾರದ ವರದಿ ತರಿಸಿದನು. ರಾಮದಾಸರು ಖಜಾನೆಯ ಎಲ್ಲ ಹಣವನ್ನೂ ಖರ್ಚುಮಾಡಿದ್ದು ನಿಜವೆಂದು ತಿಳಿದಕೂಡಲೆ ರಾಮದಾಸ ರನ್ನು ಹಿಡಿದು ತರಲು ಸೈನಿಕರಿಗೆ ಆಜ್ಞೆಮಾಡಿದನು. ಸೈನಿಕರು ಶಸ್ತ್ರ ಪ್ರಾಣಿಗಳಾಗಿ ಹೋಗಿ ರಾಮದಾಸರಿಗೆ ಬೇಡಿಹಾಕಿಕೊಂಡು ಬಂದು ತಾನಿ ಷಾನ ಮುಂದೆ ನಿಲ್ಲಿಸಿದರು. ಆಗ ಬಾದಶಹನು ಏನಯ್ಯಾ ಗೋಪಣ್ಣಾ! ಸರ್ಕಾರದ ಹಣ ದುರುಪಯೋಗ ಮಾಡಿದಿ. ನಿನಗೆ ತಿಳಿಯಲಿಲ್ಲವೇ ? ಎಂದು ಕೇಳಲು ರಾಮದಾಸರು ಪ್ರಭುವೇ! ನಾನು ಸರ್ಕಾರದ ಹಣವನ್ನು ದುರುಪಯೋಗ ಮಾಡಿಲ್ಲ. ಆದರೆ ಖರ್ಚು ಮಾಡಿದ್ದೇನೆ ನಿಜ. ಯಾರಿ ಗಾಗಿ ಏತಕ್ಕಾಗಿ ವೆಚ್ಚಮಾಡಿದ್ದೇನೆ ! ನನಗಾಗಿ ಅಲ್ಲ. ರಾಜಾಧಿರಾಜನೂ, ಸಾರ್ವಭೌಮನೂ, ಚಕ್ರವರ್ತಿಯೂ ಆದ ಶ್ರೀರಾಮಚಂದ್ರನ ಸತ್ಕಾರ್ಯ ಕ್ಕಾಗಿ ಖರ್ಚು ಮಾಡಿದ್ದೇನೆ. ಅದೂ ಕೂಡ ತಮ್ಮ ಹೆಸರಿನಲ್ಲಿದೆಯೆಂದು ಹೇಳಿದನು. ಆಗ ಬಾದಶಹನು ನಿನ್ನ ಮಾತುಗಳಿಗೆ ನಾನೊಪ್ಪಲಾರೆನೆಂದು ಹೇಳಿ, ಸರ್ಕಾರದ ಹಣವನ್ನು ತಂದು ಕೊಡುವವರೆಗೆ ಕಾರಾಗ್ರಹದಲ್ಲಿ ಹಾಕಿರೆಂದು ಆಜ್ಞೆ ಮಾಡಿದನು. ಸೈನಿಕರು ರಾಮದಾಸನನ್ನೊಯ್ದು ಕಾರಾಗ್ರಹದಲ್ಲಿ ಹಾಕಿದರು. ಅಲ್ಲಿ ಅವರಿಗೆ ಅನೇಕ ರೀತಿಯಿಂದ ತ್ರಾಸು ಕೊಡುತ್ತಿದ್ದರು.

ಕಾರಾಗ್ರಹದಲ್ಲಿದ್ದ ರಾಮದಾಸರು ತುಂಬಿದ ಭಕ್ತಿಯಿಂದ ಪರಿಪರಿಯಾಗಿ ಪ್ರಾರ್ಥಿಸಿದರೂ ರಾಮಚಂದ್ರನು ಪ್ರಸನ್ನನಾಗಲಿಲ್ಲ. ಆದರೂ ನಿರಾಶನಾಗದೆ ಏಕಚಿತ್ತದಿಂದ ಪ್ರಾರ್ಥಿಸಿದರೂ ಉಪಯೋಗವಾಗಲಿಲ್ಲ. ಆಗ ರಾಮದಾಸರು ತಂದೆಗಿಂತಲೂ ತಾಯಿಯಲ್ಲಿ ಮಕ್ಕಳ ಮೇಲೆ ಪ್ರೀತಿ ಹೆಚ್ಚೆಂದು ನಂಬಿ ಲೋಕಮಾತೆಯಾದ ಸೀತಾದೇವಿಯನ್ನು ಅನನ್ಯ ಭಕ್ತಿ ಭಾವದಿಂದ ಪ್ರಾರ್ಥಿಸಲು ಆಗ ಮಾತೆಯು ಕರುಣೆಗೊಂಡು ತನ್ನ ಕಾಂತನಿಗೆ ರಾಮದಾಸನ ರಕ್ಷಣೆಗೆ ತೀವ್ರ ಹೋಗಬೇಕೆಂದು ಆಗ್ರಹಪೂರ್ವಕ ಬಿನ್ನೈಸಿಕೊಂಡಳು. ಆಗ ಶ್ರೀ ರಾಮಲಕ್ಷ್ಮಣರು ಸೇವಕರ ವೇಷ ಧರಿಸಿಕೊಂಡು ಅಂತಃಪುರದಲ್ಲಿ ಪ್ರವೇಶಿಸಿ ನಿದ್ರಿಸುತ್ತಿದ್ದ ತಾನಿಷಾನ ಬಳಿಗೆ ಬಂದು ಎಲೈ ತಾನಿಷಾ! ರಾಮದಾಸರನ್ನು ಬಿಟ್ಟುಕೊಡು; ತಗೋ ನಿನ್ನ ಆರುಲಕ್ಷ ರೂಪಾಯಿಗಳನ್ನು ಎಂದು ಹೇಳಿದರು. ಆಗ ಬಾದಶಹನು ನಿದ್ದೆಗಣ್ಣಲ್ಲಿಯೇ ನೀವು ಯಾರು, ನಿಮ್ಮ ಹೆಸರೇನು ಎಂದು ಕೇಳಲು ಆಗ ವೇಷಧಾರಿ ಸೇವಕರು ನಮ್ಮ ಹೆಸರು ಲಕ್ಷ್ಮೋಜಿ, ರಾಮೋಜಿ ಈಗ ಊರಲ್ಲಿಯೇ ರಾಮದಾಸರ ಚಾಕರಿ ಮಾಡುತ್ತಿದ್ದೇವೆ, ಈಗ ಅವರೇ ಕಳಿಸಿದ್ದಾರೆ. ತಿಳಿಯಿತೇ, ತಗೋ ನಿನ್ನ ಹಣವೆಂದು ಹೇಳಿ ಝಣ ಝಣವೆಂದು ಆರುಲಕ್ಷ ರಾಮಟಂಕಿಯನ್ನು ಸುರುವಿ ಅದೃಶ್ಯರಾದರು. ಬಾದಶಹನು ಹಣದ ಸಪ್ಪಳ ಕೇಳಿ ಎಚ್ಚತ್ತು ಕುಳಿತುಕೊಂಡನು; ಅಲ್ಲಿ ಯಾರು ಇರಲಿಲ್ಲ. ಆದರೆ ಬಂಗಾರದ ರಾಮಟಂಕೆಯ ರಾಶಿಯು ಎದುರಿಗೆಬಿದ್ದಿದೆ; ಆಗ ತಾನು ಕಂಡದ್ದು ಕನಸಲ್ಲ ಸತ್ಯವೆಂದು ನಂಬಿದನು. ಆದರೆ ಈ ಹೊತ್ತಿನಲ್ಲಿ ಇಲ್ಲಿಗೆ ಬಂದು ಈ ಹಣವನ್ನು ಯಾರು ಸುರುವಿಹೋಗಿರಬಹುದು ಎಂದು ಆಲೋಚಿಸಿ ದ್ವಾರಪಾಲಕರನ್ನು ಕರೆದು ಯಾರಾದರೂ ಇಲ್ಲಿಗೆ ಬಂದುಹೋದರೇನು ? ಎಂದು ಕೇಳಲು, ಜವಾನನು ಯಾರೂ ಬಂದಿಲ್ಲ ಪ್ರಭೋ ! ಎಂದನು. ಆಗ ಬಾದಶಹನು ಮನಸ್ಸಿನಲ್ಲಿಯೇ ಈ ಹಣವನ್ನು ತಂದು ಸುರುವಿದವರು ಮತ್ತಾರೂ ಇರದೆ ಅವನ ಹೃದಯ ಮೂರ್ತಿಗಳಾದ ರಾಮ-ಲಕ್ಷ್ಮಣರೆಂದು ನಂಬಿದನು. ತಾವಾಗಿ ಪ್ರತ್ಯಕ್ಷರಾದಾಗ್ಯೂ ಅವರನ್ನು ತಿಳಿದು ಪೂಜಿಸುವ ಭಾಗ್ಯ ನಮಗಿಲ್ಲೆಂದು ಬಹು ನೊಂದುಕೊಂಡನು. ಗತಿಸಿ ಹೋದುದಕ್ಕೆ ಚಿಂತಿಸಿ ಫಲವೇನೆಂದು

ಆಲೋಚಿಸಿ ಬಾದಶಹನು ಚಟ್ಟನೆದ್ದು ಕಾರಾಗ್ರಹದ ಕಡೆಗೆ ನಡೆದನು. ಏನನ್ನೂ ಅರಿಯದ ಸೇವಕರು ಆತನನ್ನು ಹಿಂಬಾಲಿಸಿದರು. ಬಾದಶಹನು ಕಾರಾಗ್ರಹದಲ್ಲಿ ಒಳಹೊಕ್ಕು ನೋಡಲು ರಾಮದಾಸರು ಏಕಚಿತ್ತದಿಂದ ರಾಮಭಜನೆ ಮಾಡುತ್ತ ಇದ್ದರು. ಬಾದಶಹನು ಆತನ ಸಮೀಪಕ್ಕೆ ಹೋಗಿ ಎಲೈ ಭಕ್ತಶಿರೋಮಣಿಯೇ ನೀನು ಧನ್ಯಳು ಏಳು. ನೀನು ಕೊಡ ಬೇಕಾಗಿದ್ದ ಆರುಲಕ್ಷ ಧನವನ್ನು ನನಗೆ ಶ್ರೀರಾಮನು ಕೊಟ್ಟಿರುತ್ತಾನೆ; ಕಾರಣ ನಿನ್ನ ಬಂಧನವು ಇಲ್ಲಿಗೆ ಮುಗಿಯಿತು. ಎಂದು ಹೇಳಲು ಆಗ ರಾಮದಾಸರು ಬಾದಶಹನನ್ನು ಕುರಿತು ಪ್ರಭುಗಳೇ! ನಿಮ್ಮ ಮಾತುಗಳನ್ನು ಹೇಗೆ ನಂಬಲಿ, ಯಾವ ರಾಮನು ನನಗಾಗಿ ನಿಮ್ಮ ಹಣವನ್ನು ಕೊಟ್ಟನೆಂದು ನೀವು ಹೇಳುವಿರೋ ಅದು ನಿಜವಿದ್ದರೆ ಅವನು ಎಲ್ಲರ ಸಮ್ಮುಖದಲ್ಲಿ ಪ್ರತ್ಯಕ್ಷನಾಗಲಿ. ಯಾರೂ ಅರಿಯದಂತೆ ನಿಮಗೊಬ್ಬರಿಗೆ ಪ್ರತ್ಯಕ್ಷನಾಗಿ ಹಣ ಕೊಟ್ಟನೆಂದು ಹೇಳುವದನ್ನಾದರೂ ನಂಬುವದು ಹೇಗೆ, ಆತನು ನನಗೆ ಪ್ರತ್ಯಕ್ಷನಾಗದ ಹೊರತು ನಾನು ನಂಬಲಾರೆನೆಂದು ಹಟ ಹಿಡಿಯಲು ಆಗ ದಯಾಘನನಾದ ಶ್ರೀ ರಾಮಚಂದ್ರನು ಸೀತಾ–ಲಕ್ಷ್ಮಣರೊಡನೆ ಪ್ರಸನ್ನ ನಾಗಿ ತನ್ನ ದಿವ್ಯದರ್ಶನವನ್ನು ಎಲ್ಲರಿಗೂ ಅನುಗ್ರಹಿಸಿದನು. ಅಲ್ಲಿ ನೆರೆದಿದ್ದ ಭಕ್ತರೆಲ್ಲರೂ ಶ್ರೀ ರಾಮಚಂದ್ರನ ಚರಣಗಳಿಗೆ ವಂದಿಸಿದರು. ಆಗ ಶ್ರೀ ರಾಮಚಂದ್ರನು ಅಲ್ಲಿ ನೆರೆದಿದ್ದ ಭಕ್ತ ಜನರನ್ನು ಕುರಿತು, ರಾಮದಾ ಸರು ತಾನಿಷಾನಿಗೆ ಸಲ್ಲಿಸಬೇಕಾಗಿದ್ದ ಆರುಲಕ್ಷ ರೂಪಾಯಿಗಳನ್ನು ನಾನು ಸಲ್ಲಿಸಿರುವೆನು; ರಾಮದಾಸನೇ! ಇನ್ನು ನೀನು ಪರಿತಾಪಪಡಬೇಕಾಗಿಲ್ಲ. ನೀನು ನನ್ನ ಭಕ್ತಿಯೋಗವನ್ನೂ, ಕೀರ್ತನೆ ಮಹಿಮೆಯನ್ನೂ ಜನರಿಗೆ ಚನ್ನಾಗಿ ಬೋಧಿಸಿ ಪ್ರಚಾರಪಡಿಸು; ಕಾಲಕ್ರಮದಲ್ಲಿ ನಿಮ್ಮೆಲ್ಲರನ್ನು ನನ್ನ ಸನ್ನಿಧಿಗೆ ಬರಮಾಡಿಕೊಳ್ಳುವೆನು ಎಂದು ಆಶೀರ್ವದಿಸಿ ಅದೃಶ್ಯರಾದರು. ಆಗ ಅಲ್ಲಿ ನೆರೆದ ಜನರು ಶ್ರೀ ರಾಮಚಂದ್ರಕೀ ಜೈ ಎಂದು ಜಯಘೋಷ ಮಾಡಿದರು.

ತಾನಿಷಾ ಬಾದಶಹನಿಗೆ ಆಗ ಜ್ಞಾನೋದಯವಾಯಿತು. ರಾಮದಾ ಸರು ಆತನಿಗೆ ರಾಮತಂತ್ರ, ರಾಮಭಕ್ತಿ, ರಾಮಸಂಕೀರ್ತನೆಗಳ ಮಹಿಮೆ ಗಳನ್ನು ಹೇಳಿ ಉಪದೇಶ ಮಾಡಿ ಭಗವಂತನ ಆಜ್ಞೆಯಂತೆ ಭದ್ರಾಚಲ

ಪ್ರಾಂತದಲ್ಲಿ ಸಂಚಾರ ಕೈಕೊಂಡು ಶ್ರೀರಾಮಭಕ್ತಿ ಯೋಗವನ್ನೂ ಕೀರ್ತನೆ ಮಹಿಮೆಯನ್ನೂ ಜನರಿಗೆ ಬೋಧಿಸುತ್ತಿರಲು ಒಂದು ದಿನ ಶ್ರೀರಾಮ ಚಂದ್ರನು ವಿಮಾನವನ್ನು ಕಳುಹಿಸಿ ತನ್ನ ನಿಜಸನ್ನಿಧಿಗೆ ಬರುವಂತೆ ಆಜ್ಞೆ ಮಾಡಿದನು. ಆಗ ಆಕಾಶದಿಂದ ವಿಮಾನ ಬರಲು ರಾಮದಾಸರು ತಮ್ಮ ಸತಿಯನ್ನು ಶ್ರೀರಾಮಸನ್ನಿಧಿಗೆ ಹೋಗೋಣ ನಡೆಯೆಂದು ಕರೆಯಲು ಆಕೆಯು ದಿನವೂ ಅನ್ನುವ ವಾಡಿಕೆಯೆಂದು ತಿಳಿದು ನನಗೀಗ ಮನೆಯಲ್ಲಿ ಕೆಲಸವಿದೆ ಬರುವದಿಲ್ಲವೆನ್ನಲು, ರಾಮದಾಸರು ವಿಮಾನದಲ್ಲಿ ಕುಳಿತು ವೈಕುಂಠಕ್ಕೆ ತೆರಳಿದರು. ಆಗ ಕಮಲಾಬಾಯಿಯು ತನ್ನ ಅವಿಚಾರಕ್ಕೆ ಬಹು ದುಃಖಗೊಂಡು ನಿಜಭಕ್ತಿಯಿಂದ ಶ್ರೀರಾಮನನ್ನು ಪೂಜಿಸಿ ಶ್ರೀರಾಮಾ ನುಗ್ರಹದಿಂದ ದಿವ್ಯ ಸನ್ನಿಧಿಯನ್ನು ಪಡೆದಳು.

---

## ೧೪. ಮಾಯಾಮಚ್ಛಂದ್ರನಾಥ
## ಮತ್ತು
## ಗೋರಖನಾಥ

ಮಚ್ಛಂದ್ರನಾಥನು ಸಿದ್ಧವರ್ಯರಲ್ಲಿ ಅಗ್ರಗಣ್ಯಸ್ಥಾನವನ್ನು ಪಡೆದ ಮಹಾನ್‌ವ್ಯಕ್ತಿಯು. ಅವನು ಅಷ್ಟಸಿದ್ಧಿಯನ್ನು ಪಡೆದು ನೀರಮೇಲೆ ಮೀನಿನಂತೆಯೂ, ಆಕಾಶದಲ್ಲಿ ಚಂದ್ರನಂತೆಯೂ, ಸಂಚರಿಸುವ ಸಾಮರ್ಥ್ಯ ವನ್ನು ತನ್ನ ಸಿದ್ಧಶಕ್ತಿಯಿಂದ ಪಡೆದುಕೊಂಡಿದ್ದರಿಂದಲೇ ಆತನಿಗೆ ಮಚ್ಛಂದ್ರ ನಾಥನೆಂದು ಹೆಸರು ಬಂದಿತು. ಸಕಲ ವಿದ್ಯಾಪಾರಂಗತನೂ, ಬ್ರಹ್ಮ ಚರ್ಯದಿಂದೊಡಗೂಡಿದ ದಿವ್ಯತೇಜಃಪುಂಜನೂ, ಆದ ಇವನು ಇಡೀ ಭರತ ಖಂಡದಲ್ಲಿ ಸರ್ವ ತೀರ್ಥಕ್ಷೇತ್ರಗಳನ್ನು ಸಂದರ್ಶಿಸುತ್ತ ಒಂದು ನಗರಕ್ಕೆ ಬಂದು ಮುಟ್ಟಿದನು. ಊರಲ್ಲಿ ಭಿಕ್ಷಾಟನೆ ಮಾಡುತ್ತ ಬಂದು ಒಬ್ಬ ಶ್ರೀಮಂತನ ಮನೆಯ ಮುಂದೆ ನಿಂತು ಭಿಕ್ಷಾಂದೇಹಿ ಎಂದು ಕೂಗಿದನು. ಆಗ ಆ ಮನೆಯ ಸಾಹುಕಾರನ ಹೆಂಡತಿಯು ಸ್ವರಕೇಳಿ ಭಿಕ್ಷೆ ನೀಡುವದಕ್ಕೆ ಹೊರಬಂದಳು. ಭಸ್ಮಲೇಪದಿಂದಲೂ, ರುದ್ರಾಕ್ಷಿಮಾಲೆಯನ್ನು

ಧರಿಸಿದ್ದರಿಂದಲೂ ಸಾಕ್ಷಾತ್ ಪರಶಿವನಂತೆ ಕಾಣುವ ಆ ದಿವ್ಯ ತೇಜಃಪುಂಜ ವ್ಯಕ್ತಿಯನ್ನು ಕಂಡು ಆ ಸಾಧ್ವಿಯು ಇವನೋರ್ವ ಮಹಾಮಹಿಮನೆಂದು ನಂಬಿ ಭಿಕ್ಷೆಯನ್ನು ನೀಡಿ ಕೈಮುಗಿದು ಸ್ವಾಮಿ, ಪೂಜ್ಯರೇ! ನನಗೆ ಸಂತಾನ ಫಲವಿಲ್ಲದ್ದರಿಂದ ಕೊರಗುತ್ತಿದ್ದೇನೆ. ದಯಾಳುಗಳಾದ ತಾವು ನನ್ನಿಚ್ಛೆಯಂತೆ ಸಂತಾನ ಪ್ರಾಪ್ತಿಯನ್ನು ನೀಡಿ ಅನುಗ್ರಹಿಸಬೇಕೆಂದು ಬೇಡಿಕೊಳ್ಳಲು ಮಚ್ಛೇಂದ್ರನಾಥನು ಆಕೆಯಲ್ಲಿ ಕನಿಕರಗೊಂಡು ಜೋಳಿಗೆಯಲ್ಲಿ ಕೈಹಾಕಿ ಎರಡು ಬೆರಳಿನಿಂದ ವಿಭೂತಿಯನ್ನೆತ್ತಿ ಅದನ್ನು ಮಂತ್ರಿಸಿ ಆಕೆಯ ಕೈಗೆಕೊಟ್ಟು ತಾಯಿ ಇದನ್ನು ಭಕ್ಷಿಸು, ನಿನಗೆ ಪುತ್ರಸಂತಾನವಾಗುವದಲ್ಲದೆ ಜನಿಸಿದ ಮಗುವು ದೇವತಾಪುರುಷನಾಗುತ್ತಾನೆಂದು ಹೇಳಿ ಈ ವಿಷಯವನ್ನು ಮತ್ತಾರಿಗೂ ತಿಳಿಸಬೇಡವೆಂದು ಹೇಳಿ ಮುಂದೆ ಪ್ರಯಾಣ ಬೆಳಸಿದನು.

ಆಕೆಯು ಮಚ್ಛೇಂದ್ರನಾಥನಿಂದ ಪಡೆದ ಭಸ್ಮವನ್ನು ಒಯ್ದು ದೇವರ ಜಗುಲಿಯ ಮೇಲಿಟ್ಟು ತನ್ನ ಆಪ್ತಸಖಿಯನ್ನು ಕರೆದು ಸಖಿಯೇ! ಇದೀಗ ಯೋಗಿಯು ಭಿಕ್ಷೆಬೇಡಲು ಬಂದಿದ್ದನು, ನಾನು ಅವನಿಗೆ ಭಿಕ್ಷೆನೀಡಲು ಹೋದೆ, ಆದರೆ ಯೋಗಿಯು ಮಹಾತೇಜಸ್ವಿಯಾಗಿ, ಸಾಕ್ಷಾತ್ ಪರಶಿವನಂತೆಯೇ ಕಂಡ. ಆಗ ನಾನು ಅವನೊಬ್ಬ ಮಹಾತಪಸ್ವಿಯೆಂದು ಯೋಚಿಸಿ ಸ್ವಾಮೀ, ನನಗೆ ಸಂತಾನವಿಲ್ಲೆಂದು ಹೇಳಲು ಅವನು ಕರುಣೆಗೊಂಡು ಭಸ್ಮವನ್ನು ಮಂತ್ರಿಸಿಕೊಟ್ಟು ಇದನ್ನು ಸೇವಿಸಲು ನಿನಗೆ ಪುತ್ರಸಂತಾನವಾಗುವದೆಂದು ಹೇಳಿದನು; ಎಂದಾಕೆ ಹೇಳಲು ಆಕೆಯ ಸಖಿಯು ಅಮ್ಮಾ, ಜೋಗಿಗಳ ಮಾತು ನಂಬಬೇಡ. ಅವರು ಮೋಸದಿಂದಲೂ, ಉಪಾಯದಿಂದಲೂ ಜನರನ್ನು ಮರಳುಮಾಡಿ ಸಂಸಾರಗಳನ್ನು ಕೆಡಿಸುವರು. ತಿಳಿಯಿತೇ? ನಿನಗೆ ನನ್ನ ಮಾತಿನಲ್ಲಿ ವಿಶ್ವಾಸವಿದ್ದರೆ ನಿನ್ನ ಪತಿಯಿಂದ ಸುಖ-ಸಂಪತ್ತನ್ನು ಬಯಸುವದಾದರೆ ಆ ಭಸ್ಮವನ್ನು ನೀನು ಭುಂಜಿಸಬೇಡ, ಎಲ್ಲಿಯಾದರೂ ಚೆಲ್ಲಿಬಿಡು. ಎಂದು ಹೇಳಿದ ಸಖಿಯ ಮಾತನ್ನು ನಂಬಿ ಆ ಭಸ್ಮವನ್ನು ತಿಪ್ಪೆಯಲ್ಲಿ ಚೆಲ್ಲಿಬಿಟ್ಟಳು.

ಮಚ್ಛೇಂದ್ರನಾಥನು ತನ್ನ ಭರತಖಂಡದ ಸಂಚಾರವನ್ನು ಪೂರೈಸಿದ ನಂತರ ಆತನಿಗೆ ಹಿಂದೊಂದು ದಿನ ಪುತ್ರಸಂತಾನವನ್ನು ಕೇಳಿದ ಸ್ತ್ರೀಗೆ

ವಿಭೂತಿಯನ್ನು ಕೊಟ್ಟದ್ದು ಜ್ಞಾಪಕಕ್ಕೆ ಬರಲು ಅಲ್ಲಿಂದ ಊರಿಗೆ ಪ್ರಯಾಣ ಮಾಡುತ್ತ ಬಂದುಮುಟ್ಟಿದನು. ಅಷ್ಟೊತ್ತಿಗೆ ಪುತ್ರ ಫಲವನ್ನಿತ್ತು ಹನ್ನೆರಡು ವರ್ಷಗಳು ಗತಿಸಿಹೋಗಿದ್ದವು. ಭಿಕ್ಷಾಟನೆ ಮಾಡುತ್ತ ಆ ಸಾಹುಕಾರನ ಮನೆಯ ಮುಂದೆ ಬಂದು "ಭಿಕ್ಷಾಂದೇಹಿ" ಎಂದು ಕೂಗಿದನು; ಆಗ ಸಾವುಕಾರನ ಹೆಂಡತಿ ಭಿಕ್ಷೆನೀಡಲು ಬಂದಳು. ಮಚ್ಛೇಂದ್ರನಾಥನು ನನಗೆ ಹೀಗೆ ಬೇಕಾಗಿಲ್ಲ ತಾಯಿ, ನಿನಗೆ ಹಿಂದೊಮ್ಮೆ ಪುತ್ರಪ್ರಾಪ್ತಿಗೆಂದು ಕೊಟ್ಟ ಭಸ್ಮದಿಂದ ಜನಿಸಿದ ಮಗುವೆಲ್ಲಿ? ಕರೆದುಕೊಂಡು ಬಾ ಎನ್ನಲು ಸಾಧ್ವಿಗೆ ಸ್ಮರಣೆಯಾಗಿ, ಭಯಗೊಂಡು, ಸುಳ್ಳು ಹೇಳಿದರೆ ಶಾಪಕೊಡುವನೋ ಎಂದು ಹೆದರುತ್ತ ನಡೆದ ಸಂಗತಿಯನ್ನು ಹೇಳಿ, ನನ್ನ ತಪ್ಪನ್ನು ಕ್ಷಮಿಸಬೇಕೆಂದು ಪಾದಗಳಿಗೆ ವಂದಿಸಿದಳು. ಆಗಾತನು ತನ್ನ ಜ್ಞಾನದೃಷ್ಟಿಯಿಂದ ಎಲ್ಲವನ್ನೂ ಅರಿತು ಆ ಭಸ್ಮವನ್ನು ಎಲ್ಲಿ ಚಲ್ಲಿರುವಿ ತೋರಿಸು ಎಂದು ಹೇಳಲು ಆಗಾಕೆಯು ಭಸ್ಮ ಒಗೆದ ತಿಪ್ಪೆಯನ್ನು ತೋರಿಸಿದಳು. ಆಗಾ ಮಚ್ಛೇಂದ್ರನಾಥನು ತಾಯಿ! ನಾನು ಕೊಟ್ಟ ವರ ಎಂದಿಗೂ ವ್ಯರ್ಥವಾಗುವದಿಲ್ಲ. ನೀನು ಭಸ್ಮವನ್ನು ಇಲ್ಲಿಯೇ ಚಲ್ಲಿರುವಿಯಲ್ಲವೇ ಎಂದು ಕೇಳಿದನು. ಆಗ ಆ ಸಾಧ್ವಿಯು ಮುಂದೇನಾಗುವದೋ ಎಂಬ ಭಯದಿಂದ ಹೌದೆಂದು ಉತ್ತರ ಕೊಟ್ಟಳು. ಮಚ್ಛೇಂದ್ರನಾಥನು "ಏಹಿ" ಎಂದು ಕೂಗಲು "ಮಹಾಗುರು" ಎಂಬ ಪ್ರತಿಧ್ವನಿ ಕೇಳಿಬಂದಿತು. ಕೂಡಲೇ ಅದನ್ನು ಅಗೆಯಲು ಪೂರ್ಣಚಂದ್ರನಂತೆ ಕಾಣುತ್ತಿದ್ದ ಹನ್ನೆರಡು ವರ್ಷದ ಬಾಲಕನು ಪದ್ಮಾಸನದಲ್ಲಿ ಕುಳಿತಿದ್ದನು. ಅವನ ಮೈಗೆ ಯಾವ ವಿಧವಾದ ವಿಕಾರಗಳೂ ಆಗಿರಲಿಲ್ಲ. ಆಗ ಮಚ್ಛೇಂದ್ರನಾಥರು ಆತನ ತಲೆಯ ಮೇಲೆ ತಮ್ಮ ಹಸ್ತವನ್ನಿಡಲು ನಿದ್ದೆಯಿಂದ ಎಚ್ಚತ್ತವರಂತೆ ಆ ಬಾಲಕನು ಚಟ್ಟನೆದ್ದು ಗುರುಗಳ ಪಾದಗಳಿಗೆ ನಮಸ್ಕರಿಸಿದನು. ಗೋಮಯ ತಿಪ್ಪೆಯಲ್ಲಿ ಹುಟ್ಟಿದ್ದಕ್ಕೆ ಆಗ ಆತನಿಗೆ ಗೋರಖನೆಂದು ಹೆಸರಿಟ್ಟನು.

ಈ ರೀತಿ ನಡೆದ ಅದ್ಭುತವನ್ನು ಕಂಡವರಾದ ಸಾಹುಕಾರನೂ, ಸಾಹುಕಾರನ ಹೆಂಡತಿಯೂ ಪರಮಾಶ್ಚರ್ಯವನ್ನು ತಾಳಿ ಅವಿವೇಕದಿಂದಲೂ, ಕರ್ಮಾನುಸಾರದಂತೆಯೂ ಇಂಥ ಪುತ್ರನು ನಮಗೆ ಆಗಲಿಲ್ಲವಲ್ಲ ಎಂದು ಚಿಂತಿಸುತ್ತಿರಲು ಮಚ್ಛೇಂದ್ರನಾಥನು ಅವರನ್ನು ನೋಡಿ

ಮರುಕುಗೊಂಡು ಪುನಃ ಮಂತ್ರಿತ ಭಸ್ಮವನ್ನು ಕೊಟ್ಟು ಇದರಿಂದ ನಿನಗೆ ಪುತ್ರಸಂತಾನವಾಗುವದು ಚಿಂತಿಸಬೇಡ; ಎಂದು ಹೇಳಿ ಗೋರಖನನ್ನು ಕರೆದುಕೊಂಡು ಹೋದನು.

ಮಚ್ಛಂದ್ರನಾಥನು ತನ್ನ ಶಿಷ್ಯನಾದ ಗೋರಖನನ್ನು ಕರೆದು ಪ್ರಯಾಣ ಮಾಡುತ್ತ ಒಂದೂರಿಗೆ ಬಂದುಮುಟ್ಟಿದನು. ಅಲ್ಲಿ ಗೋರಖ ನಾಥನು ಭಿಕ್ಷಾಟನೆಮಾಡುತ್ತ ಒಂದು ಬ್ರಾಹ್ಮಣನ ಮನೆಯ ಮುಂದೆ ಬಂದುನಿಂತು ಭಿಕ್ಷೆಬೇಡಿದನು. ಅಂದು ಆ ಮನೆಯಲ್ಲಿ ಸಮಾರಾಧನೆ ನಡೆದುದರಿಂದ ಆ ಮನೆಯ ಯಜಮಾನಿಯು ಮೃಷ್ಟಾನ್ನವನ್ನು ತಂದು ಗೋರಖನಿಗೆ ನೀಡಿದಳು. ಗೋರಖನು ಅದನ್ನು ತಂದು ಗುರುವಿಗೆ ಒಪ್ಪಿಸಿದನು. ಮಚ್ಛಂದ್ರನಾಥನು ಬಹು ಸಂತೋಷಪಟ್ಟು ಭಗವಂತನಿಗೆ ನಿವೇದಿಸಿ ತಾವೂ ಉಂಡು ಸಂತೋಷಪಟ್ಟರು. ಮರುದಿನವೂ ಅಂಥದೇ ಭಿಕ್ಷೆಯನ್ನು ತರಬೇಕೆಂದು ಗೋರಖನಾಥನಿಗೆ ಆಜ್ಞೆಮಾಡಿದನು. ಗೋರಖನು ಗುರುವಿನ ಮಾತಿನಂತೆ ತಾನು ಹಿಂದಿನ ದಿವಸ ಭಿಕ್ಷೆಯನ್ನು ತಂದಿದ್ದ ಮನೆಗೆ ಪುನಃ ಹೋಗಿ ಭಿಕ್ಷೆಬೇಡಿದನು. ಆಗ ಪೂರ್ವದಂತೆ ಯಜಮಾನಿಯು ಭಿಕ್ಷೆನೀಡಲು ಬಂದಳು. ಆದರೆ ಸಾಮಾನ್ಯ ಭಿಕ್ಷವನ್ನು ತಂದಿದ್ದರಿಂದ ಅಮ್ಮಾ, ನಿನ್ನೆಯ ದಿವಸ ನೀನು ಕೊಟ್ಟ ಮೃಷ್ಟಾನ್ನ ಭಿಕ್ಷೆಯನ್ನು ಭಗವಂತನಿಗೆ ನಿವೇದಿಸಿ, ನಾನೂ ನಮ್ಮ ಗುರುಗಳೂ ಭುಂಜಿಸಿ ಬಹು ಸಂತೋಷಪಟ್ಟೆವು. ಕಾರಣ ಇಂದೂ ಅಂಥ ಭಿಕ್ಷೆಯನ್ನೇ ನೀಡಬೇಕೆಂದು ಪ್ರಾರ್ಥಿಸಿದನು. ಆಗಾ ಯಜಮಾನಿಯು ಎಲೈ ಭಿಕ್ಷುಕನೇ ! ಅದು ಹೇಗೆ ಸಾಧ್ಯ ? ನಿನ್ನೆ ನಮ್ಮ ಮಗುವಿನ ಹುಟ್ಟುದಿನವಿದ್ದುದರಿಂದ ಅಂಥ ಭೋಜನವನ್ನು ತಯಾರಿಸಿದ್ದೆವು. ಆದರೆ ದಿನವೂ ಅಂಥ ಅಡಿಗೆಯನ್ನೇ ತಯಾರಿಸಲು ನಮ್ಮಂಥ ಸಂಸಾರಿಗಳಿಗೆ ಸಾಧ್ಯವೋ ? ನಮಗೆ ದೇವರು ದಯಮಾಡಿದ್ದನ್ನು ವಂಚನೆಯಿಲ್ಲದೆ ಭಿಕ್ಷೆ ನೀಡಬಹುದು. ಅದನ್ನು ಬಿಟ್ಟು ಇಂತಹದನ್ನೇ ಭಿಕ್ಷೆ ನೀಡಬೇಕೆಂದು ನಿರ್ಬಂಧವಾಗಿ ಕೇಳಿದರೆ ಯಾರು ನೀಡುವರು ಎಂದು ಎಷ್ಟು ಹೇಳಿದರೂ ಗೋರಖನು ಕೇಳದೆ ಅಂಥ ಭಿಕ್ಷೆಯ ಹೊರ್ತು ಮತ್ತಾವ ಭಿಕ್ಷೆಯನ್ನೂ ನಾನೊಲ್ಲೆನೆಂದು ಹಠಹಿಡಿದು ಅಲ್ಲಿಯೇ ಕುಳಿತುಬಿಟ್ಟನು. ಆಗಾ ಯಜಮಾನಿಯು ಎಲೈ ತಿರುಕನೇ ! ನಾಯಿಯಂತೆ ಜಗಳವಾಡುವದರಲ್ಲಿ ಏನು ಉಪಯೋಗ ? ಕೊಟ್ಟದ್ದನ್ನು

ಸ್ವೀಕರಿಸು ಎನ್ನಲು ತಾಯೀ, ನಾನು ನಾಯಿಗಿಂತ ಕಡೆಯಾದೆನಾದರೂ ಗುರುಗಳ ಆಜ್ಞೆಯಂತೆ ನಡೆಯಲೇಬೇಕಾಗಿದೆ. ಕಾರಣ ನೀನು ಹೇಗಾದರೂ ಮಾಡಿ ಅಂಥ ಭಿಕ್ಷೆಯನ್ನು ಕೊಟ್ಟೇತೀರಬೇಕು; ಇಲ್ಲವಾದರೆ ಎದ್ದು ಹೋಗಲಾರೆನೆಂದು ಗಟ್ಟಿಯಾಗಿ ಹೇಳಿ ಆಕೆಯನ್ನು ದುರದುರನೇ ನೋಡಿದನು. ಆಗಾಕೆಯು ಆತನ ದೃಷ್ಟಿಯನ್ನು ಕಂಡರೂ ಸಮಾಧಾನದಿಂದ ನೀನು ನಿನ್ನ ಕಣ್ಣುಗಳನ್ನು ಕಿತ್ತಿಕೊಂಡರೂ ಆ ಭಿಕ್ಷೆಗಳು ದೊರೆಯಲಾರದು ಎಂದೆನಲು ಆಗ ಗೋರಖನು ಅದನ್ನು ಕೇಳಿ ತಾಯೀ, ನಿನ್ನ ಭಕ್ಷ್ಯಗಳಿಗೆ ನನ್ನ ನಯನ ಸರಿಯಲ್ಲವೇ ಒಳ್ಳೇದು, ನನ್ನ ಕಣ್ಣು ಕಿತ್ತುಕೊಟ್ಟರೆ ಆ ಭಕ್ಷ್ಯಗಳನ್ನು ಮಾಡಿಕೊಡುವಿಯಾ? ಎಂದಾಕೆಯನ್ನು ಕೇಳಲು ಆಗಾ ಸುದತಿಯು ಇವನ ಮನೋಧೈರ್ಯವನ್ನಾದರೂ ನೋಡಬೇಕೆಂದೆಣಿಸಿ ಒಳ್ಳೇದು, ನಿನ್ನ ಕಣ್ಣು ಕಿತ್ತುಕೊಟ್ಟರೆ ಆ ಭಕ್ಷ್ಯಗಳನ್ನು ಮಾಡಿಕೊಡುವೆನು ಎಂದು ಹೇಳಿದಳು. ಆಗಾತನು ಅಲ್ಲಿಯೇ ಬಿದ್ದಿದ್ದ ಬಿದಿರು ಶಿಬಿಕೆಯನ್ನು ತಗೊಂಡು ಅದರಿಂದ ಕಣ್ಣುಗುಡ್ಡೆಯನ್ನು ಮೀಟಿ ಹೊರತೆಗೆದು ಆಕೆಯ ಕೈಯಲ್ಲಿ ಕೊಟ್ಟನು. ಆಗಾಕೆಯು ಅದನ್ನು ಕಂಡು ಆಶ್ಚರ್ಯವೂ, ಭಯವೂ ಉಂಟಾದವಳಾಗಿ ಕಣ್ಣಿನಿಂದ ಹರಿಯುವ ರಕ್ತಪ್ರವಾಹವನ್ನು ತನ್ನ ಸೆರಗಿನಿಂದ ಒರೆಸಿದಳು. ಕಣ್ಣು ಕಿತ್ತುಕೊಂಡಿದ್ದರಿಂದಾದ ವೇದನೆಯನ್ನು ಲಕ್ಷಿಸದೆ ನಿಶ್ಚಲನಾಗಿರುವದನ್ನು ಕಂಡು ಇವನೊಬ್ಬನು ದೇವಾಂಶ ಪುರುಷನೆಂದು ಭಾವಿಸಿ ಆತನಿಗಿಷ್ಟವಾದ ಭಕ್ಷ್ಯಗಳನ್ನು ಸಿದ್ಧಮಾಡಿ ಕೊಟ್ಟು ತನ್ನ ಮಹಾಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡಳು. ಆಗಾ ಯಜಮಾನಿಯನ್ನು ಕುರಿತು- ತಾಯೀ, ನೀನು ಎಷ್ಟು ಮಾತ್ರವೂ ಹೇದರಬೇಡ; ಸರ್ವೇಶ್ವರನು ನಿನಗೆ ಮಂಗಳವನ್ನುಂಟು ಮಾಡಲಿ. ಎಂದು ಸಮಾಧಾನಪಡಿಸಿ ಅಲ್ಲಿಂದ ತೆರಳಿ ಗುರುವಿನ ಬಳಿಗೆ ಬಂದು ನಮಸ್ಕರಿಸಿ ತಾನು ತಂದ ಭಕ್ಷ್ಯಗಳನ್ನು ಸಮರ್ಪಿಸಿ ನಿಂತುಕೊಂಡನು. ಮಚ್ಛೀಂದ್ರನಾಥನು ಎಂದಿನಂತೆ ಅವುಗಳನ್ನು ಭಗವಂತನಿಗೆ ನಿವೇದಿಸಿ ಸಂತೋಷದಿಂದ ಗೋರಖನ ಕಡೆಗೆ ನೋಡಲು ಅವನು ಒಂದು ಕಣ್ಣು ಮುಚ್ಚಿಕೊಂಡಿರುವದನ್ನು ನೋಡಿ ಇದೇನು ಗೋರಖ, ನಿನ್ನ ಕಣ್ಣಿಗೇನಾಗಿದೆ ಎಂದು ಕೇಳಲು ಆಗ ಗೋರಖನು ನಡೆದ ಸಂಗತಿಯನ್ನು ಹೇಳಿದನು.

ಆಗ ಮಚ್ಛೇಂದ್ರನಾಥನು ಏನು! ಈ ಭಕ್ಷ್ಯಗಳಿಗಾಗಿ ಒಂದು ಕಣ್ಣನ್ನು ಕೊಟ್ಟೆಯಾ! ಎಂದು ಕೇಳಲು, ಆಗ ಗೋರಖನು ಮಹಾ ಗುರುವಿಗಾಗಿ ಕೊಟ್ಟ ನನ್ನ ಕಣ್ಣು ಸಾರ್ಥಕವಾಯಿತೆನ್ನುತ್ತ ಉಳಿದ ಕಣ್ಣನ್ನೂ ಮೀಟಿ ಗುರುವಿಗರ್ಪಿಸಿದನು. ಆಗಾ ಮಚ್ಛೇಂದ್ರನಾಥನು ಗೋರಖನ ಗುರುಭಕ್ತಿಗೆ ಮೆಚ್ಚಿ ಎಲೈ ಶಿಷ್ಯನೇ, ನಿನ್ನ ಅಸಾಧಾರಣ ಭಕ್ತಿಗೆ ಮೆಚ್ಚಿದೆನು. ನಿನ್ನ ಶಿಷ್ಯತ್ವವು ಅತಿ ಮಹತ್ವವಾದದ್ದು, ನಿನ್ನಂಥ ಶಿಷ್ಯನು ತ್ರಿಲೋಕಗಳಲ್ಲಿಯೂ ದೊರೆಯಲಾರನು. ನಿನ್ನ ಕೀರ್ತಿ ಬೆಳಗಲಿ, ಮತ್ತು ನಿನಗೆ ಬೇಕಾದ ವರವನ್ನು ಕೇಳಿಕೋ ಎಂದನು. ಆಗ ಗೋರಖನು ಗುರುಗಳೇ! ತಮ್ಮ ಕೃಪಾಕಟಾಕ್ಷವೊಂದಿದ್ದರೆ ಸಾಕು, ನನಗೆ ಮತ್ತೇನೂ ಬೇಡವೆಂದನು. ಆಗ ಮಚ್ಛೇಂದ್ರನಾಥನು ಅತ್ಯಾನಂದಭರಿತನಾಗಿ ಅವನ ನಿಸ್ವಾರ್ಥಸೇವೆಯನ್ನು ಮೆಚ್ಚಿಕೊಂಡಿದ್ದರಲ್ಲದೆ ಗೋರಖನಿಗೆ ತನ್ನ ಸರ್ವ ವಿದ್ಯಾದಾನ ಮಾಡಿ ಆಶೀರ್ವದಿಸಿದರು; ಮತ್ತು ತನ್ನ ಸಿದ್ಧಿ ಶಕ್ತಿಯಿಂದ ಗೋರಖನ ಕಣ್ಣುಗಳನ್ನು ಪೂರ್ವದಂತೆ ತಂದುಕೊಟ್ಟನು.

ಗೋರಖನಾಥನು ಗುರೂಪದೇಶವನ್ನು ಹೊಂದಿ ಸಕಲ ಸಿದ್ಧಿ ಶಕ್ತಿಯನ್ನೂ, ಶಾಸ್ತ್ರ ಪಾಂಡಿತ್ಯವನ್ನೂ, ಮಾಯಾಶಕ್ತಿಯನ್ನೂ ಸಂಪಾದಿಸಿಕೊಂಡನು. ಗುರು-ಶಿಷ್ಯರಿಬ್ಬರೂ ಕೂಡಿಕೊಂಡು ದೇಶಗಳನ್ನು ಸಂಚರಿಸುತ್ತ ಪ್ರಮಿಳಾದೇವಿ ಆಳುತ್ತಿದ್ದ ಸ್ತ್ರೀ-ರಾಜ್ಯಕ್ಕೆ ಬಂದುಮುಟ್ಟಿದರು. ಅಲ್ಲಿ ಪುರುಷರು ಸ್ತ್ರೀಯರ ಒಡೆತನಕ್ಕೆ ಸೇರಿ ಅವರ ಇಚ್ಛೆಯಂತೆ ಎಲ್ಲ ಕಾರ್ಯಗಳನ್ನೂ ಮಾಡಬೇಕಾಗಿದ್ದಿತು. ಅಲ್ಲಿ ಪುರುಷರ ಸಂಖ್ಯೆಯು ಅತಿ ವಿರಳವಾದ್ದರಿಂದ ಪುರುಷರನ್ನು ಕಂಡರೆ ತಮ್ಮ ನಿರ್ಬಂಧದಲ್ಲಿಡುತ್ತಿದ್ದರಲ್ಲದೆ ಅವರನ್ನು ಮಹಾರಾಣಿಯ ಸನ್ನಿಧಿಗೊಯ್ದು ಒಪ್ಪಿಸಿ ಆಕೆಯ ಇಚ್ಛೆಯಂತೆ ಹಲವು ಜನರೊಡನೆ ಲಗ್ನವಾಗುವ ಪದ್ಧತಿ ಇದ್ದಿತು. ಇಂಥ ರಾಜ್ಯದಲ್ಲಿ ಇವರು ಹೋದದ್ದೇ ತಡ, ಬ್ರಹ್ಮಚರ್ಯ ತೇಜಸ್ಸಿನಿಂದ ಕಂಗೊಳಿಸುತ್ತಿದ್ದ ಇವರನ್ನು ಬಂಧಿಸಿ ರಾಣಿಯ ಸನ್ನಿಧಿಗೊಯ್ದರು. ರಾಣಿಯು ಮಚ್ಛೇಂದ್ರನಾಥನ ಮೇಲೆ ಮನಸ್ಸುಳ್ಳವಳಾಗಿ ತನ್ನನ್ನು ಪ್ರೇಮಿಸೆಂದು ಆಜ್ಞೆ ಮಾಡಿದಳು. ಅದಕ್ಕೆ ಮಚ್ಛೇಂದ್ರನಾಥನು ಒಪ್ಪದೆ ಆಕೆಯನ್ನು ಅನೇಕ ಮರ್ಮಭೇಧಕ ಮಾತುಗಳಿಂದ ನಿಂದಿಸಿದನು. ಆಗ ರಾಣಿಯು ಮಚ್ಛೇಂದ್ರನಾಥನ ಮೇಲೆ

ಸಿಟ್ಟಾಗಿ ಆವನ ಕೊರಳಲ್ಲಿ ಕಲ್ಲುಗಾಲಿಯನ್ನು ಹಾಕಿ ತಿರುವಿ ಕೊಲ್ಲಿರೆಂದು ಆಜ್ಞೆಮಾಡಿದಳು ಆಗ ಮಚ್ಛಿಂದ್ರನನ್ನು ಎಳೆದೊಯ್ದು ಆತನ ಕೊರಳಿಗೆ ಕಲ್ಲುಗಾಲಿಯನ್ನು ತೊಡಿಸಿ ತಿರುವಿದರು. ಮಚ್ಛಿಂದ್ರನಾಥನು ಆ ವರೆಗೂ ಬೇಕಂತಲೇ ಎಲ್ಲವನ್ನೂ ಸಹಿಸಿಕೊಂಡಿದ್ದನು. ಅವನಿಗೆ ಆ ರಾಜ್ಯದಿಂದ ಪಾರಾಗಿ ಹೋಗುವದು ದುಸ್ತರವಿದ್ದಿಲ್ಲ. ಆದರೂ ಉದ್ದೇಶಪೂರ್ವಕ ಸುಮ್ಮನಿದ್ದನು. ಆದರೆ ಕಲ್ಲಿನ ಗಾಲಿಯನ್ನು ಕೊರಳಲ್ಲಿ ತೊಡಿಸಿ ತಿರುವಿದಾಗ ಮಚ್ಛಿಂದ್ರನಾಥನು "ಜೈ ಸಿದ್ಧನಾಥ" ನೆಂದ ಕೂಡಲೇ ಕಲ್ಲು ಗಾಲಿಯು ಸಿಡಿದು ಹೋಯಿತು. ಆತನಿಗೇನೂ ಅಪಾಯವಾಗಿರಲಿಲ್ಲ. ಇದನ್ನು ಕಂಡು ಮಹಾರಾಣಿ ವಿಸ್ಮಿತಳಾದಳು. ಆದರೂ ಅಷ್ಟಕ್ಕೆ ಬಿಡದೆ ಮಚ್ಛಿಂದ್ರನಾಥನ ಶಿರಚ್ಛೇದ ಮಾಡಲು ಆಜ್ಞೆ ಮಾಡಿದಳು. ಶಿಪಾಯರು ಕತ್ತಿಯನ್ನು ಒರೆಯಿಂದ ಹಿರಿದು ಆತನ ಶಿರಸ್ಸಿನ ಮೇಲೆ ಪ್ರಹರಮಾಡಿದರು. ಕತ್ತಿಯು ಶಿರಸ್ಸನ್ನು ಭೇದಿಸಿಕೊಂಡು ಹೋಗಿತ್ತಾದರೂ ಮಚ್ಛಿಂದ್ರನಾಥನಿಗೆ ಯಾವ ತರದ ಅಪಾಯವೇ ಆಗಿರಲಿಲ್ಲ. ಪುನಃ ಪುನಃ ಆತನ ಶಿರಸ್ಸಿನ ಮೇಲೆ ಪ್ರಹರ ಮಾಡಿದರೂ ಆತನಿಗೆ ತಿಲಮಾತ್ರವೂ ಅಪಾಯ ಸಂಭವಿಸಲಿಲ್ಲ. ಆಗಂತೂ ಮಹಾರಾಣಿಯು ವಿಸ್ಮಯದಿಂದಲೂ ಭಯದಿಂದಲೂ ಕೂಡಿದವಳಾಗಿ ಸುಮ್ಮನೆ ನಿಂತುಬಿಟ್ಟಳು. ಆಗ ಮಚ್ಛಿಂದ್ರನಾಥನು, ಮಹಾರಾಣಿಯನ್ನು ಕುರಿತು— ಮಹಾರಾಣಿಯವರೇ ! ಮುಗಿದವೆ ನಿಮ್ಮ ಆಜ್ಞೆಗಳು ? ಏಕೆ ಸುಮ್ಮನೆ ನಿಂತಿರಿ ಎನ್ನಲು ಮಹಾರಾಣಿಯು ಮಹಾನುಭಾವರೇ, ತಾವು ಮಹನೀಯರು. ನಾನು ತಿಳಿಯದೆ ಮಾಡಿದ ಅಪರಾಧವನ್ನು ಕ್ಷಮಿಸಿರಿ ಎಂದು ಬೇಡಿಕೊಂಡಳು. ಆಗ ಮಚ್ಛಿಂದ್ರನಾಥನು ಆಕೆಯನ್ನು ಸಂತೈಸಿ ಮಹಾರಾಣಿ ! ಇಲ್ಲಿ ಕೇಳು "ಪುರುಷನು ಸ್ತ್ರೀಯ ಮೇಲೆ ಒತ್ತಾಯ ಮಾಡಿದರೂ ತನ್ನ ಮನೋಭಿಲಾಷೆಯನ್ನು ಪೂರೈಸಿಕೊಳ್ಳಬಲ್ಲನು. ಆದರೆ ಆದೇ ಸ್ತ್ರೀಯು ಪುರುಷನ ಮೇಲೆ ಆತನ ಇಚ್ಛೆಯ ವಿರುದ್ಧ ಒತ್ತಾಯಮಾಡಿ ತಮ್ಮ ಮನೋಭಿಲಾಷೆಯನ್ನು ಪೂರೈಸಿಕೊಳ್ಳಲಾರಳು." ಎಂಬ ಸಿದ್ಧಾಂತವನ್ನು ನೀನು ಪ್ರತ್ಯಕ್ಷ ಕಂಡುಕೊಂಡಿರುವಿ. ಇದೇ ಸಿದ್ಧಾಂತದ ಆಧಾರದಿಂದ ಪುರುಷನು ಸರ್ವ ಸ್ವತಂತ್ರನೂ, ಸ್ತ್ರೀಯು ಪುರುಷನ ಆಧೀನಳೂ ಎಂದು ನಮ್ಮ ಸನಾತನ ಧರ್ಮವು ಸಾರುವದು ಎಂದರ್ಥವಿದೆ. ಎಂದು ಹೇಳಲು

ರಾಣಿಯು ತನ್ನ ಅವಿವೇಕತನಕ್ಕೆ ಎಚ್ಚತ್ತು ಮಚ್ಛೇಂದ್ರನಾಥರನ್ನು ಗುರುವೆಂದು ಭಾವಿಸಿ ಆತನಿಗೆ ಗುರುಕಾಣಿಕೆ ಕೊಟ್ಟು ನಮಸ್ಕರಿಸಿ ಬೀಳ್ಕೊಟ್ಟಳು. ಮಚ್ಛೇಂದ್ರನಾಥನು ಪ್ರಮೀಲಾರಮಣಿಯು ಕಾಣಿಕೆಯಾಗಿ ಕೊಟ್ಟಿದ್ದ ಬಂಗಾರದ ಆಭರಣಗಳನ್ನು ಭದ್ರವಾಗಿ ಮುಚ್ಚಿಕೊಂಡು ಪ್ರಯಾಣ ಬೆಳೆಸಿದನು.

ಮಚ್ಛೇಂದ್ರನಾಥನೂ, ಗೋರಖನಾಥನೂ ಕೂಡಿ ಆ ಸ್ತ್ರೀ-ರಾಜ್ಯ ಬಿಟ್ಟು ಪ್ರಯಾಣ ಬೆಳೆಸಿದರು. ಕೆಲ ಪ್ರಯಾಣದ ನಂತರ ಒಂದು ನದಿಯ ದಡಕ್ಕೆ ಬಂದು ಸ್ನಾನಾರ್ಚನೆಗಾಗಿ ಅಲ್ಲಿ ಕೆಲಸಮಯ ನಿಂತರು. ಆಗ ಮಚ್ಛೇಂದ್ರನಾಥರು ಸ್ನಾನಕ್ಕೆಂದು ನದಿಗೆ ಹೋದಾಗ ಗೋರಖನು ಯಾವ ಕಾರಣದಿಂದಲೋ ಜೋಳಿಗೆಯನ್ನು ತಪಾಸಿಸಲಾಗಿ ಬಂಗಾರದ ದಾಗೀನೆಗಳು ಸಿಕ್ಕುಕೊಂಡವು. ಆಗ ಗೋರಖನು ಅವುಗಳನ್ನು ಕೈಯಲ್ಲಿ ತಗೊಂಡು ಛೀ, ಛೀ ಮಹಾನುಭಾವರಾದ ನನ್ನ ಗುರುಗಳು ಈ ಜಡ ವಸ್ತುಗಳನ್ನೇಕೆ ಮುಚ್ಚಿಟ್ಟುಕೊಂಡಿದ್ದಾರೆ ಎಂದು ನುಡಿಯುತ್ತ ಅವುಗಳನ್ನು ನದಿಯಲ್ಲಿ ಬಿಸುಟಿಬಿಟ್ಟನು. ಮಚ್ಛೇಂದ್ರನಾಥನು ಸ್ನಾನಾರ್ಚನೆ ಮಾಡಿಕೊಂಡು ಬಂದು ಗೋರಖನೊಡನೆ ಪ್ರಯಾಣ ಬೆಳೆಸಿದನು. ಕೆಲ ದೂರ ಪ್ರಯಾಣ ಬೆಳೆಸಿದ ನಂತರ ಮಚ್ಛೇಂದ್ರನಾಥನು ಜೋಳಿಗೆಯನ್ನು ತೆರೆದು ನೋಡಲು ಆ ಬಂಗಾರದ ಒಡವೆಗಳೇ ಇದ್ದಿರಲಿಲ್ಲ. ಆಗ ಗಾಬರಿಯಿಂದ ಶಿಷ್ಯನನ್ನು ಕೇಳಲಾಗಿ ಅವನು ಅವುಗಳನ್ನು ನದಿಯಲ್ಲಿ ಬೀಸಾಕಿದೆನೆಂದು ತಿಳಿಸಿದನು. ಆಗ ಮಚ್ಛೇಂದ್ರನಾಥನು ಎಲೈ ಗೋರಖ ! ಎಂಥ ಅನರ್ಥವನ್ನು ಮಾಡಿದಿ, ಅತ್ಯಂತ ಭಕ್ತಿಯಿಂದ ನನ್ನ ಶಿಷ್ಯಳು ಕೊಟ್ಟಿದ್ದ ಕಾಣಿಕೆಯನ್ನು ಕಡೆಗಣಿಸಿ ಒಗೆದುಬಿಟ್ಟೆಯಲ್ಲ, ಅದು ನನಗೆ ಆಪದ್ಧನವಾಗುತ್ತಿರಲಿಲ್ಲವೇ ? ಎಂದು ಸ್ವಲ್ಪ ಕಠಿಣವಾಗಿಯೇ ಮಾತಾಡಿಬಿಟ್ಟನು. ಅದಕ್ಕೆ ಗೋರಖನು ನಸುನಗುತ್ತ ಸ್ವಾಮಿ, ಏನಿದು ವಿಚಿತ್ರವಾಗಿ ಮಾತಾಡುತ್ತಿರುವಿ ? ಜಡ ಪದಾರ್ಥವಾದ ಆ ಚಿನ್ನವು ಸಂಸಾರಿಗಳಿಗೆ ಮಾತ್ರ ಆಪದ್ಧನವಾಗಬಲ್ಲದು. ಆದರೆ ನಮ್ಮಂಥ ಸಾಧುಗಳ ಆಪತ್ತನ್ನು ಪರಿಹರಿಸುವದಕ್ಕೆ ಅದೆಷ್ಟರದು; ನೀವನ್ನುವದು ವಿನೋದಕ್ಕಾಗಿಯೋ ಹೇಗೆ ! ತಿಳಿಯದು ಎಂದನು. ಆಗ ಮಚ್ಛೇಂದ್ರನಾಥನು ಸರಿ, ಸರಿ ಸುಮ್ಮನಿರು; ಬಂಗಾರವನ್ನು ಒಗೆದುಬಿಟ್ಟು ನನಗೇನೋ ಶುಷ್ಕ ಸಮಾಧಾನಗಳನ್ನು

ಹೇಳುತ್ತಿದ್ದಿಲ್ಲ ಸಾಕು ಸುಮ್ಮನಿರು, ಎಂದನು. ಆಗ ಗೋರಖನು ಇದು ವಿಚಿತ್ರವಾದುದು ಎನ್ನುತ್ತ ಅಲ್ಲಿಯೇ ಬಿದ್ದಿದ್ದ ಒಂದು ದೊಡ್ಡ ಬಂಡೆಯ ಮೇಲೆ ಮೂತ್ರಮಾಡಲು, ಆ ಕಲ್ಲು ಚಿನ್ನವಾಗಿ ಪರಿವರ್ತಿಸಿತು. ಆಗ ಗೋರಖನು ಮಚ್ಛಂದ್ರನಾಥನನ್ನು ಕುರಿತು-ಗುರುಗಳೇ! ತೆಗೆದುಕೊಳ್ಳಿರಿ ನಿಮಗೆಷ್ಟು ಬೇಕು ಬಂಗಾರ ಎಂದನು. ಆಗ ಮಚ್ಛಂದ್ರನಾಥ ಶಿಷ್ಯನ ಅಪಾರ ಮಹಿಮೆಯನ್ನು ಕಂಡು ವಿಸ್ಮಿತನಾಗಿ ಗೋರಖನನ್ನು ಕೊಂಡಾಡುತ್ತ ಸಿದ್ಧಾಶ್ರಮದತ್ತ ತೆರಳಿದನು.

ಗೋರಖನು ಆಕಾಶಗಮನವನ್ನೂ, ನೀರ ಮೇಲಿನ ಗಮನವನ್ನೂ ಸಂಪಾದಿಸಿ ದೇವ ಗಂಧರ್ವರು ಸಂಚರಿಸಕ್ಕ ಮಾರ್ಗಗಳಲ್ಲಿ ಅವಲೀಲೆಯಾಗಿ ಸಂಚರಿಸುತ್ತಿದ್ದ ಹದಿನಾಲ್ಕು ಲೋಕಗಳನ್ನೂ ಸಂಚರಿಸಿ ಯೋಗ ಸಾಮ್ರಾಜ್ಯದ ಚಕ್ರವರ್ತಿಯಾಗಿ ಮೆರೆದನು.

---

## ೧೫. ಕೇಶವಸ್ವಾಮಿಯ ಚರಿತ್ರೆ

ಪೂರ್ವಕಾಲದಲ್ಲಿ ಪರಮಭಕ್ತನಾದ ಕೇಶವಸ್ವಾಮಿಯೆಂಬಾತನು ಆಗಿ ಹೋದನು. ಅವನು ಸದಾ ದೇಶಸಂಚಾರ ಮಾಡುತ್ತ ಪರಮಾತ್ಮನ ಗುಣವಿಶೇಷಗಳನ್ನೂ, ಆತನ ಮಹಿಮೆಯನ್ನೂ, ಜನರಿಗೆ ಬೋಧಿಸುತ್ತಲಿದ್ದನು. ಇಂತವನು ದೇಶಸಂಚಾರ ಮಾಡುತ್ತ ಬಿಜಾಪುರಕ್ಕೆ ಬಂದನು ಅಲ್ಲಿ ಕೆಲದಿನಗಳಿದ್ದು, ದಿನಾಲು ಹರಿಕೀರ್ತನೆಗಳನ್ನು ಮೃದುಮಧುರವಾದ ತನ್ನ ಕಂಠದಿಂದ ಬೋಧಿಸುತ್ತ ಕಾಲಕ್ಷೇಪ ಮಾಡುತ್ತಿದ್ದನು. ಆಗೊಂದು ಏಕಾದಶಿಯು ಸಂಧಿಸಿತು. ಅಂದು ಪುರಜನರು ಕೇಶವಸ್ವಾಮಿಯಿಂದ ಹರಿಕಥಾಶ್ರವಣ ಮಾಡಿಸಬೇಕೆಂಬ ಬಯಕೆಯಿಂದ ಅಂಗಡಿಬೀದಿಯಲ್ಲಿ ಸಂಕೀರ್ತನಕ್ಕಾಗಿ ಏರ್ಪಾಡು ಮಾಡಿದ್ದರು. ಅಲ್ಲಿ ಹಿರಿಯರು ಕಿರಿಯರು, ಧನವಂತರು, ದರಿದ್ರರು ಎಂಬ ಭೇದಭಾವಗಳಿಲ್ಲದೆ ಎಲ್ಲರೂ ಬಂದು ನೆರೆದಿದ್ದರು. ತಾಳ, ತಂಬೂರಿ, ಮದ್ದಲಿಗಳ ರಸಭರಿತ ಸುಸ್ವರವು ಕರ್ಣಾನಂದಕರವಾಗಿದ್ದವು. ಈ ತಾಳ ತಂಬೂರಿ ಮದ್ದಲಿಗಳ ಸ್ವರಗಳಿಗೆ

ಮೋಳೈಸಿ, ಕೇಶವಸ್ವಾಮಿಯು ತನ್ನ ಮಧುರ ಕಂಠದಿಂದ ಹರಿಕಥಾ ಸಂಕೀರ್ತನವನ್ನು ಆರಂಭಿಸಿದನು. ಆತನ ಸಂಕೀರ್ತನೆಯಿಂದ ಜನರು ಕರ್ಣಾನಂದಭರಿತರಾದರು. ಇಂತು ಈ ಕಥಾ ಪ್ರಸಂಗವು ಏಕಾದಸಿಯಾದ ಅಂದು ಬೆಳಗಿನವರೆಗೆ ಸಂಕೀರ್ತನೆ ನಡೆಯಬೇಕಾಗಿದ್ದಿತು. ಏಕಾದಸಿಯ ನಿಮಿತ್ತವಾಗಿ ಸರ್ವರೂ ಉಪವಾಸವೆಂದರಿತು ಮಧ್ಯರಾತ್ರಿಯ ಸುಮಾರಕ್ಕೆ ಹರಿಕಥೆಯಲ್ಲಿ ಲೀನನಾಗಿದ್ದ ಓರ್ವ ಶಿಷ್ಯನನ್ನು ಕರೆದು ನೀನು ಅಂಗಡಿಗೆ ಹೋಗಿ ಶುಂಠಿಯನ್ನೂ ಸಕ್ಕರೆಯನ್ನೂ ತಾ. ಅದನ್ನು ದೇವರಿಗೆ ನಿವೇದಿಸಿ, ಇಲ್ಲಿ ನೆರೆದ ಸರ್ವರಿಗೂ ಪ್ರಸಾದವನ್ನು ಹಂಚಬೇಕಾಗಿದೆ ಎಂದು ಹೇಳಲು, ಆ ಶಿಷ್ಯನು ಕೂಡಲೇ ಎದ್ದು ಶುಂಠಿ ಸಕ್ಕರೆಗಳನ್ನು ತರಲು ಹೊರಟು ಹೋದನು ಆದರೆ ಎಲ್ಲಿ ನೋಡಿದರೂ ಅಂಗಡಿಗಳು ಮುಚ್ಚಿಯೇ ಇದ್ದವು ಆಗ ಅತನಿಗೆ ಏನು ಮಾಡುವದಕ್ಕೂ ತೋಚದೆ ಆಲೋಚಿಸುತ್ತಿರಲು ಅಲ್ಲಿಯೇ ಒಂದು ಮುಚ್ಚಲ್ಪಟ್ಟ ಅಂಗಡಿಗೆ ಹೋಗಿ ಮಲಗಿ ನಿದ್ರಿಸುತ್ತಿದ್ದ ವೈಶ್ಯನನ್ನು ಎಬ್ಬಿಸಿ, ಆತನಿಗೆ ಒದಗಿದ ಸಂದರ್ಭವನ್ನು ಹೇಳಿ ಶುಂಠಿಯನ್ನೂ, ಸಕ್ಕರೆಯನ್ನೂ ಕೊಡೆಂದು ಹೇಳಲು ಆತನು ನಿದ್ದೆಗಣ್ಣಲ್ಲಿದ್ದು ಕತ್ತಲೆಯಲ್ಲಿಯೇ ಕೈಯಾಡಿಸಿ, ಹುಡಿಕಿ ಶುಂಠಿಯೆಂದು ಏಳುಸೇರು ವತ್ಸನಾಭವನ್ನೂ ಅದಕ್ಕೆ ಸರಿಯಾದ ಸಕ್ಕರೆಯನ್ನೂ ಕೊಡುತ್ತ ಮಗನು ಸಂತೆಗೆ ಹೋಗಿದ್ದರಿಂದ ನನಗೆ ಬರುವದಾಗಲಿಲ್ಲವೆಂದು ಹೇಳಿ ಜನರು ಬಹಳ ಸೇರಿರಬಹುದಾದ್ದರಿಂದ ಸಕ್ಕರೆಯು ಸಾಲಲಿಕ್ಕಿಲ್ಲವೆಂದು ಮತ್ತಷ್ಟು ಸಕ್ಕರೆಯನ್ನು ಕೊಟ್ಟು ಕಳಿಸಿ ಪುನಃ ಮಲಗಿದನು. ಆ ವಿಷಯವು ಶಿಷ್ಯನಿಗೂ ತಿಳಿಯದೆ ಅದನ್ನು ಚೂರುಚೂರನ್ನಾಗಿ ಮಾಡಿ ಸಕ್ಕರೆಯಲ್ಲಿ ಸೇರಿಸಿ ದೇವರ ಮುಂದಿಟ್ಟನು.

ವೈಶ್ಯನು ನಿದ್ದೆಗಣ್ಣಲ್ಲಿ ಅಭಯವೆಂದು ಶಾಪವನ್ನು ಕೊಟ್ಟಂತೆಯೂ, ಪ್ರಾರ್ಥನೆಯೆಂದು ಅಪಶಬ್ದಗಳನ್ನು ಅಂದಂತೆಯೂ, ಹೂವಿನ ಹಾರವೆಂದು ಹಾವನ್ನು ಕೊರಳಲ್ಲಿ ಹಾಕಿದಂತೆಯೂ ಶುಂಠಿಯೆಂದ ವಿಷವನ್ನು ಕೊಟ್ಟನು

ಈ ರೀತಿಯಾಗಿ ವಿಪರೀತವಾಗಿ ನಡೆದುದನ್ನರಿತ ಪರಮಾತ್ಮನು, ಅಲ್ಲಿ ನೆರೆದವರೆಲ್ಲರೂ ಆ ವಿಷವನ್ನು ತಿಂದು ಸತ್ತರೆ ಮಹಾ ಅನರ್ಥವಾಗುವದೆಂದೂ, ನಿರಪರಾಧಿಯಾದ ಕೇಶವನು ಮಹಾ ಕಷ್ಟಕ್ಕೊಳಗಾ

ಗಾಗುವನೆಂದೂ, ಜನರಲ್ಲಿ ತನ್ನ ಮೇಲಿನ ಭಕ್ತಿ ವಿಶ್ವಾಸಗಳು ಇಲ್ಲದಂತಾಗುವದೆಂದೂ ಯೋಚಿಸಿ, ಯಾವ ದುರ್ಘಟನೆಗಳೂ ಜರುಗದಂತೆ ತನ್ನ ಮಹಾ ಶಕ್ತಿಯಿಂದ ವತ್ಸನಾಭದಲ್ಲಿಯ ವಿಷವನ್ನು ಹೀರಿ ಅದನ್ನು ಅಮೃತಪ್ರಾಯವಾದ ಶುಂಠಿಯಂತೆ ಮಾಡಿದನು.

ಇತ್ತ ಕೇಶವಸ್ವಾಮಿಯು ಬೆಳಗಾಗುತ್ತಲೇ ಸಂಕೀರ್ತನೆಯನ್ನು ಮುಗಿಸಿ ಮಂಗಲಮಾಡಿ ಪ್ರಸಾದವನ್ನು ಎಲ್ಲರಿಗೂ ಕೊಟ್ಟನು. ಆ ಪ್ರಸಾದವನ್ನು ಕೆಲವರು ಅಲ್ಲಿಯೇ ತಿಂದರು; ಇನ್ನಿತರರು ಅದನ್ನು ಮನೆಗೊಯ್ದು ಮನೆಯವರಿಗೂ ಸ್ವಲ್ಪ ಭಾಗ ಕೊಟ್ಟು ಅವರೊಡನೆ ಸೇವಿಸಿದರು. ಇಂತು ಎಲ್ಲರೂ ಸೇವಿಸಿದರೂ, ಯಾರಿಗೂ ಯಾವ ಅಪಾಯವೂ ಆಗಲಿಲ್ಲ.

ಅತ್ತ ಆ ವೈಶ್ಯನು ಮಾರನೇ ದಿನ ಅಂಗಡಿಯನ್ನು ತೆಗೆದು ನೋಡಲಾಗಿ ವತ್ಸನಾಭದ ಚೀಲವು ಎದುರಿಗಿದ್ದು ಅದು ಖಾಲಿಯಾಗಿದ್ದಿತು. ಹಿಂದಿನ ರಾತ್ರಿ ಅದೇ ಶುಂಠಿಯೆಂದು ಕೇಶವನ ಶಿಷ್ಯನಿಗೆ ಕೊಟ್ಟು ಆ ಚೀಲವನ್ನು ಅಲ್ಲಿಯೇ ಬಿಟ್ಟಿದ್ದನು. ಆ ವಿಚಾರವು ಲಕ್ಷ್ಯಕ್ಕೆ ಬಂದು ಭಯಪಟ್ಟನು. ಕೀರ್ತನೆಗಾಗಿ ಕೂಡಿದ ಜನರು ಪ್ರಸಾದವೆಂದು ಸೇವಿಸಿದ್ದರಿಂದ ಅವರೆಲ್ಲರೂ ಎಲ್ಲಿ ಸತ್ತರೋ ಏನೋ, ಈ ಸಮಾಚಾರವು ಜನರಿಗೆ ತಿಳಿದರೆ ನನ್ನ ಗತಿಯೇನು? ನಿದ್ದೆಗಣ್ಣಲ್ಲಿ ನಾನೆಂಥ ಅಪರಾಧ ಮಾಡಿದೆನಲ್ಲಾ ! ಎಂದು ಹಳಹಳಿಸುತ್ತಲಿದ್ದನು. ನಿಷ್ಕಾರಣವಾಗಿ ಇಷ್ಟು ಜನರನ್ನು ಕೊಂದದ್ದಕ್ಕಾಗಿ ಮುಂದಿನ ಜನ್ಮದಲ್ಲಿ ನನಗೆ ನರಕಪ್ರಾಪ್ತಿಯು ತಪ್ಪಿದ್ದಲ್ಲ; ಎಂದು ಚಿಂತಿಸುತ್ತ ಊರಲ್ಲಿ ಹೋಗಿ ಸಮಾಚಾರವನ್ನಾದರೂ ಕೇಳೋಣವೆಂದು ನಿರ್ಧರಿಸಿ ಊರಲ್ಲಿಯ ಅನೇಕ ಜನರನ್ನು ಕಂಡು ನೀವು ನಿನ್ನೆ ರಾತ್ರಿ ಹರಿಕಥಾ ಶ್ರವಣಕ್ಕಾಗಿ ಹೋಗಿದ್ದಿರಲ್ಲವೆ, ಕೀರ್ತನೆ ಹೇಗಾಯಿತು? ಜನರು ಬಹಳ ಕೂಡಿದ್ದರೆ? ಎಲ್ಲವೂ ಸುಖಕರವಾಗಿ ಕೊನೆಗೊಂಡಿತೇ? ಪ್ರಸಾದವನ್ನು ತಂದಿದ್ದರೆ ಅದರಲ್ಲಿ ನನಗೂ ಸ್ವಲ್ಪ ಕೊಡಿರಿ; ಎಂದು ಕೆಲವರು ನಿನ್ನೆ ಏಕಾಶಿಯ ಉಪವಾಸವಿದ್ದುದರಿಂದ ಪ್ರಸಾದವನ್ನು ಅಲ್ಲಿಯೇ ಸೇವಿಸಿದೆವೆಂದರು. ಅದಕ್ಕೆ ವೈಶ್ಯನು ಹಾಗಾದರೆ ಹೊಟ್ಟೆಯಲ್ಲಿ ಸಂಕಟವಾಗುತ್ತಿರಬಹುದು ತೀವ್ರ ಊಟಮಾಡಿರಿ ಎಂದನು. ಅದಕ್ಕವರು ನಮಗೆ ಉಪವಾಸ ಮಾಡುವ ರೂಢಿವುಂಟೆಂದು

ಹೇಳಿದರು. ಆ ವೈಶ್ಯನಿಗೆ ತಾನು ಅನುಮಾನಿಸಿ ನಿದರ್ಶನಗಳು ಕಂಡು ಬರಲಿಲ್ಲ. ಆದರೂ ಆತನಿಗೆ ಸಮಾಧಾನವಾಗಲಿಲ್ಲ. ಆದ್ದರಿಂದ ಅಲ್ಲಿಂದ ತೆರಳಿ ಸ್ಮಶಾನಕ್ಕೆ ಹೋಗಿ ನೋಡಲು ಅಲ್ಲಿಯೂ ಯಾವ ವ್ಯತ್ಯಾಸ ಕಂಡುಬರಲಿಲ್ಲ. ಆಗಾತನು ಪರಮಾನಂದಭರಿತನಾದನು. ಪಂಡರಿನಾಥನ ಆ ಅನರ್ಥವನ್ನು ಪರಿಹರಿಸಿದನೆಂದು ದೃಢವಾಗಿ ನಂಬಿ ಪ್ರಾರ್ಥಿಸುತ್ತಾ ಕೇಶವ ಸ್ವಾಮಿಯಲ್ಲಿಗೆ ತೆರಳಿದನು.

ಕೇಶವ ಸ್ವಾಮಿಯು ನಿತ್ಯದಂತೆ ಸ್ನಾನಮಾಡಿ ಪೂಜೆ ಮಾಡುವದಕ್ಕಾಗಿ, ತಾನು ಆರಾಧಿಸುತ್ತಿದ್ದ ಪಂಚಲೋಹದ ಲಕ್ಷ್ಮೀನಾರಾಯಣ ಮೂರ್ತಿಯಲ್ಲಿಗೆ ಬಂದು ನೋಡಲು, ಮೂರ್ತಿಯು ಕಪ್ಪಾಗಿ ನಿಸ್ತೇಜವಾಗಿರುವದನ್ನು ಕಂಡು ಚಿಂತೆಗೊಳಗಾದನು. ಯಾವ ಕಾರಣದಿಂದ ಹೀಗಾಯಿತೆಂಬುದು ಕೂಡ ಕೇಶವಸ್ವಾಮಿಗೆ ತಿಳಿಯದಾಯಿತು. ಆಗಾ ಸ್ವಾಮಿಯು ಬಹು ವ್ಯಾಕುಲಗೊಂಡನು. ಈ ಸುದ್ದಿಯು ಊರಲ್ಲಿ ಹರಡಿ ಅನೇಕರು ಬಂದು ನೋಡಿಕೊಂಡು ಹೋಗುತ್ತಿದ್ದರು. ಆ ವೇಳೆಗೆ ಆ ವೈಶ್ಯನು ಅಲ್ಲಿ ಬಂದು ಸ್ವಾಮೀ! ನಿನ್ನೆ ರಾತ್ರಿ ಕತ್ತಲೆಯಲ್ಲಿ ಸುಂಠಿಯೆಂದು ವತ್ಸನಾಭವನ್ನು ನಿಮ್ಮ ಶಿಷ್ಯನಿಗೆ ಕೊಟ್ಟೆನು, ಅದರ ವಿಷಯವನ್ನು ತಿಳಿದ ಆ ಪರಮಾತ್ಮನು, ಯಾವ ಬಗೆಯ ಅನರ್ಥವೂ ಜರಗದಂತೆ ಎಲ್ಲರನ್ನೂ ಕಾಪಾಡಿದನು. ಆದರೂ ನಾನು ಮಾಡಿದ ಅಪರಾಧಕ್ಕಾಗಿ ತಕ್ಕ ಶಿಕ್ಷೆಯನ್ನು ವಿಧಿಸಬೇಕೆಂದು ಕೇಳಿಕೊಂಡನು.

ಆಗ ಕೇಶವಸ್ವಾಮಿಗೆ ಎಲ್ಲ ವಿಷಯಗಳು ತಿಳಿದು ಆನಂದಾಶ್ರುಗಳನ್ನು ಸುರಿಸುತ್ತ ಪಾಂಡುರಂಗನನ್ನು ನಾನಾ ಬಗೆಯಾಗಿ ಕೊಂಡಾಡುತ್ತ ದೀನದಯಾಳುವೇ, ಇಂದೊದಗಿದ ಆಪತ್ತನ್ನೂ ಅಪಕೀರ್ತಿಯನ್ನೂ ತಪ್ಪಿಸಿ ಎಲ್ಲರನ್ನೂ ಕಾಪಾಡಿದಿ. ಎಲೈ ಆಪದ್ಬಂಧುವೇ! ನಿನ್ನನ್ನು ಎಷ್ಟೆಂದು ಕೊಂಡಾಡಲಿ ನಿನ್ನ ಮಹಿಮೆಯು ಅಪಾರವಾದುದು. ಎಂದು ಪ್ರಾರ್ಥಿಸಿ, ಹೇ....ಪರಬ್ರಹ್ಮ ಪರಮಾತ್ಮನೇ ಮೊದಲಿನಂತೆ ತೇಜಃಪುಂಜನಾಗಿ ಶೋಭಿಸು ಎಂದು ಬೇಡಿಕೊಳ್ಳಲು, ಶ್ರೀ ರುಕ್ಮಿಣಿವಲ್ಲಭನು ಸಂತೋಷಪಟ್ಟು, ಮೊದಲಿನಂತೆ ತೇಜಃಪುಂಜ ಮೂರ್ತಿಯಾಗಿ ಕಂಗೊಳಿಸಿದನು ಈ ಆಶ್ಚರ್ಯವನ್ನು ಕಂಡು ಜನರು ಕೇಶವಸ್ವಾಮಿಯ ಭಕ್ತಿಯನ್ನು ಕೊಂಡಾಡಿದರು.

---

# ೧೬. ಕಾನ್ಹೋಪಾತ್ರಾ

ಪಂಢರಪುರದ ದಕ್ಷಿಣ ದಿಶೆಯಲ್ಲಿರುವ ಮಂಗಳವಟವೆಂಬ ಗ್ರಾಮದಲ್ಲಿ ಕಾನ್ಹೋಪಾತ್ರಾ ಎಂಬ ಪುಣ್ಯಾತ್ಮಳಾಗಿ ಹೋದಳು. ಈಕೆಯು ಶ್ಯಾಮಾ ಎಂಬ ವೇಶ್ಯಾ ಸ್ತ್ರೀ ಗರ್ಭದಲ್ಲಿ ಜನ್ಮವೆತ್ತಿದಳು. ಶ್ಯಾಮಳ ವಂಶಾನುವೃತ್ತಿಯಾದ ವೇಶ್ಯಾತನದಿಂದ ಜೀವನ ಸಾಗಿತ್ತು; ತಕ್ಕಷ್ಟು ಧನಸಂಪಾದನೆಯನ್ನೂ ಮಾಡಿದ್ದಳು. ಇಂತಿರಲು ಈಕೆಯು ತರುಣಿಯೂ ಸುಂದರಳೂ, ಗಾಯನಕಲಾ ವಿಶಾರದಳೂ ಆಗಿದ್ದ ತನ್ನ ಮಗಳನ್ನು ವೇಶ್ಯಾವೃತ್ತಿಗೆ ಸಹಾಯಕವಾದ ಹಾಡುಗಾರಿಕೆ, ಕುಣಿತ ಮೊದಲಾದ ವೃತ್ತಿಗಳನ್ನವಲಂಬಿಸುವಂತೆ ಪ್ರೋತ್ಸಾಹಿಸುತ್ತಿದ್ದಳು. ಆದರೆ ಕಾನ್ಹೋಪಾತ್ರಾ ಆದಕ್ಕೊಡಂಬಡದೆ ದೇವಭಕ್ತಳಾಗಿದ್ದುಕೊಂಡು ಲಗ್ನವಾಗಿ ಪತಿಯ ಪಾದಸೇವೆಯಿಂದ ಪವಿತ್ರ ಜೀವನ ಸಾಗಿಸಬೇಕೆಂದು ಇಚ್ಛಿಸುತ್ತಿದ್ದಳು. ತನ್ನ ಇಚ್ಛೆ ಪೂರೈಸೆಂದು ಪಂಢರೀನಾಥನ ಮೊರೆಹೊಕ್ಕು ಆತನನ್ನು ಭಯಭಕ್ತಿಯಿಂದ ಭಜಿಸುತ್ತ ಪೂಜೆ ಮಾಡಿ, ಆತನ ಸೇವೆಯಲ್ಲಿ ನಿರತಳಾಗಿದ್ದಳು. ಇಂತಿರಲು ಒಂದು ದಿನ ಆ ಊರಿನ ವಿಠ್ಠಲ ಮಂದಿರದಲ್ಲಿ ಕಾನ್ಹೋಪಾತ್ರಳ ಹಾಡುಗಾರಿಕೆಯನ್ನೇರ್ಪಡಿಸಬೇಕೆಂದೂ, ಆಕೆಯ ಮುಖದಿಂದ ಶ್ರೀ ಪಾಂಡುರಂಗನ ನಾಮಾಮೃತದ ಸವಿಯುಣ್ಣಬೇಕೆಂದೂ ಆ ಊರಿನ ಭಕ್ತಜನರೊಂದುಗೂಡಿ ನಿಶ್ಚಯಿಸಿದರು; ಅದರಂತೆ ಊರ ಧರ್ಮಾಧಿಕಾರಿ ಮೊದಲಾದ ಸದ್ಭಕ್ತರು ಕೂಡಿಕೊಂಡು ಅಕೆಯ ಮನೆಗೆ ತೆರಳಿದರು. ಅಲ್ಲಿ ಕಾನ್ಹೋಪಾತ್ರೆಯ ತಾಯಿಯಾಗಿದ್ದ ಶ್ಯಾಮೆಯು ಅವರನ್ನು ಆದರದಿಂದ ಕರೆದು ಸತ್ಕರಿಸಿ ಕುಳ್ಳಿರಿಸಿದಳು. ಆಗವರು ಸಮಾಚಾರವನ್ನು ತಿಳಿಸಲು ಆಕೆಯು ನನ್ನದೇನೂ ಅಡ್ಡಿಯಿಲ್ಲವೆಂತಲೂ, ಆದರೆ ಆಕೆಯ ಒಪ್ಪಿಗೆಯಿದ್ದರೆ ಮಾತ್ರ ನಡೆಯಬಹುದೆಂದೂ ಹೇಳಿದಳು. ಆಗ ಪುರಜನರು ಕಾನ್ಹೋಪಾತ್ರೆಯನ್ನೇ ಕರೆತರುವಂತೆ ಆಜ್ಞೆ ಮಾಡಲು ಶ್ಯಾಮೆಯು ಆಕೆಯನ್ನು ಕರೆತಂದಳು. ಆಕೆಗವರು ಸಮಾಚಾರವನ್ನು ತಿಳಿಸಲು ಕಾನ್ಹೋಪಾತ್ರೆಯು ಪುರಜನರನ್ನು ಕುರಿತು ಇಂತೆಂದಳು— ಸದ್ಗೃಹಸ್ಥರೇ, ಭಗವಂತನ ಸನ್ನಿಧಿಯನ್ನು ಬಿಟ್ಟು

ಇನ್ನೆಲ್ಲಿಯೂ ಹಾಡುವದಿಲ್ಲವೆಂತಲೂ, ಕುಣಿತ ಮಾಡುವದಿಲ್ಲೆಂದೂ ನನ್ನ ಪ್ರತಿಜ್ಞೆಯಿದೆ. ಇದು ನಿಮಗೆ ಗೊತ್ತಿಲ್ಲವೇ? ಎಂದು ಕೇಳಲು, ಅವರು ಹೌದು ನಮಗೆ ಗೊತ್ತಿದೆ. ಅಂತೆಯೇ ಪಾಂಡುರಂಗನ ಮಂದಿರದಲ್ಲಿಯೇ ನಿನ್ನ ಸಂಗೀತ ನಡೆಯಬೇಕೆಂದು ನಿಶ್ಚಯಿಸಿದ್ದೇವೆ. ಮತ್ತು ವಿಠ್ಠಲನ ಸಮ್ಮುಖದಲ್ಲಿ ನಿನಗೆ ಸ್ಥಳವನ್ನೇರ್ಪಡಿಸುವೆವು. ನೀನದಕ್ಕೆ ಸಂಕೋಚ ಪಡುವ ಕಾರಣವಿಲ್ಲ. ಕೇವಲ ಭಕ್ತಿಭಾವದಿಂದೊಡಗೂಡಿದ ನಿನ್ನ ಮೃದು ಮಧುರವಾಣಿಯಿಂದ ಆ ಭಗವಂತನ ಸಂಕೀರ್ತನ ಕೇಳಬೇಕೆಂಬುದೊಂದೇ ಹಿರಿಯಾಶೆಯೆಂದವರು ಹೇಳಲು ಅದಕ್ಕಾಕೆಯು ಒಪ್ಪಿಕೊಂಡಳು.

ಅನ್ಯ ಮನೋ ಇಂಗಿತವನ್ನರಿಯದೆ ಅವರ ಮೇಲೆ ಒತ್ತಾಯ ಮಾಡಿ ತಪ್ಪು ಕಾರ್ಯ ಸಾಧಿಸಿಕೊಳ್ಳಬೇಕೆಂಬ ದುರಾತ್ಮರು ಇಂದು ಬಹಳ ವಾಗಿದ್ದಾರೆ. ಇಂಥ ದುರಾತ್ಮನೂ, ಪರಸ್ತ್ರೀ ಲೋಲುಪನೂ ಆಗಿದ್ದವನು ಮಂಗಳವಟ್ಟೆಯ ಗ್ರಾಮಾಧಿಕಾರಿಯಾಗಿದ್ದನು. ಇವನು ದೇವರ ದರ್ಶನ ಕ್ಕಾಗಿ ವಿಠ್ಠಲನ ಮಂದಿರಕ್ಕೆ ಬಂದನು. ಅಂದು ದೇವಾಲಯದಲ್ಲಿ ಕಾನ್ಹೋ ಪಾತ್ರೆಯ ಸಂಗೀತ ಕಾರ್ಯಕ್ರಮವಿದೆಯೆಂಬ ಸಮಾಚಾರವನ್ನು ಪೂಜಾರಿ ಯಿಂದ ತಿಳಿದು ಚಕಿತನಾದನು. ಕಾನ್ಹೋಪಾತ್ರೆಯು ತನ್ನ ಮನೆಯ ಲ್ಲಿಯೂ ಕೂಡ ಬಂದವಿಟಪುರುಷರ ಮುಂದೆ ಹಾಡುತ್ತಿರಲಿಲ್ಲ ಕುಣಿಯುತ್ತಿ ರಲಿಲ್ಲ. ವೇಶ್ಯಾವೃತ್ತಿಯಂತೂ ಮೊದಲೇ ಇಲ್ಲ. ಇಂಥವಳು ಇಂದು ಇಲ್ಲಿ ಹಾಡುವಳೇ ! ಒಳ್ಳೇಯದು ನೆಟ್ಟಗಾಯಿತು ಎಂದು ಅನ್ನುತ್ತ ಮೀಸೆಯ ಮೇಲೆ ಕೈಹಾಕಿ ಈ ವರೆಗೆ ನನ್ನ ವಶವಾಗಳೆಂದು ನಂಬಿದ್ದೆನು. ಆದರಿನ್ನು ಆಕೆಯು ಅನಾಯಾಸವಾಗಿ ನನ್ನ ಸ್ವಾಧೀನವಾಗುವಳು ಎಂದು ಕಾಮಾತುರ ನಾಗಿ ಅನ್ನುತ್ತಾ ಅಲ್ಲಿಂದ ತೆರಳಿದನು.

ಅಂದು ರಾತ್ರಿ ಕಾನ್ಹೋಪಾತ್ರಳ ಸಂಗೀತ ನಡೆಯಿತು ಜನರು ಸ್ತಬ್ಧರಾಗಿ ಕೂತುಕೊಂಡಿದ್ದಾರೆ, ಒಂದೆಡೆ ವೇದಿಕೆಯ ಮೇಲೆ ಗ್ರಾಮಾ ಧಿಕಾರಿಯೂ ಕೂತುಕೊಂಡಿದ್ದಾನೆ. ವಿಠ್ಠಲನಾಮ ಸಂಕೀರ್ತನೆಯನ್ನು ಗಾಯನರೂಪದಲ್ಲಿ ಮೃದುವಾದ ತನ್ನ ಕಂಠದಿಂದ ಹಾಡುತ್ತಿದ್ದಳು. ಗ್ರಾಮಾಧಿಕಾರಿಯು ಆಕೆಯ ರೂಪ, ಲಾವಣ್ಯಕ್ಕೂ ಸಂಗೀತಕ್ಕೂ ಮೋಹ ಗೊಂಡು ಆಕೆಯು ತನ್ನಶಯ್ಯಾಗ್ರಹಕ್ಕೆ ಬರುವಂತೆ ಹೇಳಿ ಕಳುಹಿದನು

ಕಳುಹಿದನು. ಆದರೆ ಕಾನ್ಹೋಪಾತ್ರಳು ನಕಾರ ಮಾಡಲು ಆತನು ಕೋಪ ಗೊಂಡು ಅಧಿಕಾರ ದರ್ಪವನ್ನುಪಯೋಗಿಸಿ ಒತ್ತಾಯಪಡಿಸಿದನು. ಆಗ ಆಕೆಯು ತಾನು ವೇಶ್ಯಾವೃತ್ತಿಯನ್ನು ಕೈಕೊಳ್ಳುವದಿಲ್ಲವೆಂದೂ ಲಗ್ನವಾ ಗಲು ಇಚ್ಛಿಸುತ್ತೇನೆಂದೂ ಸ್ಪಷ್ಟವಾಗಿ ಹೇಳಿಕಳುಹಿದಳು. ಅಷ್ಟಕ್ಕೆ ಆಕೆಯ ಸಂಗೀತವು ನಿಂತಿತು. ಆಗ ಕಾನ್ಹೋಪಾತ್ರಳ ತಾಯಿಯು ಗ್ರಾಮಾಧಿ ಕಾರಿಯ ತೃಪ್ತಿಗಾಗಿ ಇನ್ನೊಬ್ಬಳಿಂದ ನರ್ತನ ಪ್ರಾರಂಭಿಸುವೆನು, ಕೋಪಕೊಳ್ಳಬಾರದು, ಎಂದು ಹೇಳಿಕಳುಹಿದಳು. ನರ್ತನ ಪ್ರಾರಂಭವಾ ಯಿತು; ಕಾನ್ಹೋಪಾತ್ರಳು ಅಲ್ಲಿಂದ ತೆರಳಿ ದಾಮಾಜಿಪಂಥನೆಂಬ ಧರ್ಮಾ ಧಿಕಾರಿಯ ಮನೆಗೆ ತೆರಳಿ, ಆತನನ್ನು ಕಂಡು ಪಂಥರೇ, ನೀವು ಕೇವಲ ವಿಠ್ಠಲನಾಮ ಸಂಕೀರ್ತನೆಯನ್ನು ಹಾಡಬೇಕೆಂದು ಹೇಳಿದ ಮೂಲಕ ನಾನು ಬಂದೆ, ಆದರೆ ಅದರ ಬದಲು ನರ್ತನ ಪ್ರಾರಂಭವಾಗಿದೆಯಲ್ಲದೆ ಗ್ರಾಮಾಧಿಕಾರಿಯ ವಕ್ರಗಣ್ಣಿನ ದೃಷ್ಟಿ ನನ್ನ ಮೇಲೆ ಬಿದ್ದಿದೆ. ಇನ್ನಾವ ಅನರ್ಥಗಳನ್ನು ಅನುಭವಿಸಬೇಕಾಗ.ವದೋ! ಏನೋ! ಎಂದು ನುಡಿಯಲು ದಾಮಾಜಿಪಂಥರು ಕೂಡಲೇ ಮಂದಿರಕ್ಕೆ ತೆರಳಿ, ಅಲ್ಲಿ ನಡೆದಿದ್ದ ನರ್ತನ ವನ್ನು ನಿಲ್ಲಿಸುವಂತೆ ಹೇಳಿದನು ಆಗ ಗ್ರಾಮಾಧಿಕಾರಿಯು ಕೋಪಗೊಂಡು ನರ್ತನ ಪ್ರಾರಂಭಿಸೆಂದು ಆಜ್ಞೆಮಾಡಿದನು. ಈ ಗ್ರಾಮಾಧಿಕಾರಿ ಮತ್ತು ಧರ್ಮಾಧಿಕಾರಿಯು ನರ್ತನ ಮಾಡು ಮತ್ತು ಬೇಡ ಎಂಬ ಆಜ್ಞೆಗಳು ಒಂದರಹಿಂದೊಂದು ಬರುತ್ತಿರಲು ಯಾವ ಆಜ್ಞೆಯನ್ನು ಪಾಲನ ಮಾಡ ಬೇಕೆಂಬುದೇ ತಿಳಿಯದೆ ನರ್ತಕಿಯು ಸುಮ್ಮನೆ ನಿಂತುಬಿಟ್ಟಳು. ಗ್ರಾಮಾ ಧಿಕಾರಿ, ಧರ್ಮಾಧಿಕಾರಿಗಳಲ್ಲಿ ಕೆಲನಿಮಿಷ ವಾಗ್ವಾದ ನಡೆದು ವಿಕೋ ಪಕ್ಕೆ ಹೋಗುವದಿತ್ತು; ಅಷ್ಟರಲ್ಲಿ ಜನರು ಕೂಡಾ ದೇವರ ಮಂದಿರದಲ್ಲಿ ನರ್ತನ ವಗೈರೆಗಳು ನಡೆಯಬಾರದೆಂದು ಹೇಳತೊಡಗಿದ್ದರಿಂದ ಗ್ರಾಮಾಧಿ ಕಾರಿಯು ಸುಮ್ಮನಾಗಿ ತೆರಳಿದನು. ಆದರೂ ಅಪಮಾನದ ಸೇಡು ತೀರಿಸಿ ಕೊಳ್ಳುವ ಹವಣಿಕೆಯಲ್ಲಿದ್ದನು.

ಮತ್ತೊಂದು ದಿನ ಧರ್ಮಾಧಿಕಾರಿ ಪಂಥರೂ, ಊರ ಜನರೂ ಕೂಡಿ ಕಾನ್ಹೋಪಾತ್ರಾಳ ಸಂಗೀತವನ್ನೇರ್ಪಡಿಸಬೇಕೆಂದು ನಿರ್ಧರಿಸಿ ಆಕೆಯ ಮನೆಗೆ ಹೋಗಿ ತಮ್ಮ ಅಭಿಪ್ರಾಯ ತಿಳಿಸಿಬಂದರು. ಈ ಸಂಗತಿಯನ್ನು

ಗ್ರಾಮಾಧಿಕಾರಿಯು ಕೇಳಿ ತಿಳಿದುಕೊಂಡು, ತಾನೂ ತನ್ನ ಮನೆಯಲ್ಲಿ ಕಾನ್ಹೋಪಾತ್ರಳ ಸಂಗೀತ ನರ್ತನಗಳನ್ನು ಏರ್ಪಡಿಸಬೇಕೆಂದು ನಿರ್ಧರಿಸಿ ಕಾನ್ಹೋಪಾತ್ರಳ ಮನೆಗೆ ಓರ್ವನನ್ನು ಕಳುಹಿಸಿ ಶ್ಯಾಮೆಯ ಕೈಯಲ್ಲಿ ಒಂದು ಸಾವಿರರೂಪಾಯಿಗಳನ್ನು ಕೊಟ್ಟು ಕಾನ್ಹೋಪಾತ್ರಳ ಸಂಗೀತ ನರ್ತನಗಳು ನಡೆಯಬೇಕೆಂದು ಹೇಳಿಬಂದನು. ಶ್ಯಾಮೆ ಕಾನ್ಹೋ ಪಾತ್ರಳಿಗೆ ತಿಳಿಸದೆ ಊರ ಜನರು ಕಾನ್ಹೋಪ್ರಾಳಿಗೆ ಬರಹೇಳಿದ ವೇಳೆ ಸಮೀಪಿಸುತ್ತಲೇ ಸಂಗೀತ ಕಚೇರಿಯ ಸಾಥಿ ಜನರನ್ನು ಎಲ್ಲಿಯೋ ಕಳುಹಿಸಿಕೊಟ್ಟುಬಿಟ್ಟಳು. ಕಾನ್ಹೋಪಾತ್ರಾಳು ವೇಳೆಯಾದರೂ ಸಾಥಿ ಜನರು ಬರದಿರುವದನ್ನು ಕಂಡು ಕಳವಳಗೊಂಡಳು ಕೊಟ್ಟ ವಚವನ್ನು ತಪ್ಪಬೇಕಾಯಿತಲ್ಲವೇ ? ಶ್ರೀ ವಿಠ್ಠಲನ ಮಂದಿರದಲ್ಲಿ ಆತನ ಸಂಕೀರ್ತನ ಸೇವೆಯೂ ತಪ್ಪಿತಲ್ಲಾ ಎಂದು ಚಿಂತಿಸುತ್ತ ಶ್ರೀ ವಿಠ್ಠಲಮೂರ್ತಿಯ ಸನ್ನಿಧಿಗೆ ತೆರಳಿ ಆತನನ್ನು ಪ್ರಾರ್ಥಿಸುತ್ತಲಿದ್ದಳು. ಅಷ್ಟೊತ್ತಿಗೆ ಗ್ರಾಮಾಧಿ ಕಾರಿಯ ಸೇವಕನು ಬಂದು ಶ್ಯಾಮೆಗೆ ಮೊದಲೆ ತಿಳಿಸಿದಂತೆ ಬರಹೇಳಿ ದನು ಆಗ ಆಕೆಯು ಗ್ರಾಮಾಧಿಕಾರಿಗೆ ಇಲ್ಲಿಗೇನೇ ಬರಹೇಳೆಂದು ಹೇಳಿ ಕಳುಹಿಸಿದಳು. ಅದರಂತೆ ಆತನು ಬರಲು ಅವನನ್ನು ಕಾನ್ಹೋ ಪಾತ್ರಳು ತನ್ನ ಖೋಲಿಯಲ್ಲಿರುವಳು ಅಲ್ಲಿಗೆ ಹೋಗೆಂದು ಹೇಳಿದಳು. ಅದರಂತೆ ಅವನು ಕಾನ್ಹೋಪಾತ್ರಳು ಇದ್ದ ಖೋಲಿಯೊಳಗೆ ಹೊಕ್ಕು ಕದಹಾಕಿ ಕೊಂಡನು ಆಗ ವಿಠ್ಠಲನ ನಾಮಸ್ಮರಣೆಯಲ್ಲಿ ಲೀನಳಾಗಿದ್ದಳು. ಕದದ ಸದ್ದು ಕೇಳಿ ಹೊರಳಿ ನೋಡಲು ಗ್ರಾಮಾಧಿಕಾರಿಯು ಕಾಮಾತುರನಾಗಿ ತನ್ನ ಹತ್ತರ ಬರುವದನ್ನು ಕಂಡು ಗಾಬರಿಯಾದಳು. ತಾಯಿಯೇನೋಸತನ ದಿಂದ ಗ್ರಾಮಾಧಿಕಾರಿಗೆ ನನ್ನ ಶರೀರವನ್ನು ಮಾರಿರುವಳೆಂದ ಮೇಲೆ ಇನ್ನಾರ ಮರೆಹೋಗುವದು ! ಹೇ ಭಕ್ತರಕ್ಷಕಾ ವಿಠ್ಠಲಾ, ನನ್ನನ್ನು ರಕ್ಷಿಸು ಎಂದು ಒಂದೆಸರಿದಂತೆಲ್ಲ ಆತನು ಮುಂದೆಮುಂದೆ ಬರುತ್ತಿದ್ದನು. ಹಿಂದೆ ಸರಿಯುತ್ತಲಿದ್ದ ಆಕೆಯು ದೀಪದ ಸಮೀಪಕ್ಕೆ ಬರಲು ಭಗವಂತನ ಕೃಪೆ ಯಿಂದ ಒಂದು ವಿಚಾರ ಹೊಳೆಯಿತು. ಅದರಂತೆ ಆಕೆಯು ತಟ್ಟನೆ ಆದೀಪ ವನ್ನಾರಿಸಿ ಮತ್ತೊಂದು ಬಾಗಿಲದಿಂದ ತೆರಳಿಹೋದಳು. ಆಗ ನಿರಾಶೆ ಗೊಂಡ ಗ್ರಾಮಾಧಿಕಾರಿಯು ಶ್ಯಾಮೆಯಲ್ಲಿಗೆ ಬಂದು ಆ ಸಂಗತಿಯನ್ನು

ತಿಳಿಸಿ ಹೀಗೆ ನೀನು ನನಗೆ ಅಪಮಾನ ಮಾಡಿದ್ದರಿಂದ ಇದರ ಸೇಡು ತೀರಿಸಿ ಕೊಳ್ಳದೇ ಬಿಡುವದಿಲ್ಲವೆಂದು ಹೇಳಿ ಹೊರಟುಹೋದನು.

ಅತ್ತ ವಿಠ್ಠಲ ಮಂದಿರದಲ್ಲಿ ಪುರ ಜನರೂ ಧರ್ಮಾಧಿಕಾರಿಗಳೂ ಕಾನ್ಹೋಪಾತ್ರಳ ಸಂಕೀರ್ತನೆಯನ್ನು ಕೇಳಲು ಬಂದು ನೆರೆದಿದ್ದರು. ಆದರೆ ಒರಹೇಳಿದ ವೇಳೆ ಮೀರಿತಾದರೂ ಕಾನ್ಹೋಪಾತ್ರಾ ಬರದಿರುವದ ರಿಂದ ಕೂತೂಕೂತು ಬೇಸರಗೊಂಡ ಜನರು ಒಬ್ಬೊಬ್ಬರಾಗಿ ಹೊರಟು ಹೋಗತೊಡಗಿದರು. ಧರ್ಮಾಧಿಕಾರಿ ಮೊದಲಾದವರು ಆಕೆಯು ಇನ್ನೂ ಯಾಕೆ ಬರಲಿಲ್ಲ? ಬರುವೆನೆಂದು ವಚನಕೊಟ್ಟು ಎಂದೂ ತಪ್ಪಿಸತಕ್ಕವಳಲ್ಲ. ಏನಾದರೂ ವಿಶೇಷ ಘಟನೆಸಂಭವಿಸಿರಲಿಕ್ಕೇಬೇಕು ಎಂದು ವಿಚಾರ ಮಾಡು ತ್ತಿದ್ದರು. ಅಷ್ಟರಲ್ಲಿ ಕಾನ್ಹೋಪಾತ್ರಾಳು ಓಡುತ್ತ ಬಂದು ಬಾಬಾ ನನ್ನನ್ನು ರಕ್ಷಿಸು ಎಂದು ಬಂದು ಒಬ್ಬ ಪಾಂಡುರಂಗನ ನಿಜಭಕ್ತನಾದ ಸಾಧುವಿನ ಮೊರೆಹೊಕ್ಕಳು. ಆಗ ಧರ್ಮಾಧಿಕಾರಿಯೂ ಅಲ್ಲಿಯೇ ಇದ್ದನು. ಗ್ರಾಮಾಧಿ ಕಾರಿಯು ಶ್ಯಾಮೆಯ ಮನೆಯಿಂದ ಹೊರಬಿದ್ದು ಬರುತ್ತಿದ್ದಾಗ ದಾರಿಯಲ್ಲಿ ಕಾನ್ಹೋಪಾತ್ರಾಳನ್ನು ಕಂಡು ಆಕೆಯನ್ನು ಹಿಡಿಯಬೇಕೆಂದು ಇಚ್ಛಿಸಿ, ಬೆನ್ನು ಹತ್ತಿದವನು ಕಾನ್ಹೋಪಾತ್ರಳು ಮೊರೆಹೊಕ್ಕಿದ್ದ ಸಾಧುವಿನಲ್ಲಿಗೆ ಬಂದು, ಆಕೆಯನ್ನು ಕುರಿತು ನೀನೆಲ್ಲಿ ಹೋಗುವಿ ನಿನ್ನ ತಾಯಿಯು ವಾಗ್ದಾನ ಮಾಡಿ ರೊಕ್ಕ ತಕ್ಕೊಂಡಿದ್ದಾಳೆ ಎಂದೆನ್ನುತ್ತ ಆಕೆಯನ್ನು ಹಿಡಿಯ ಹೋದನು. ಆಗ ಸಾಧುಪುರುಷನು ತಡೆ ಅದೇನೇ ಇರಲಿ. ಈಗ ನನ್ನ ಮರೆ ಹೊಕ್ಕಿರುವಳೆಂದ ಮೇಲೆ ನಾನು ಆಕೆಯನ್ನು ಬಿಟ್ಟುಕೊಡಲಾರೆ. ನೀನು ರೊಕ್ಕ ಕೊಟ್ಟದ್ದರೆ ಯಾರ ಕೈಯಲ್ಲಿ ಕೊಟ್ಟಿರುವಿಯೋ ಅವರಿಂದ ತೆಗೆ ದುಕೋ ಎಂದು ಹೇಳಿದರು. ಆ ಮಾತನ್ನು ಧರ್ಮಾಧಿಕಾರಿಯು ಎತ್ತಿಹಿಡಿ ಯಲು ಉಪಾಯಗಾಣದೆ ಆತನು ಹಿಂತಿರುಗಿ ಹೋದನು. ಆ ಸಾಧುಪುರು ಷನು ಕಾನ್ಹೋಪಾತ್ರಳನ್ನು ತನ್ನ ಮನೆಗೆ ಕರೆದೊಯ್ದು ಆಕೆಗೆ ಆಶ್ರಯ ಕೊಟ್ಟು ತನ್ನಲ್ಲಿಯೇ ಇಟ್ಟುಕೊಂಡನು. ಇದು ಗ್ರಾಮಾಧಿಕಾರಿಗೆ ಸರಿ ಬರ ಲಿಲ್ಲವಾದ್ದರಿಂದ ಆತನೊಂದು ದಿನ ಆ ಸಾಧುವಿನ ಮನೆಗೆ ಕೊಳ್ಳಿ ಇಡಿಸಿ ದನು. ಆಗ ಆ ಸಾಧುಪುರುಷನೂ ಕಾನ್ಹೋಪಾತ್ರಳೂ ಮಲಗಿ ನಿದ್ರಾವ ಶರಾಗಿದ್ದರು. ಬೆಂಕಿಯು ಸುತ್ತಲೂ ಹಬ್ಬಿ ಝಳವು ಕಾನ್ಹೋಪಾತ್ರಳಿಗೆ

ಬಡಿಯಲು ಆಗಾಕೆ ಎಚ್ಚತ್ತು ಭಯಗೊಂಡಳು. ಆ ಸಾಧುಪುರುಷ ನನ್ನೂ ಎಬ್ಬಿಸಲು ಇಬ್ಬರೂ ಕೂಡಿ ಬಾಗಿಲ ತೆಗೆಯ ಹೋಗಲು, ಬಾಗಿ ಲದ ಹೊರಚಿಲಹಾಕಿ ಭದ್ರ ಪಡಿಸಿದ್ದರಿಂದ ನಿರಾಶರಾಗಿ ಶ್ರೀ ಪಾಂಡುರಂಗ ವಿಠ್ಠಲನನ್ನು ಕುರಿತು ಹೇ ಭಕ್ತವತ್ಸಲಾ, ದಯಾನಿಧಿಯೇ, ಯಾವ ಅನ್ಯಾಯ ಮಾಡಿದ್ದೇವೆಂದು ನಮಗೆ ಈ ದುರ್ಗತಿಯನ್ನು ತಂದೊಡ್ಡಿದಿ ಎಂದು ಅನನ್ಯ ಭಕ್ತಿಯಿಂದ ಆತನ ಸ್ತೋತ್ರಮಾಡತೊಡಗಿದರು. ಇವರ ಮೊರೆಯನ್ನು ಕೇಳಿ ಭಕ್ತವತ್ಸಲನು ಓರ್ವ ಬಾಲಕನ ರೂಪದಿಂದ ಧರ್ಮಾಧಿ ಕಾರಿ ಮೊದಲಾದ ಊರ ಜನರನ್ನು ಎಬ್ಬಿಸಿ ಅವರಿಗೆ ಸಾಧುವಿನಮನೆಗೆ ಬೆಂಕಿ ಬಿದ್ದ ಸಮಾಚಾರವನ್ನು ತಿಳಿಸಲು ಎಲ್ಲರೂ ಒಟ್ಟುಗೂಡಿ ಆ ಸಾಧು ವಿನ ಮನೆಗೆ ಬಂದು ಬಾಗಿಲ ಮುರಿದು ಒಳಗಿದ್ದ ಕಾನ್ಹೋಪಾತ್ರಳನ್ನೂ ಸಾಧುಪುರುಷನನ್ನೂ ಮನೆಯಿಂದ ಹೊರ ತೆಗೆದು ಜೀವದಿಂದುಳಿಸಿದರು. ಇಂತು ಪರಮಾತ್ಮನು ಅವರನ್ನು ಜೀವದಿಂದ ಉಳಿಸಿದನು.

ಇಂತು ಕಾನ್ಹೋಪಾತ್ರಳು ಸಾಧುಪುರುಷನಲ್ಲಿರುತ್ತಿರಲು ಒಂದು ದಿನ ಆಕೆಯು ಪೂಜೆಗಾಗಿ ತೋಟದಲ್ಲಿಯ ಹೂವುಗಳನ್ನು ಎತ್ತುತ್ತಿದ್ದಳು. ಆ ಹೊತ್ತಿಗೆ ಗ್ರಾಮಾಧಿಕಾರಿಯು ಬಂದು ಆಕೆಯ ಎದುರು ನಿಂತು ಕೊಂಡನು. ಆಗಾಕೆಯು ಭಯಗೊಂಡು ಹಿಂದೆ ಸರಿದುನಿಲ್ಲಲು ಆಗಾತನು ನೀನು ಎಲ್ಲಿಯ ವರೆಗೆ ನನ್ನ ಕೈತಪ್ಪಿಯಿರಬಲ್ಲೆ ಸುಮ್ಮನೆ ನನ್ನ ವಶವಾದಿ ನೆಟ್ಟಗಾಯಿತು. ಇಲ್ಲವಾದರೆ ಒತ್ತಾಯದಿಂದಲಾದರೂ ನಿನ್ನನ್ನು ನನ್ನ ವಶಮಾಡಿಕೊಳ್ಳದೆ ಬಿಡಲಾರೆ, ವಿಚಾರಮಾಡು ಎಂದು ಹೇಳಿದನು ಅಷ್ಟ ರಲ್ಲಿ ಆ ಸಾಧುಪುರುಷನು ಕಾನ್ಹೋಪಾತ್ರಳನ್ನು ಕರೆಯಲು ಆಕೆಯು ಮನೆಯೊಳಗೆ ಹೋದಳು ಗ್ರಾಮಾಧಿಕಾರಿಯು ಆಡಿದ ಮಾತುಗಳು ಕಾನ್ಹೋಪಾತ್ರಳ ತಲೆಯಲ್ಲಿ ಒಂದೇ ಸವನೇ ತಿರುಗತೊಡಗಿದವು ಇನ್ನು ತನಗೆ ಉಳಿಗಾಲವಿಲ್ಲೆಂದು ತಿಳಿದಳು. ಜೀವದಿಂದಿದ್ದು ವ್ರತಭಂಗಮಾಡಿ ಕೊಳ್ಳುವದಕ್ಕಿಂತಲೂ ಪ್ರಾಣತ್ಯಾಗ ಮಾಡಿಕೊಳ್ಳುವದೇ ಸರಿ ಎಂದು ನಿರ್ಧರಿಸಿದಳು. ಕೂಡಲೇ ಅಲ್ಲಿಂದ ತೆರಳಿ ನದಿಯಕಡೆಗೆ ಹೊರಟಳು ಆ ಹೊತ್ತಿಗೆ ಧರ್ಮಾಧಿಕಾರಿಯಾಗಿದ್ದ ದಾಮಾಜಿಪಂಥನು ಸಾಧುಪುರುಷನ ಮನೆಗೆ ಬರುತ್ತಿದ್ದನು. ದಾರಿಯಲ್ಲಿ ನದಿಯಕಡೆಗೆ ವೇಗವಾಗಿ ಹೊರಟಿದ್ದ

ಕಾನ್ಹೋಪಾತ್ರಳನ್ನು ಕಂಡು ಆಕೆಯನ್ನು ಕೂಗಿದನು. ಅದು ಕೇಳಿ ಸಿತೋ ಇಲ್ಲವೋ, ಆಕೆ ಮಾತ್ರ ನಿಲ್ಲದೆ ಹೋರಟೇ ಇದ್ದಳು. ಇದನ್ನು ಕಂಡು ಪಂಥರಿಗೆ ಸಂಶಯ ಬಂದು ತೀವ್ರವಾಗಿ ಆಕೆ ಹೋದ ದಾರಿಯಿಂದ ಓಡತೊಡಗಿದನು. ಕಾನ್ಹೋಪಾತ್ರಳನ್ನು ಸಮೀಪಿಸುವದರೊಳಗಾಗಿ ನದಿಯೂ ಸಮೀಪಿಸಿತು; ಮುಂದೆ ಮುಂದೆ ಹೋಗುತ್ತಿದ್ದಾಕೆಯು ನದಿಯಲ್ಲಿ ಹಾರಿಬಿಟ್ಟಳು. ಪಂಥರು ಕೂಡಾ ತೀವ್ರ ಅಲ್ಲಿಗೆ ಬಂದು ತಾವೂ ನೀರಿನಲ್ಲಿ ಜಿಗಿದು ಆಕೆಯನ್ನು ಹೊರತಂದರು. ಕೆಲ ವೇಳೆಯ ನಂತರ ಆಕೆಯು ಸ್ಮೃತಿಗೊಂಡು ಮಗ್ಗುಲಲ್ಲಿ ಕುಳಿತಿದ್ದ ಪಂಥರನ್ನು ನೋಡಿ ನೀವು ನನ್ನನ್ನು ಜೀವಂತವೇಕೆ ಉಳಿಯಗೊಟ್ಟರಿ ಎಂದು ಒಂದೇ ಸವನೇ ದುಃಖಿಸತೊಡಗಿದಳು. ಆಗ ಪಂಥರು ಆಕೆಯನ್ನು ಸಮಾಧಾನ ಪಡಿಸುತ್ತ ನಡೆದ ಸಮಾಚಾರವೇನೆಂದು ಕೇಳಿದರು. ಆಗಾಕೆಯು ಗ್ರಾಮಾಧಿಕಾರಿಯು ನುಡಿದ ಮಾತುಗಳನ್ನೇ ಹೇಳಿ ದುಃಖಿಸುತ್ತ ನನಗೆ ಪತಿಯು ಇದ್ದಿದ್ದರೆ ಎಂದು ನುಡಿದು ದುಃಖಿಸತೊಡಗಿದಳು. ಪಂಥರು ಆಕೆಯ ಮನೋಇಂಗಿತವನ್ನರಿತು ಒಳ್ಳೇದು, ನಿನ್ನನ್ನು ನಾನು ಲಗ್ನಮಾಡಿಕೊಳ್ಳುವೆನು ಎಂದು ಹೇಳಿದನು. ಆಕೆಯು ಆಶ್ಚರ್ಯವನ್ನೂ, ಸಂತೋಷವನ್ನೂ ಏಕ ಕಾಲಕ್ಕೆ ಹೊಂದಿದವಳಾಗಿ ನೀವು ಧರ್ಮಾಧಿಕಾರಿಗಳು, ಎಂದು ನುಡಿದು ಸುಮ್ಮನಾದಳು. ಪಂಥರು ಏಕೆ ಕಾನ್ಹೋ ಸಂಶಯಗೊಂಡಿಯೇನು! ನಿನ್ನನ್ನೇ ಲಗ್ನವಾಗುವೆನೆಂದು ವಚನ ಕೊಡುವೆನು ತೆಗೆದುಕೋ, ಎಂದು ಹೇಳಿ ಆಕೆಗೆ ವಚನಕೊಟ್ಟನು. ಈ ಸಮಾಚಾರವು ಗ್ರಾಮಾಧಿಕಾರಿಗೆ ತಿಳಿಯಿತು. ಆತನು ಇದೇ ಸಮಯವೆಂದರಿತು ತನ್ನ ದುಷ್ಟಬುದ್ಧಿಯನ್ನು ಉಪಯೋಗಿಸಿ ಸೇಡು ತೀರಿಸಿಕೊಳ್ಳಬೇಕೆಂದು ಹವಣಿಸತೊಡಗಿದನು. ಧರ್ಮಾಧಿಕಾರಿಯು ಓರ್ವ ವೇಶ್ಯೆಯನ್ನು ಲಗ್ನವಾಗುದದು ಧರ್ಮಕ್ಕೆ ವಿರೋಧವಾದುದು. ಧರ್ಮಾಧಿಕಾರಿಯೇ ಹೀಗೆ ಅಧರ್ಮದಿಂದ ನಡೆದರೆ ಕೇಳುವವರಾರು ಇಲ್ಲವೇ? ಇಂಥ ಧರ್ಮವನ್ನು ತಡೆಯಲೇಬೇಕು; ಎಂದು ಜನರಿಗೆ ಹೇಳಿ ಅವರನ್ನು ಪ್ರಚೋದಿಸಿ ಪಂಥರ ವಿರುದ್ಧ ಸಂಗಡ ಕಟ್ಟಿದನು. ಮತ್ತು ಈ ಸಂಗತಿಯನ್ನು ಪಂಥರ ಕಕ್ಕಂದಿರಿಗೆ ತಿಳಿಸಿ ಈ ಲಗ್ನವನ್ನು ನೀವು ತಡೆಯದಿದ್ದರೆ ನಿಮ್ಮ ಮೇಲೆ ಬಹಿಷ್ಕಾರ ಹಾಕುವೆ

ವೆಂದು ಜನರ ಮೂಲಕ ಬೆದರಿಕೆ ಹಾಕಿದನು. ಪಂಥರ ಕಕ್ಕಂದಿರು ಹಾಗೇ ಆಗಲೆಂದು ಸಮ್ಮತಿಬಿಟ್ಟು ಮನೆಗೆ ಬಂದು ದಾಮಾಜಿಗೆ ಆ ಸಂಗತಿ ಯನ್ನು ತಿಳಿಸಲು, ಆತನು ಆಕೆಗೆ ವಚನಕೊಟ್ಟಿದ್ದೇನೆ. ಆದ್ದರಿಂದ ನಾನು ಆ ವಚನವನ್ನು ಎಂದೂ ಮುರಿಯಲಾರೆನೆಂದು ಘಟ್ಟಿಯಾಗಿ ಹೇಳಿದನು. ಆಗಾತನ ಕಕ್ಕನು ನೋಡಿ ಇನ್ನೂ ವಿಚಾರಮಾಡು, ಎಂದು ಹೇಳಿ ಅಲ್ಲಿಂದ ತೆರಳಿ ಕಾನ್ಹೋಪಾತ್ರಾಳಲ್ಲಿಗೆ ಬಂದು ಕಾನ್ಹೋ! ನೀನಿಂದು ನನಗೆ ಭಿಕ್ಷೆನೀಡು ಎಂದೆನಲು ಆಗಾಕೆಯು ಅಚ್ಚರಿಗೊಂಡು ಏನು ಪಂಥ ವರ್ಯರೇ ಹೀಗೇಕೆ ಮಾತನಾಡುವಿರಿ. ಹುಡುಗಾಟಿಕೆ ಮಾಡುವಿರೇನು ಒಬ್ಬ ಭಿಕ್ಷುಕನ ಮನೆಯಲ್ಲಿ ಆತನ ಭಿಕ್ಷುಕಳಾಗಿದ್ದವಳು ಏನು ಭಿಕ್ಷೆ ಕೊಡ ಬಲ್ಲಳು. ಎಂದುತ್ತರಿಸಿದಳು. ಹಾಗಲ್ಲ ತಾಯಿ! ನೀನು ಕೊಡುವ ಭಿಕ್ಷೆ ಸಣ್ಣದಲ್ಲ, ಮತ್ತು ಆ ಭಿಕ್ಷೆ ಅನ್ಯರಿಂದ ಸಿಗತಕ್ಕದ್ದೂ ಅಲ್ಲ. ನೀನು ಲಗ್ನ ವಾಗಬೇಕೆಂದಿದ್ದ ದಾಮಾಜಿಪಂಥನನ್ನು ಭಿಕ್ಷೆಕೊಡಲು, ಆತನು ನಿನ್ನನ್ನು ಲಗ್ನಮಾಡಿಕೊಳ್ಳುವೆನೆಂಬ ವಾರ್ತೆ ಊರಲ್ಲಿ ಹಬ್ಬಿ, ಊರ ಜನರು ಗ್ರಾಮಾಧಿಕಾರಿಯ ಮುಖಂಡತ್ವದಲ್ಲಿ ಒಂದುಗೂಡಿ, ಧರ್ಮಾಧಿಕಾರಿ ಯಾಗಿದ್ದ ದಾಮಾಜಿಪಂಥನು ನಿನ್ನನ್ನು ಲಗ್ನಮಾಡಿಕೊಂಡರೆ ನಮಗೆ ಬಹಿಷ್ಕಾರ ಹಾಕುತ್ತೇವೆಂದು ಹೇಳಿದ್ದಾರೆ. ಇದರಿಂದ ನಮ್ಮ ಮಾನ ಮರ್ಯಾದೆಗಳು ಮಾರಿಹೋಗುವದಲ್ಲದೆ ಒಂಟಿಗರಾಗಿ ಎಷ್ಟು ಕಷ್ಟನಷ್ಟ ಗಳನ್ನು ಅನುಭವಿಸಬೇಕಾಗುತ್ತದೆಂಬುದನ್ನು ಆಲೋಚಿಸು ಎಂದಾತನು ನುಡಿಯಲು ಕಾನ್ಹೋಪಾತ್ರಾಳಿಗೆ ಸಿಡಿಲುಬಡಿದಂತಾಯಿ. ಭಾವಿ ಲಗ್ನದ ಹೊಂಗನಸಿನಲ್ಲಿ ಆನಂದಿಸುತ್ತಿದ್ದವಳು. ಜರ್ರನೆ ಜರಿದು ನೆಲಕ್ಕೆ ಕೂತಳು. ಬಿಕ್ಕಿಬಿಕ್ಕಿ ಅಳತೊಡಗಿದಳು. ಏನು ಮಾತಾಡುವದಕ್ಕೂ ದಾರಿ ಕಾಣದೆ ಸುಮ್ಮನೇ ಅಳುತ್ತಲೇ ಇದ್ದಳು ಲಗ್ನವಾದರೆ ದಾಮಾಜಿಗೆ ದುಃಖ ಲಗ್ನವಾಗದಿದ್ದರೆ ತನ್ನ ಮಾನ ಉಳಿಯುವಂತಿಲ್ಲ ಇಂತು ಇಬ್ಬಗೆಯ ದುಃಖ ದೃಶ್ಯಗಳು ಕಣ್ಣಮುಂದೆ ಕಟ್ಟಿದಂತಾದವು. ಆಗ ಆಕೆಯು ತನ ಗಾಗಿ ದಾಮಾಜಿ ಪಂಥರಿಗೆ ದುಃಖವಾಗುವದು ಬೇಡ, ನನ್ನ ದುಃಖ ನನ ಗಿರಲಿ, ಅದನ್ನು ಅನ್ಯರಿಗೆ ಕೊಟ್ಟು ನಾನು ಸುಖವಾಗಿರುವದು ಬೇಡ ಎಂದು ಆಲೋಚಿಸಿ ದುಃಖಪೂರಿತ ಗದ್ಗದ ಕಂಠದಿಂದ ಪಂಥರನ್ನು ಕುರಿತು ಆಗಲಿ ಪಂಥರೆ, ನನ್ನ ದುಃಖ ನನಗಿರಲಿ, ಅವರನ್ನು ನಾನು ಲಗ್ನಮಾಡಿ

ಕೊಳ್ಳುವದಿಲ್ಲವೆಂದು ವಚನಕೊಟ್ಟಳು. ಆಗ ಪಂಥನು ಆನಂದಾಶ್ರುಗಳನ್ನು ಸುರಿಸುತ್ತ ಮಗು ನೀನೇ ಮಹಾತ್ಮಳು, ನಿನ್ನ ತ್ಯಾಗವು ಅಪಾರವಾದುದು, ನಿನಗೆ ಪಾಂಡುರಂಗನು ಶಾಂತಿ ಸುಖಗಳನ್ನೀಯಲಿ ಎಂದು ಆಶೀರ್ವದಿಸಿ ಅಲ್ಲಿಂದ ತೆರಳಿದನು. ಆವರೆ ದಾಮಾಜಿಪಂಥರು ಬಂದರೆ ಅವರಿಗೇನು ಹೇಳ ಬೇಕೆಂಬ ವಿಚಾರವೇದನೆಯು ಕಾನ್ಹೋಪಾತ್ರಳನ್ನು ಪೀಡಿಸತೊಡಗಿತು. ನಾನು ನಿನ್ನನ್ನು ಲಗ್ನವಾಗಲಾರೆನೆಂದು ಪಂಥರಿಗೆ ತಿಳಿಸಿದರೆ ಅವರ ಮನಸ್ಸು ನೊಂದುಕೊಳ್ಳುದು; ಹಾಗಾದರೆ ಉಪಾಯವೇನೆಂದು ವಿಚಾರಿಸಿ ಪಾಂಡು ರಂಗನನ್ನು ಧ್ಯಾನಿಸುತ್ತಿರಲು ತಟ್ಟನೆ ಒಂದು ವಿಚಾರ ಹೊಳೆಯಿತು. ಈ ಕೂಡಲೇ ನನ್ನ ತಾಯಿಯ ಮನೆಗೆ ಹೊರಟುಹೋಗಬೇಕು; ದಾಮಾಜಿ ಪಂಥನು ಬಂದು ನಾನಿಲ್ಲದಿರುವದನ್ನು ತಿಳಿದು ಒಂದೆರಡು ದಿನಗಳ ಪರ್ಯಂತ ನನ್ನ ಚಿಂತನೆ ಮಾಡುವನಾದರೂ ಕ್ರಮೇಣ ಮರೆತುಬಿಡುವನು. ಇನ್ನು ನಾನಿಲ್ಲಿ ಇಲ್ಲದಿರುವದರಿಂದ ಹುಡುಕುತ್ತ ನನ್ನ ತಾಯಿಯ ಮನೆಗೆ ಬಂದರೂ ಆತನ ಸಮ್ಮುಖದಲ್ಲಿ ಮತ್ತೋರ್ವ ವಿಷಪುರುಷನ ಮುಂದೆ ಕುಳಿತು ಹಾಡಿದ ರಾಯಿತು; ಆಗ ಆತನು ನನ್ನ ಮೇಲಿನ ವ್ಯಾಮೋಹವನ್ನು ತೊರೆದು ಮತ್ತೋರ್ವಳನ್ನು ಲಗ್ನಮಾಡಿಕೊಳ್ಳುವನು. ಆಗ ನಾನು ಪುನಃ ಈ ದಾಸವರ್ಯನ ಸೇವೆಮಾಡಿ ಆತನಿಂದ ಪಾರಮಾರ್ಥ ವಿಷಯವನ್ನರಿತು ಪಾಂಡುರಂಗನ ನಿತ್ಯ ಸೇವೆಯಲ್ಲಿ ಲೀನಳಾಗಬೇಕು; ಎಂದು ವಿಚಾರಿಸಿ ನಿರ್ಧರಿಸಿದಳು. ಅಂದೇ ರಾತ್ರಿ ಸಾಧುವರ್ಯನಿಗೂ ಕೂಡ ತಿಳಿಸದೆ ಆತನು ನಿದ್ರಿಸುತ್ತಿದ್ದ ವೇಳೆಯಲ್ಲಿ ಅಲ್ಲಿಂದ ತೆರಳಿದಳು.

ದಾಮಾಜಿಪಂಥನು ಸಾಧುವರ್ಯನ ಮನೆಗೆ ಬಂದು ಆತನನ್ನೆಬ್ಬಿಸಿ ಕಾನ್ಹೋಪಾತ್ರಾ ಎಲ್ಲಿರುವಳೆಂದು ವಿಚಾರಿಸಿದನು. ಆಗ ಸಾಧುಪುರುಷನು ಎದ್ದು ಆಕೆ ಮಲಗುತ್ತಿದ್ದ ಹಾಸಿಗೆಯತ್ತ ನೋಡಿದನು; ಆದರೆ ಆಕೆ ಇರದಿರುವದನ್ನು ಕಂಡು ಗಾಬರಿಯಿಂದ ಅತ್ತಿತ್ತ ಹುಡುಕತೊಡಗಿದನು. ಪಂಥರು ಹುಡುಕುತ್ತ ಕಾನ್ಹೋಪಾತ್ರಳ ತಾಯಿಯ ಮನೆಯತ್ತ ನಡೆ ದರು. ಆಗ ಕಾನ್ಹೋಪಾತ್ರಳು ಮಹಡಿಯ ಮೇಲಿದ್ದು ಕಿಡಿಕೆಯಿಂದ ಹೊರನೋಡುತ್ತಾ ನಿಂತುಕೊಂಡಿದ್ದಳು. ತಟ್ಟನೆ ಆಕೆಯ ದೃಷ್ಟಿಯು ತನ್ನ ಮನೆಯತ್ತ ಬರುತ್ತಿದ್ದ ಪಂಥರನ್ನು ಕಂಡಿತು. ಕೂಡಲೇ ಕೆಳಗಿಳಿದು

ಮನೆಗೆ ಬಂದಿದ್ದ ವಿಟಪುರುಷನ ಎದುರು ಹಾಡತೊಡಗಿದಳು. ಸಂಥರು ಭರ ಭರನೆ ಅವರ ಮನೆಗೆ ಬಂದರು. ಹೊಸ್ತಿಲದೊಳಗೆ ಕಾಲಿಡುತ್ತಲೇ ಪುರುಷರ ಎದುರು ಕೂತು ಹಾಡುತ್ತಿರುವ ಕಾನ್ಹೋಪಾತ್ರಳನ್ನು ಕಂಡನು. ಆಗಾತ ನಿಗೆ ದಿಗ್ಭ್ರಮೆಯಾಯಿತು. ಆಗ ತನ್ನ ತಾತನು ವೇಶ್ಯೆಯಾದವಳನ್ನು ಲಗ್ನ ಮಾಡಿಕೊಳ್ಳಬೇಡವೆಂದು ಹೇಳಿದ ಮಾತು ನೆನಪಾಯಿತು; ಕೂಡಲೇ ಅಲ್ಲಿಂದ ತೆರಳಿ ತನ್ನ ಕಕ್ಕನಲ್ಲಿಗೆ ಬಂದು ಆತನನ್ನು ಕಂಡು ನೀನು ಅಂದು ಆಡಿದ ಮಾತುಗಳನ್ನು ಕೇಳದಿದ್ದುದು ಮೂರ್ಖತನವಾಯಿತು. ಈಗ ನನಗೆ ಕೂಡಲೇ ನಿನ್ನ ಮನಸ್ಸಿಗೆ ಬಂದವಳೊಡನೆ ಲಗ್ನಮಾಡು ಎಂದೂ ಅರಿಕೆಮಾಡಿ ದನು. ಆಗಾತನ ತಾತನು ಸಂತೋಷಗೊಂಡು ಮೊದಲೇ ನಿಶ್ಚಯಿಸಿದ ಕನ್ಯೆ ಯೊಡನೆ ಒಂದು ಶುಭಮುಹೂರ್ತದಲ್ಲಿ ಲಗ್ನವನ್ನು ಮಂಗಳವಾದ್ಯಗಳ ಮಧ್ಯಮಾಡಿ ಮುಗಿಸಿದನು.

ಅತ್ತ ಹಾಡುತ್ತಿದ್ದ ಕಾನ್ಹೋಪಾತ್ರಳು ಸಂಥರು ಮರಳಿ ಹೋದು ದನ್ನು ನೋಡಿ, ಕೂಡಲೇ ಉಕ್ಕಿಬರುತ್ತಿದ್ದ ದುಃಖವನ್ನು ತಡೆಯಲಾರದೆ ಮೂರ್ಛೆಗೊಂಡು ನೆಲಕ್ಕುರುಳಿದಳು. ಆಗ ಶ್ಯಾಮೆಯು ಆಕೆಯನ್ನೆತ್ತಿ ಮಂಚದ ಮೇಲೆ ಹಾಕಿ ಉಪಚರಿಸತೊಡಗಿದಳು. ಇಂತು ಒಂದೆರಡು ದಿನ ಗಳಲ್ಲಿಯೇ ಉಪಚಾರ ಹೊಂದಿ, ದುಃಖದ ಉದ್ವೇಗವು ಸ್ವಲ್ಪ ಕಡಿಮೆ ಯಾಗುತ್ತಲೇ ಮೊದಲೇ ಯೋಚಿಸಿದಂತೆ ಸಾಧುಪುರುಷನಲ್ಲಿಗೆ ಬಂದು ನಡೆದ ಎಲ್ಲ ನಿಜಸಂಗತಿಯನ್ನು ಮರೆಮಾಡದೆ ಆತನಿಗೆ ಹೇಳಿದಳು. ಆಗಾ ಸಾಧುಪುರುಷನು ಆನಂದದಿಂದ ಮೈದಡವಿ, ಮಗು! ನೀನು ಮಾಡಿದ ಮಹತ್ಕಾರ್ಯದಿಂದ ಸಂತಸಗೊಂಡ ಪಾಂಡುರಂಗನು ನಿನ್ನನ್ನೆಂದೂ ಮರೆಯನು. ಇನ್ನು ನೀನು ಆತನ ಸೇವೆಯಲ್ಲಿಯೇ ನಿತ್ಯಾನಂದವನ್ನು ಪಡೆಯಬಲ್ಲಿ. ಆತನ ಮಹಿಮೆಯನ್ನೂ, ಮಂತ್ರೋಪದೇಶವನ್ನೂ ಹೇಳು ವೆನು ಕೇಳು ಎಂದು ಆಕೆಗೆ ಉಪದೇಶವನ್ನು ಮಾಡತೊಡಗಿದನು. ಇಂತು ನಿತ್ಯವೂ ಸಾಧುಪುರುಷನಿಂದ ಪಾಂಡುರಂಗನ ಮಹಿಮೆಯನ್ನು ಅರಿತು, ಅದನ್ನೇ ಸಂಗೀತರೂಪದಲ್ಲಿ ತನ್ನ ಕರ್ಣಮಧುರ ಕಂಠದಿಂದ ಹಾಡಿ ಜನರಿಗೆ ಆ ಭಗವಂತನ ಮಹಿಮೆಯನ್ನು ಪ್ರಸಾರ ಮಾಡುತ್ತಲಿದ್ದಳು.

ಇಂತಿರಲು ಈಕೆಯ ಕೀರ್ತಿಯು ದಶದಿಕ್ಕುಗಳನ್ನೂ ಆವರಿಸಿತು. ಭಗವದ್ಭಕ್ತಳಾದ ಕಾನ್ಹೋಪಾತ್ರಳ ಸಂಗೀತದ ಪ್ರತಿಭೆಯು ಅಂದಿನ

ಮೊಗಲ್ ಬಾದಶಹನಿಗೂ ಮುಟ್ಟಿತು. ಆಗಾತನು ಇಂಥ ಉತ್ತಮಸಂಗೀತಗಾರಳ ಸಂಗೀತವನ್ನು ದರ್ಬಾರದಲ್ಲಿ ನಡೆಸುವದಕ್ಕಾಗಿ ಆಕೆಯನ್ನು ಕರೆ ಕಳುಹಿಸೆಂದು ಮಂತ್ರಿಗೆ ಆಜ್ಞೆ ಮಾಡಿದನು. ಆಗಾ ಮಂತ್ರಿಯು ಬಾದಶಹರೇ ! ಆಕೆಯು ಭಗವಂತನ ಸನ್ನಿಧಿಯನ್ನು ಬಿಟ್ಟು ಇನ್ನೆಲ್ಲಿಯೂ ಹಾಡುವದಿಲ್ಲವೆಂದು ಪ್ರತಿಜ್ಞೆ ಮಾಡಿದ್ದಾಳಂತೆ. ಕಾರಣ ಅವಳು ಬರಲಿಕ್ಕಿಲ್ಲವೆಂದು ನುಡಿಯಲು, ಬಾದಶಹನು ಕೋಪಗೊಂಡು ಆಕೆ ಬರದಿದ್ದರೆ ಬಂಧಿಸಿ ಕರೆತನ್ನಿರೆಂದು ಆಜ್ಞೆಮಾಡಿದನು. ಬಾದಶಹನ ಆಜ್ಞೆಯಂತೆ ಸೇನಾಪತಿಯು ಕೆಲಸೈನಿಕರನ್ನು ಕರಕೊಂಡು ಮಂಗಳವಟಿಗೆತೆರಳಿದನು

ಒಂದು ಕಾರ್ತಿಕ ಶುದ್ಧ ಏಕಾದಶಿಯು ಸಮೀಪಿಸಿತ್ತು. ಅಂದು ಪಂಡರಪುರದಲ್ಲಿ ನಡೆಯುವ ಉತ್ಸವ ದರ್ಶನಕ್ಕಾಗಿ ಅನೇಕ ಸಾಧು ಸಂತರಿಂದೊಡಗೂಡಿ ಹೊರಟು ದಾರಿಗುಂಟ ಭಜನೆ ಮಾಡುತ್ತಲೂ ಅಲ್ಲಲ್ಲಿಗೆ ವಸ್ತಿ ಮಾಡುತ್ತಲೂ, ಏಕಾದಶಿಯ ಮುನ್ನಾ ದಿನ ಪಂಢರಪುರವನ್ನು ಬಂದು ಮುಟ್ಟಿದರು.

ಇತ್ತ ದಿಲ್ಲಿಯಿಂದ ಹೊರಟ ಸೇನಾಪತಿಯು ಮಂಗಳವಟಿಗೆ ಬಂದು ಗ್ರಾಮಾಧಿಕಾರಿಯನ್ನು ಕರೆಯಿಸಿ ಸಮಾಚಾರವನ್ನು ಆತನಿಗೆ ತಿಳಿಸಿದನು ಗ್ರಾಮಾಧಿಕಾರಿಯು, ಕಾನ್ಹೋಪಾತ್ರಳು ಪಂಢರಪುರಕ್ಕೆ ಹೋದ ಸಮಾಚಾರವನ್ನು ತಿಳಿಸಿ, ಈ ಕೂಡಲೇ ಅಲ್ಲಿಗೆ ತೆರಳಿದರೆ ಸಿಗುವಳೆಂದು ತಿಳಿಸಿದನು ಆಗ ಸೇನಾಪತಿಯು ಆ ಗ್ರಾಮಾಧಿಕಾರಿಯನ್ನು ಸಹ ಕರೆದುಕೊಂಡು ತೆರಳಿ ಒಂದೇ ದಿನದಲ್ಲಿ ಪಂಡರಪುರಕ್ಕೆ ಬಂದು ಅಲ್ಲಿ ಆಕೆಯನ್ನು ಹುಡುಕತೊಡಗಿದನು.

ಅಂದು ಏಕಾದಶಿ, ಎಲ್ಲಿ ನೋಡಿದಲ್ಲಿ ತಾಳ, ತಂಬೂರಿ, ಮುದ್ದಲಿ ಮೊದಲಾದ ವಾದ್ಯಗಳನ್ನು ನುಡಿಸುತ್ತಲೂ, ಭಜನೆ ಮಾಡುತ್ತ ನರ್ತನ ಮಾಡುತ್ತಿದ್ದ ಪಾಂಡುರಂಗನ ಅನಂತ ಭಕ್ತರ ಸಮೂಹದ ಹೊರ್ತು ಮತ್ತೇನೂ ಕಾಣುತ್ತಿರಲಿಲ್ಲ ಎಲ್ಲರಂತೆ ಕಾನ್ಹೋಪಾತ್ರಾಳೂ ಆಕೆಯಸಂಗಡಿಗರೂ ಒಂದು ವಿಶಾಲವಾದ ಮರದಡಿಯಲ್ಲಿ ಉಳಕೊಂಡಿದ್ದರು. ತಾಳ ತಂಬೂರಿ ಮೊದಲಾದ ವಾದ್ಯಗಳಿಗೆ ಮೇಳೈಸಿ ಮೃದು ಮಧುರಕಂಠದಿಂದ ವಿಠ್ಠಲನಾಮ ಸಂಕೀರ್ತನೆಯನ್ನು ನಡೆಸಿದ್ದನು. ಆಕೆಯು ಸಂಕೀರ್ತನೆಯನ್ನು

ಕೇಳಲು ಅನೇಕ ಜನರು ಸುತ್ತುವರಿದು ಕುಳಿತಿದ್ದರು. ಅಷ್ಟೊತ್ತಿಗೆ ರಾಜಭಟರು ಅಲ್ಲಿಗೆ ಬಂದು ಆಕೆಗೆ ರಾಜಾಜ್ಞೆಯನ್ನು ತಿಳಿಸಿದರು. ಆದರಾಕೆಯು ಅದಕ್ಕೆ ಬೆದರದೆ ತನ್ನ ಪ್ರತಿಜ್ಞೆಯನ್ನು ತಿಳಿಸಿ ಬರುವದಿಲ್ಲ ವೆಂದು ಸ್ಪಷ್ಟ ಹೇಳಿದಳು. ಕೂಡಲೇ ರಾಜಭಟರು ಆಕೆಯನ್ನು ಬಂಧಿಸಿ ಮಂಗಳವಟಿಗೊಯ್ದು ಅಲ್ಲಿ ಬಂದಿಖಾನೆಯಲ್ಲಿಟ್ಟರು. ಅಗಾಕೆಯು ಅಲ್ಲಿಯೇ ಪಂಢರೀನಾಥನನ್ನು ಕುರಿತು— ಹೇ .. ವಿಠ್ಠಲಾ! ಕರುಣಾನಿಧಿಯೇ! ನಿನ್ನ ದರ್ಶನಕ್ಕಾಗಿ ತುಂಬಿದ ಹೃದಯದಲ್ಲಿ ನಿನ್ನಲ್ಲಿ ಬಂದರೂ ನಿನ್ನ ದರ್ಶನ ದೊರೆಯದಿರಲು ಕಾರಣವೇನು? ಮೇಲಾಗಿ ನನ್ನ ಪ್ರತಿಜ್ಞೆ ಭಂಗವಾಗಿ ನನ್ನ ಹರಣ ಕೂಡ ಆಗುವ ಸಂಭವವಿದೆ. ಇದು ನಿನಗರಿಯದೆ? ಹೀಗಿದ್ದೂ ಭಕ್ತರಕ್ಷಕನೆಂದು ನಾಮುಧರಿಸಿ ಸುಮ್ಮನೇಕೆ ಕುಳಿತಿರುವೆ? ಎಂದು ಅನ್ನು ತ್ತಲೂ, ದುಃಖಾಶ್ರುಗಳನ್ನು ಸುರಿಸುತ್ತಲೂ ಅನನ್ಯ ಭಕ್ತಿಯಿಂದ ಭಜಿಸ ತೊಡಗಿದಳು. ಆಗಾ ಭಕ್ತವತ್ಸಲನಾದ ಭಗವಂತನು ಆಕೆಯ ಮೊರೆ ಯನ್ನು ಕೇಳಿ ತನ್ನ ಮಾಯಾಶಕ್ತಿಯಿಂದ ಬಂದೀಖಾನೆಯ ಬೀಗ ತೆಗೆದು ಬಿಟ್ಟನಲ್ಲದೆ ಆಕೆ ಅಲ್ಲಿಂದ ಪಾರಾಗುವ ವರೆಗೆ ಕಾವಲುಗಾರರು ಗಾಢನಿದ್ರಾ ವಶರಾಗುವಂತೆ ಮಾಡಿದನು. ಆಗಾಕೆಯು ನಿರಾಯಾಸವಾಗಿ ಅಲ್ಲಿಂದ ಪಾರಾಗಿ ಪಂಢರಪುರಕ್ಕೆ ಬಂದಳು. ಪುಂಡಲೀಕ ವರದನ ಪಾದಸನ್ನಿಧಿಯಲ್ಲಿ ನಿಂತು– ಹೇ....ಭಕ್ತರಕ್ಷಕಾ! ಇನ್ನು ಈ ಜನ್ಮವನ್ನು ನನ್ನಲ್ಲಿ ಶೇಖ ರಿಸಿಕೋ, ಇನ್ನು ಈ ಮಾನವ ಜನ್ಮದಲ್ಲಿರಲು ನನ್ನ ಮನ ಒಪ್ಪಲಾರದು ಎಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿ, ಆತನ ಪಾದಕಮಲದಲ್ಲಿ ತಲೆಯಿಟ್ಟ ವಳು ತಿರುಗಿ ಏಳಲಿಲ್ಲ.

ಇತ್ತ ಮಂಗಳವಟಿಯ ಬಂದೀಖಾನೆಯಿಂದ ಕಾನ್ಹೋಪಾತ್ರಾಳು ಪಾರಾಗಿ ಹೋದ ಸಮಾಚಾರವು ಸೇನಾಪತಿ ಮೊದಲಾದವರಿಗೆ ತಿಳಿದು, ಅವರು ಗಾಬರಿಗೊಂಡು ಅತ್ತಿತ್ತ ಹುಡುಕುತ್ತಿರಲು, ಪಂಢರಪುರದಿಂದೊರ್ವ ಅರ್ಚಕನು ಬಂದು, ಕಾನ್ಹೋಪಾತ್ರಾಳು ಪುಂಡಲೀಕ ವರದನ ಪಾದ ಪದ್ಮದ ಮೇಲೆ ಹಣೆ ಇಟ್ಟು ಪ್ರಾಣಬಿಟ್ಟಳೆಂಬ ಸಮಾಚಾರವನ್ನು ತಿಳಿಸಿ ದನು. ಆಗ ಸೇನಾಪತಿಯು ಆಕೆಯ ಭಕ್ತಿಯನ್ನು ಕೊಂಡಾಡುತ್ತಾ ರಾಜಧಾನಿಗೆ ತೆರಳಿ ಸಮಾಚಾರವನ್ನು ತಿಳಿಸಲು, ಬಾದಶಹನು ಆಶ್ಚರ್ಯ

ಚಕಿತನಾದಲ್ಲದೆ, ಸೇನಾಪತಿಯ ಮಾತಿನಲ್ಲಿ ವಿಶ್ವಾಸಹುಟ್ಟಲಿಲ್ಲ. ಕೂಡಲೆ ಆತನು ಮಿತ ಪರಿವಾರದೊಡನೆ ಪಂಢರಪುರಕ್ಕೆ ತೆರಳಿ, ಕಾನ್ಹೋಪಾತ್ರಳ ಶವವನ್ನು ಪ್ರತ್ಯಕ್ಷ ಕಂಡು, ಇಂಥ ಮಹಾ ಭಗವದ್ಭಕ್ತಳಿಗೆ ಅನ್ಯಥಾ ತ್ರಾಸು ಕೊಟ್ಟೆನಲಾ; ಎಂದು ದುಃಖಿಸಿದನು. ಇಂತು ಕಾನ್ಹೋಪಾತ್ರಳ ಕೀರ್ತಿಯು ಎಲ್ಲೆಡೆಯಲ್ಲಿ ಹಬ್ಬಿ, ಆಕೆಯ ನಾಮವಿಂದಿಗೂ ಅಜರಾಮರವಾಗಿ ಉಳಿದಿದೆ.

---

## ೧೭. ಭಾನುದಾಸ

ವೇದಾಧ್ಯಯನ ಸಂಪನ್ನನೂ ಸೂರ್ಯೋಪಾಸಕನೂ ಆದಬ್ರಾಹ್ಮಣ ಸದ್ಗೃಹಸ್ಥನು ಪೈಠಣಪುರದಲ್ಲಿ ವಾಸವಾಗಿದ್ದನು. ಆತನ ಅದೃಷ್ಟದಿಂದ ಅವನ ಸಂಸಾರವು ಸುಖಮಯವಾಗಿದ್ದಿತು. ಇಂತಿರಲು ಸಂತಾನಕ್ಕಾಗಿ ಸೂರ್ಯದೇವನನ್ನಾಶ್ರಯಿಸಿ ಆತನ ಆರಾಧನೆ ಮಾಡುತ್ತಿರಲು ಸೂರ್ಯ ದೇವನ ಅನುಗ್ರಹದಿಂದ ಓರ್ವ ಸುಕುಮಾರನು ದಯಿಸಿದನು. ಪುತ್ರ ಪ್ರಾಪ್ತಿಯ ಸಂತೋಷಕ್ಕಾಗಿ ಬ್ರಾಹ್ಮಣ ಮುಂತಾದವರನ್ನು ಭೋಜನಾದಿ ದಾನಧರ್ಮಗಳಿಂದ ಸಂತೋಷಪಡಿಸಿದನು. ಬಡಬಗ್ಗರಿಗೂ ಅನ್ನದಾನ ಮಾಡಿದನು. ಭಾನುದೇವನ ಅನುಗ್ರಹದಿಂದ ಹುಟ್ಟಿದ ಆ ಬಾಲಕನಿಗೆ 'ಭಾನುದಾಸ' ನೆಂದು ನಾಮಕರಣ ಮಾಡಿದನು. ಆ ಬಾಲಕನಿಗೆ ಕಾಲ ಕ್ರಮದಲ್ಲಿ ಅಕ್ಷರಾಭ್ಯಾಸವನ್ನು ಪ್ರಾರಂಭಿಸಿದನು.

ಭಾನುದಾಸನು ಪ್ರತಿಭಾವಂತನಾದಾಗ್ಯೂ ಚಿಕ್ಕಂದಿನಲ್ಲಿ ಅಕ್ಷರಾ ಭ್ಯಾಸಕ್ಕೆ ಲಕ್ಷ್ಯಕೊಡದೆ ಆಟನೋಟಗಳಲ್ಲಿ ಕಾಲಕಳೆಯುತ್ತಿದ್ದನು.

ಸದ್ಗುಣ ಸಂಪನ್ನನೂ ಪಂಡಿತನೂ ಆದ ಭಾನುದಾಸನ ತಂದೆಯು ಮಗನ ಸ್ವಭಾವವನ್ನು ಕಂಡು ವ್ಯಸನಗೊಂಡನು. ಅನೇಕಸಲ ಮಗನಿಗೆ ಆಟನೋಟಗಳ ರುಚಿಯನ್ನು ಬಿಟ್ಟು, ವಿದ್ಯಾಬುದ್ಧಿವಂತನಾಗಲು ಅಭ್ಯಾಸದ ಕಡೆಗೆ ಲಕ್ಷಕೊಡಲು ಹೇಳಿದನು ಆದರೂ ಮಗನು ತನ್ನ ಹಠಮಾರಿ ತನವನ್ನು ಬಿಡಲಿಲ್ಲ. ಹೇಳಿ ಹೇಳಿ ಸಾಕಾಯಿತು. ಅವನ ಪ್ರಾರಬ್ಧಕ್ಕೆ

ನಾವೇನು ಮಾಡೋಣವೆಂದು ಆಲೋಚಿಸಿ ಸುಮ್ಮನಾದನು. ಆದರೂ ಮಗನು ವಿದ್ಯಾಹೀನನಾಗುವನಲ್ಲದೆ ಉಡಾಳನಾಗಿ ತಿರುಗುವನಲ್ಲ ಎಂದು ಒಳಗೊಳಗೆ ಚಿಂತಿಸುತ್ತಿದ್ದನು. ಒಂದು ದಿನ ಬಾಲಕನು ಮಧ್ಯಾಹ್ನ ಮೂರು ಘಂಟೆ ಹೊತ್ತಾದರೂ ಮನೆಗೆ ಬಾರದಿರಲು ಆತನು ಮಗನನ್ನು ಹುಡುಕುತ್ತಾ ಹೋಗುತ್ತಿರಲು ಒಂದು ಕಡೆ ಹುಡುಗರೊಡನೆ ಚಲ್ಲಾಟ ವಾಡುತ್ತಿರುವ ಭಾನುದಾಸನನ್ನು ಕಂಡು ಕಡುಕೋಪದಿಂದ ಆತನನ್ನು ಹಿಡಿದೆಳೆದು ಚನ್ನಾಗಿ ಥಳಿಸಲು, ಬಡತಗಳನ್ನು ತಡೆಯಲಾರದೆ ಭಾನು ದಾಸನು ನೆಲಕ್ಕುರುಳಿದನು. ತಂದೆಯ ಹೊಡೆತಕ್ಕೆ ಭಯಪಟ್ಟು ಚಟ್ಟ ನೆದ್ದು ಬೀದಿಗುಂಟ ಓಡತೊಡಗಿದನು. ಆಗ ಆತನ ತಂದೆಯು ಬೇಸತ್ತು ಅವನೆಲ್ಲಿಗೆ ಹೋಗುವನು, ಸಂಜೆಗಾದರೂ ತಿನ್ನುವದಕ್ಕೆ ಮನೆಗೆ ಬರಬೇಕ ಲ್ಲವೆ ಎಂದು ಸಿಟ್ಟಿನ ಭರದಲ್ಲಿ ಗುಣುಗುತ್ತ ಮನೆಗೆ ಬಂದನು. ಹೆಂಡತಿ ಯನ್ನು ಕೂಗಿ ಮಗನ ಅವಿವೇಕತನವನ್ನು ವಿಸ್ತರಿಸಿ ಹೇಳಿದನು. ಆಗ ಆಕೆಯು ವ್ಯಸನದಿಂದೊಂದು ಉಸುರ್ಗರೆದು ನಾವೇನು ಮಾಡಬಲ್ಲೆವು, ಅನ್ನೋದಕಗಳನ್ನಿಟ್ಟು ಸಲುಹಬಲ್ಲೆವಷ್ಟೇ ಹೊರ್ತು ಆತನ ಜನ್ಮಾಂತರ ಕರ್ಮಫಲಕ್ಕೆ ನಾವೇನು ಮಾಡಬಲ್ಲೆವು ಎಂದು ಉತ್ತರವಿತ್ತಳು. ಅಂತೂ ಹ್ಯಾಗೋ ಮನಸ್ಸಿಗೆ ಸಮಾಧಾನ ಮಾಡಿಕೊಂಡು ಆ ವೇಳೆಗೆ ಮಗನ ವಿಚಾರವನ್ನು ಮರೆತು ಮನೆಗೆಲಸದಲ್ಲಿ ತೊಡಗಿದಳು.

ತಂದೆಯ ಕೈಯಿಂದ ಪೆಟ್ಟುತಿಂದ ಭಾನುದಾಸನು ಒಂದೇ ಓಟದಿಂದ ಬೀದಿಯುದ್ದಕ್ಕೂ ಓಡುತ್ತಲೇ ಇದ್ದನು. ಮತ್ತೆಲ್ಲಿ ತಂದೆಯ ಕೈಯಲ್ಲಿ ಸಿಕ್ಕುಬೀಳುವೆನೋ ಎಂಬ ಭಯದಿಂದ ಗಾಬರಿಯಾಗಿ ಹಿಂದಕ್ಕೆ ನೋಡು ವದು, ಮುಂದೆ ಓಡುವದು ಹೀಗೆಯೇ ಓಡುತ್ತ ನಡೆದನು. ಊರಿನಿಂದ ದೂರವಾಗಿದ್ದ ಕೆಟ್ಟ ಕಾಡೊಂದನ್ನು ಸೇರಿದನು; ಅಷ್ಟೊತ್ತಿಗೆ ರಾತ್ರಿ ಹತ್ತು ಘಂಟೆಯ ಹೊತ್ತಾಗಿತ್ತು. ಶುಕ್ಲಪಕ್ಷವಾದ್ದರಿಂದ ಬೆಳದಿಂಗಳ ಬೆಳಕು ಸ್ವಚ್ಛ ವಾಗಿ ಬಿದ್ದಿತ್ತು. ಆ ಬೆಳದಿಂಗಳ ಬೆಳಕಿನಲ್ಲಿ ಆತನು ಅತ್ತಿತ್ತ ತಿರುಗಾಡು ತ್ತಿರಲು, ಅಲ್ಲೊಂದು ಬೆಟ್ಟದ ಕೋಡುಗಲ್ಲಿನ ಕೆಳಭಾಗದಲ್ಲಿರುವ ವಿಶಾಲ ವಾದ ಗುಹೆಯೊಂದನ್ನು ಕಂಡು, ಅದರೊಳಗೆ ಪ್ರವೇಶಿಸಿ ಕುಳಿತು ಕೊಂಡನು. ಒಂದೇ ಸವನೇ ಆರೇಳು ತಾಸುಗಳವರೆಗೆ ಓಡಿದ ಆಯಾಸ

ದಿಂದಲೂ, ತಂಪಾದ ಸುಳಿಗಾಳಿಯು ಬೀಸುತ್ತಿರುವದರಿಂದಲೂ ನಿದ್ರಾ ದೇವಿಯು ಆತನನ್ನು ಆವರಿಸಿಕೊಳ್ಳಲು ಅಲ್ಲಿಯೇ ಮಲಗಿಬಿಟ್ಟನು.

ಇತ್ತ ಪೈಠಣಪುರದಲ್ಲಿ ಭಾನುದಾಸನ ತಂದೆ-ತಾಯಿಗಳು ಮಧ್ಯರಾತ್ರಿಯಾದರೂ ಮಗನು ಮನೆಗೆ ಬಾರದಿರಲು ಗಾಬರಿಯಾದರು. ಸಿಟ್ಟುಶಮನವಾಗಿ ಪುತ್ರವಾತ್ಸಲ್ಯವು ಅಂಕುರಿಸಿ ಬೆಳೆಯತೊಡಗಿತು. ಆ ರಾತ್ರಿ ಅವರಿಗೆ ಮಗನ ವಿಚಾರದಲ್ಲಿ ಕಣ್ಣಿಗೆ ನಿದ್ರೆ ಕೂಡ ಬರಲಿಲ್ಲ; ಬೆಳಗಾಗುತ್ತಲೇ ಮಗನನ್ನು ಹುಡುಕತೊಡಗಿದರು. ಬೀದಿ-ಬೀದಿಗಳಲ್ಲಿಯೂ, ಮನೆ-ಮನೆಗಳಲ್ಲಿಯೂ ಹುಡುಕಿದರು; ಎಲ್ಲಿ ನೋಡಿದರೂ ಮಗನ ಸುಳಿವೇ ದೊರೆಯಲಿಲ್ಲ. ದಾರಿಯಲ್ಲಿ ಕಂಡವರನ್ನು ಕೇಳಿದನು, ಕೇಳಿದರೂ ನಾವು ನೋಡಿದ್ದೇವೆಂದು ಯಾರೂ ಹೇಳಲಿಲ್ಲ. ಇಂತು ಹುಡುಕುತ್ತಿರಲು ಒಬ್ಬ ದೂರದ ದಾರಿಕಾರನು ಭೆಟ್ಟಿಯಾಗಲು ಆತನನ್ನು ಕೇಳಲು ಅವನು ಒಬ್ಬ ಬಾಲಕನು ಕಾಡುದಾರಿ ಹಿಡಿದು ಗಾಬರಿಯಿಂದ ಓಡುತ್ತಲಿದ್ದನೆಂದು ಹೇಳಿ, ಅವನ ಚಹರೆಪಟ್ಟಿಗಳನ್ನು ಹೇಳಲು ಅವನು ಭಾನುದಾಸನೆಂದು ನಿಶ್ಚಯಿಸಿ ಸ್ವಲ್ಪ ಧೈರ್ಯಗೊಂಡರು. ಮಗನು ಎಲ್ಲಿಯೇ ಇರಲಿ ಜೀವದಿಂದಿರುವನೆಂತಲೂ, ಎಂದಾದರೂ ಅವನ ಮುಖ ನೋಡಬಹುದೆಂತಲೂ ಸಮಾಧಾನಹೊಂದಿದರು. ಮರುದಿನವೂ ಅನೇಕ ಜನ ಆಳುಗಳನ್ನು ಕರೆದು ಕೆಲವರನ್ನು ಬೆಟ್ಟದ ಕಾಡುಗಳಿಗೂ, ಕೆಲ ಜನರನ್ನು ಹಳ್ಳಿಪಳ್ಳಿಗಳಿಗೂ ಕಳಿಸಿ ಭಾನುದಾಸನನ್ನು ಜಾಗರೂಕತೆಯಿಂದ ಹುಡುಕಿತರಲು ಹೇಳಿಕಳಿಸಿದನು; ಆದರೂ ಆತನ ಸುಳಿವು ದೊರೆಯಲಿಲ್ಲ. ಆಗ ಭಾನುದಾಸನ ತಂದೆ-ತಾಯಿಗಳು ನಿರಾಶೆಗೊಂಡು ಇನ್ನು ನಮ್ಮ ಪ್ರಯತ್ನದಿಂದ ಭಾನುದಾಸನು ಸಿಗುವದಿಲ್ಲವೆಂದೂ, ದೇವರ ಸಂಕಲ್ಪವಾದರೆ ಮಾತ್ರ ಅವನನ್ನು ಕಾಣಬಹುದೆಂದೂ ನಿಶ್ಚಯಿಸಿ ಇಷ್ಟ ದೇವರಾದ ಸೂರ್ಯನಾರಾಯಣನಿಗೆ ಹರಿಕೆ ಮಾಡಿಕೊಂಡು ಸುಮ್ಮನಾದರು.

ಅತ್ತ ಗುಹೆಯಲ್ಲಿ ಮಲಗಿದ ಭಾನುದಾಸನು ಮರುದಿನ ಎರಡು ಮೂರು ತಾಸು ಹೊತ್ತೇರಿದ ನಂತರ ಎಚ್ಚರಾಗಿ ಎದ್ದುಕುಳಿತನು. ಸೂರ್ಯನ ಸ್ವಚ್ಛ ಬೆಳಕಿನಲ್ಲಿ ಗುಹೆಯನ್ನು ಅತ್ತಿತ್ತ ನೋಡಲು ಅಲ್ಲೊಂದು ಬಂಡೆಯ ಮೇಲೆ ಸೂರ್ಯದೇವನ ಮೂರ್ತಿಯು ಕೆತ್ತಲ್ಪಟ್ಟದ್ದಿತು. ಅದು

ಇಂಥಹದೇ ಮೂರ್ತಿಯೆಂದೂ, ಅದನ್ನು ಪೂಜಿಸಬೇಕೆಂದೂ ಮನಃಪೂರ್ವಕ ವಾಗಿ ತಿಳಿಯದಿದ್ದರೂ ಒಂದು ವಿಧವಾದ ಮನೋಭಾವನೆಯಿಂದ ಮೂರ್ತಿಗೆ ನಮಸ್ಕರಿಸಿ, ಹೇ....ದೇವಾ! ನನ್ನನ್ನು ರಕ್ಷಿಸು ಎಂದು ಭಾವಸ್ಫೂರ್ತಿಯಿಂದ ಪ್ರಾರ್ಥನೆ ಮಾಡತೊಡಗಿದನು. ಧರ್ಮಸಾಕ್ಷಿಯಾದ ಭಾನುದೇವನಿಗೆ ಭಾನುದಾಸನಲ್ಲಿ ಕನಿಕರ ಉಂಟಾಗಿ ಆತನಿಗೆ ಪ್ರಸನ್ನನಾಗಿ ಬಾಲಕನೇ ಭಯಪಡಬೇಡ; ಭಕ್ತವತ್ಸಲನಾದ ಪಾಂಡುರಂಗ ಪರಬ್ರಹ್ಮನನ್ನಾಶ್ರಯಿಸಿ, ಆತನ ದಾಸಕೂಟದಲ್ಲಿ ಸೇರಿ, ಆ ಪರಂಧಾಮನ ಸಂಕೀರ್ತನೆಯನ್ನು ಎಡಬಿಡದೆ ಮಾಡುತ್ತಿರು. ನಿನ್ನ ಇಚ್ಛೆಗಳೆಲ್ಲ ಪೂರೈಸುವವು ಎಂದರುಹಿ, ತಾರಕಮಂತ್ರವನ್ನಾತನಿಗೆ ಅನುಗ್ರಹಿಸಿ ಆತನ ಹೃದಯಮಂದಿರದಲ್ಲಿ ಬೀಜಾಕ್ಷರಗಳನ್ನು ಬರೆದು, ದಿವ್ಯವಾದ ಗೋಕ್ಷೀರವನ್ನು ಆತನಿಗೆ ಕೊಟ್ಟು, ಬಾಲಕಾ ಈ ಹಾಲನ್ನು ಕುಡಿದು ವಿಠಲನ ಧ್ಯಾನದಲ್ಲಿ ಮಗ್ನನಾಗು, ಅಂದರೆ ನಿನಗೆ ಹಸಿವು ಬಾಯಾರಿಕೆಗಳು ಇಲ್ಲದಂತಾಗುವವು; ಎಂದು ಆಶೀರ್ವದಿಸಿ ಅದೃಶ್ಯನಾದನು.

ಸೂರ್ಯದೇವನ ಅನುಗ್ರಹವಾಗುತ್ತಲೇ ಸಮಸ್ತ ವಿದ್ಯೆಗಳೂ ಆತನ ಕೈವಶವಾದವು. ತ್ರಿಕಾಲಜ್ಞಾನಿಗಳಾದ ಋಷಿಗಳೋಪಾದಿಯಲ್ಲಿ ಅನೇಕ ಜನ್ಮಕರ್ಮಗಳ ರಹಸ್ಯಗಳೆಲ್ಲವೂ ಆತನಿಗೆ ತಿಳಿಯಲಾರಂಭಿಸಿದವು. ತನ್ನಲ್ಲಿ ಸಂಪೂರ್ಣ ವಾತ್ಸಲ್ಯವನ್ನು ತೋರಿಸಿ, ಕೈಹಿಡಿದು ಕಾಪಾಡಿದ ಆದಿತ್ಯನ ಚರಣಕಮಲಗಳಿಗೆ ಅನೇಕಾವರ್ತಿ ನಮಸ್ಕರಿಸಿ, ಆತನೇ ತನ್ನ ಗುರುವೆಂದು ಭಾವಿಸಿ ಆನಂದಲಹರಿಯಲ್ಲಿ ಲೋಲಾಡುತ್ತಿದ್ದನು. ತನ್ನ ಗುರುವಾದ ಸೂರ್ಯದೇವನು ಹೇಳಿದಂತೆ ಪಾಂಡುರಂಗಮೂರ್ತಿಯನ್ನಾಕ್ಷಣದಲ್ಲಿಯೇ ಧ್ಯಾನಮಾಡುವದಕ್ಕಾರಂಭಿಸಿದನು. ಇಂತು ಗುರುಬ್ರಹ್ಮಮೂರ್ತಿಯಾದ ಶ್ರೀಕೃಷ್ಣಪರಮಾತ್ಮನ ಲೀಲಾವಿಲಾಸಗಳನ್ನು ವರ್ಣಿಸುತ್ತ ಆ ಗುಹೆಯಲ್ಲಿ ಕಾಲಕಳೆಯುತ್ತಿದ್ದನು.

ಒಂದು ದಿನ ಪರವೂರಿಗೆ ಹೋಗಿದ್ದ ಪೈಠಣಪುರದ ಬ್ರಾಹ್ಮಣನೊಬ್ಬನು ತಿರುಗಿ ಬರುತ್ತಿದ್ದಾಗ ದಾರಿ ತಪ್ಪಿ ಅರಣ್ಯ ಮಾರ್ಗವಾಗಿ ನಡೆದು ಬಂದು ಭಾನುದಾಸನು ವಾಸವಾಗಿದ್ದ ಗುಹೆಯ ಬಳಿ ಬಂದನು. ಅಲ್ಲಿ ಧ್ಯಾನಾಸಕ್ತನಾಗಿದ್ದ ಭಾನುದಾಸನನ್ನು ಕಂಡು ಅಬ್ಬಾ! ಇಷ್ಟು ಚಿಕ್ಕ

ಮನಸ್ಸಿನಲ್ಲಿ ಕಾಡು ಸೇರಿ ತಪಸ್ಸು ಮಾಡುವದೆಂದರೆ ಪೂರ್ವ ಜನ್ಮದ ಪುಣ್ಯವೇ; ತಿಂದು ತಿರುಗವ ಬಾಲಕನಿಂದು ಮಾಹಾತಪವನ್ನಾಚರಿಸುವ ದೆಂದರೆ ಮಹಾಭಾಗ್ಯವು ಈತನನ್ನು ಎದುರು ನೋಡುತ್ತಿದೆ. ಎಂದೆನ್ನುತ್ತ ಇಲ್ಲಿ ಬಹಳಹೊತ್ತು ಹಾಗೆ ನಿಂತರೆ, ಈತನು ಧ್ಯಾನಯೋಗದಿಂದ ಎಚ್ಚೆತ್ತು ನನ್ನನ್ನು ನೋಡಿ ಮತ್ತೆಲ್ಲಿಗಾದರೂ ಓಡಿಹೋಗಿ ತಪ್ಪಿಸಿಕೊಳ್ಳಬಹುದೆಂದು ಆಲೋಚಿಸಿ ಕೂಡಲೇ ಅಲ್ಲಿಂದ ತೆರಳಿ ಪ್ರಯಾಣದ ಆಯಾಸವನ್ನೂ ಲೆಕ್ಕಿಸದೆ ಪೈಠಣಕ್ಕೆ ಬಂದು ಭಾನುದಾಸನ ತಂದೆಗಾಸಮಾಚಾರವನ್ನು ಸವಿಸ್ತಾರ ವಾಗಿ ಹೇಳಿದನು. ಮಗನ ವೃತ್ತಾಂತವನ್ನು ಕೇಳುತ್ತಲೇ, ಆ ದಂಪತಿಗಳು ಅತ್ಯಾನಂದ ಭರಿತರಾಗಿ ಕೂಡಲೆ ತಮಗೆ ಬೇಕಾದ ನೆಂಟರಿಷ್ಟನ್ನು ಕೂಡಿ ಕೊಂಡು ಸುದ್ದಿಹೇಳಿದ ಬ್ರಾಹ್ಮಣನನ್ನು ಸಂಗಡ ಕರೆದುಕೊಂಡು ಅರಣ್ಯ ಮಾರ್ಗವಾಗಿ ಎರಡು ದಿನಗಳವರೆಗೆ ಒಂದೇ ಸವನೆ ನಡೆದು ಮೂರನೇ ದಿನ ಮುಂಜಾನೆ ಮೂರು ತಾಸು ಹೊತ್ತೇರುತ್ತಲೇ, ಭಾನುದಾಸನು ವಾಸ ವಾಗಿದ್ದ ಗುಹೆಗೆ ಬಂದು ಮುಟ್ಟಿದರು. ಆಗ ಭಾನುದಾಸನು ಅದೇ ಆಗ ಧ್ಯಾನಯೋಗದಿಂದ ಬಹಿರ್ಮುಖನಾಗಿದ್ದನು. ಕೂಡಲೆ ಆತನ ತಾಯಿತಂದೆ ಗಳು ಆತನನ್ನು ಆಲಂಗಿಸಿ ವಿಷಾದ ಪೂರಿತ ದಗ್ದ ಕಂಠದಿಂದ ಯೋಗಕ್ಷೇಮ ವನ್ನು ವಿಚಾರಿಸಿ ಮಗು ನಾವಿನ್ನಾವರೀತಿಯಲ್ಲಿಯೂ ನಿನಗೆ ದಂಡಿಸುವ ದಿಲ್ಲವೆಂದೂ ನಿನ್ನಿಷ್ಟದಂತೆ ಮನೆಯಲ್ಲಿರಬಹುದೆಂದೂ ಹೇಳಿ ಮನೆಗೆ ಬರಬೇಕೆಂದು ಹೇಳಿಕೊಂಡರು.

ಆಗ ಭಾನುದಾಸನು ಜನನಿ ಜನಕರಿಗೆ ನಮಸ್ಕರಿಸಿ, ಇಂತೆಂದನು. ಪೂಜ್ಯರೇ ? ತಾವಿಷ್ಟು ದೂರ ಬಂದುದೇತಕ್ಕೆ ? ನನಗಾಗಿ ಇಷ್ಟು ಹಂಬಲ ವೇತಕ್ಕೆ ? ಪುತ್ರನೆಂಬ ಸಂಸಾರ ಸಂಬಂಧವಾದ ಭ್ರಾಂತಿಯನ್ನು ಬಿಟ್ಟು ಭಗವಂತನ ಭವ್ಯ ಚರಣಗಳಿಗಾಗಿ ಹಂಬಲ ಬಿಟ್ಟರೆ ನಿಮಗೆ ನಿತ್ಯಾಂದ ಉಂಟಾಗುವದು ಮತ್ತು ಅನಾದಿಕಾಲದಿಂದಲೂ, ಜೀವಾತ್ಮರು ಅವರವರ ಕರ್ಮಾನುಸಾರ ನಾನಾ ಯೋನಿಗಳಲ್ಲಿ ಪ್ರವೇಶಿಸಿ ಹುಟ್ಟಿ ಸಾಯುತ್ತಲೇ ಬಂದಿರುವ ಆ ಜೀವಾತ್ಮವು ಮುಂದೆಯೂ ಅದೇ ಕ್ರಮವನ್ನನುಸರಿಸುತ್ತ ಹೋಗುವದು. ಅದರಂತೆ ನಾನೂ ಕೂಡಾ ಅನೇಕ ಗರ್ಭಕೋಶ ಗಳಲ್ಲಿ ಪ್ರವೇಶಿಸಿ ಹುಟ್ಟುತ್ತಲೂ, ಪುನಃ ಮರಣ ಹೊಂದುತ್ತಲೂ,

ಸಂಸಾರ ಚಕ್ರದಲ್ಲಿ ಸುತ್ತುತ್ತಿರುವಾಗ, ಅದೆಷ್ಟು ಜನರಿಗೆ ಪುತ್ರನಾಗಿ ಹುಟ್ಟಿದ್ದೇನೋ ಎಷ್ಟು ಜನರಿಗೆ ಅಣ್ಣ ತಮ್ಮನಾಗಿದ್ದೆನೋ, ಎಷ್ಟು ಜನರಿಗೆ ಜನಕನಾಗಿದ್ದೇನೋ ಹೇಳುವದಕ್ಕೆ ಅಸಾಧ್ಯ. ಇಂತಿರುವ ಈ ನನ್ನ ಜೀವಾತ್ಮನು ಇಂದು ನಿಮ್ಮ ಪುತ್ರನಾಗಿ ಹುಟ್ಟಿದ್ದಾನೆ. ಇಷ್ಟಕ್ಕಾಗಿ ಮಾಯಾ ಸಂಸಾರದ ವ್ಯಾಮೋಹಕ್ಕೆ ಸಿಕ್ಕು ನರಳುವದಕ್ಕಿಂತ ಈ ಸಂಸಾರ ಬಂಧನದಿಂದ ಬಿಡುಗಡೆ ಮಾಡೆಂದು, ಭಗವಂತನನ್ನು ಪ್ರಾರ್ಥಿಸಿರಿ. ನಾನು ಮನೆಗೆ ಬರಲಾರೆನು. ಎಂದು ಸ್ಪಷ್ಟವಾಗಿ ನುಡಿದನು.

ಮಗನ ಮಾತುಗಳನ್ನು ಕೇಳುತ್ತಲೇ ಆ ದಂಪತಿಗಳಿಗೆ ದುಃಖವೂ ಆನಂದವೂ ಏಕಕಾಲಕ್ಕೆ ಉದ್ಭವಿಸಿಕೊಂಡವು. ಭಾನುದಾಸನಲ್ಲಿ ಕಲ್ಪನೆಯಲ್ಲಿಲ್ಲದ ಮಹಾ ಜ್ಞಾನೋದಯವುಂಟಾದುದಕ್ಕೆ ಸಂತೋಷಗೊಂಡರೂ ಮನೆಗೆ ಬರುವದಿಲ್ಲವೆಂಬ ಅವನ ನಿಷ್ಠುರ ನುಡಿಯಿಂದ ದುಃಖಗೊಂಡು ಮಗು ಅದೇನೇಯಿರಲಿ, ನೀನು ಬರುವವರೆಗೆ ನಾವೀ ಜಾಗಬಿಟ್ಟು ಹೋಗುವದಿಲ್ಲ. ಅಷ್ಟೇ ಅಲ್ಲ. ಅನ್ನನೀರುಗಳನ್ನು ತೊರೆದು ಇಲ್ಲಿಯೇ ಬಿದ್ದು ಪ್ರಾಣ ಬಿಡುವೆವು ಎಂದು ಹೇಳಿ ಅದರಂತೆ ಮೂರು ದಿನಗಳ ಪರ್ಯಂತ ನಿರಾಹಾರಿಗಳಾಗಿದ್ದರು. ನಾಲ್ಕನೇ ದಿನ ಭಾನುದಾಸನ ಸ್ವಪ್ನದಲ್ಲಿ ಸೂರ್ಯದೇವನು ಪ್ರಸನ್ನನಾಗಿ ಭಾನು! ನೀನೀಗ ನಾನಂದಂತೆ ನಡೆಯುವದು ನಿನ್ನ ಕರ್ತವ್ಯ ನೀನೀಗ ನಿನ್ನ ಜನನಿ ಜನಕರೊಂದಿಗೆ ಊರಿಗೆ ಹೋಗಿ, ಅವರೊಡನೆ ಮನೆಯಲ್ಲಿದ್ದು ಗ್ರಹಸ್ಥಾಶ್ರಮವನ್ನು ಸ್ವೀಕರಿಸು ಮತ್ತು ಪುಂಡಲೀಕವರದ ನನ್ನು ಆರಾಧಿಸುತ್ತಿರು. ನಿನಗೆ ಶ್ರೇಯಸ್ಸುಂಟಾಗುವದು ಎಂದು ಹೇಳಿ ಅದೃಶ್ಯನಾದನು. ಬಳಿಕವನ ತಂದೆತಾಯಿಗಳ ಸ್ವಪ್ನದಲ್ಲಿಯೂ ಪ್ರಸನ್ನನಾಗಿ ನಾನು ನಿನ್ನಿಷ್ಟದೇವತೆಯಾದ ಸೂರ್ಯದೇವನು ನಿನ್ನ ಮಗನು ಸಾಮಾನ್ಯನಲ್ಲ. ಹರಿಭಕ್ತಾಗ್ರೇಸರನು. ಆತನ ಪ್ರಭಾವವು ಲೋಕದಲ್ಲಿ ಖ್ಯಾತವಾದುದು. ನಿಮ್ಮೊಂದಿಗಾತನು ಬರುವಂತೆ ನಾನಾಜ್ಞೆಮಾಡಿರುವೆನು ಎಂದು ಹೇಳಿ ಅದೃಶ್ಯನಾದನು ಭಾನುದಾಸನೂ ಆತನ ತಂದೆ ತಾಯಿಗಳೂ ಎಚ್ಚತ್ತು ತಮ್ಮ ತಮ್ಮ ಸ್ವಪ್ನ ಸಮಾಚಾರವನ್ನು ಪರಸ್ಪರರು ಕೇಳಿ ತಿಳಿದುಕೊಂಡು ಎಲ್ಲರೂ ಅಲ್ಲಿಂದ ಹೊರಟು ಪೈಠಣಕ್ಕೆ ಬಂದು ಮುಟ್ಟಿದರು.

ಭಾನುದಾಸನು ಮಾತಾಪಿತೃಗಳೊಡನೆ ಸುಖ ಸಂತೋಷದಿಂದ ಕಾಲ ಕಳೆಯುತ್ತಿರಲು ಆತನಿಗೆ ಯೌವನ ಪ್ರಾಪ್ತವಾಯಿತು. ಆಗಾತನ

ತಂದೆ-ತಾಯಿಗಳು ಸತ್ಕುಲ ಪ್ರಸೂತೆಯೂ, ಗುಣವಂತೆಯೂ, ರೂಪವಂತೆಯೂ ಆದ ಕನ್ಯೆಯನ್ನು ತಂದು ವಿಜೃಂಭಣೆಯಿಂದ ವಿವಾಹ ಮಹೋತ್ಸವವನ್ನು ನಡೆಸಿದರು. ಅಂದಿನಿಂದಾತನು ಗೃಹಸ್ಥಧರ್ಮವನ್ನು ಸ್ವೀಕರಿಸಿ ಹರಿಸೇವೆಯಲ್ಲಿ ನಿರತನಾಗಿದ್ದನು. ಸಂಪಾದನೆಯ ಕಾರ್ಯಕೈಕೊಳ್ಳದೆ ಇದ್ದ ಧನವನ್ನು ಖರ್ಚುಮಾಡಿ ಅತಿಥಿ ಅಭ್ಯಾಗತರನ್ನು ಸತ್ಕರಿಸುವದೂ, ದಾನಧರ್ಮಗಳನ್ನು ಮಾಡುವದೂ ನಡೆದುಹೋಗಿದ್ದರಿಂದ ಇದ್ದ ಆಸ್ತಿಗಳೆಲ್ಲವೂ ಕಳೆದುಹೋದವು. ಸಂಸಾರ ನಿರ್ವಹಣೆಯು ಕುಂಠಿತವಾಗತೊಡಗಿತು; ಅಷ್ಟರಲ್ಲಿ ಆತನ ತಂದೆ-ತಾಯಿಗಳೂ ಕಾಲಾಧೀನರಾದರು. ತಂದೆತಾಯಿಗಳಿರುವ ವರೆಗೆ ಸಂಸಾರನಿರ್ವಹಣೆಯ ವಿಚಾರವೇ ಆತನಿಗಿರಲಿಲ್ಲ. ಏಕಕಾಲಕ್ಕೆ ಬಡತನ ಪ್ರಾಪ್ತವಾಗಿದ್ದರಿಂದಲೂ, ತಂದೆ ತಾಯಿಗಳು ಕಾಲಾಧೀನರಾಗಿದ್ದರಿಂದಲೂ ಭಾನುದಾಸನಿಗೆ ಕೆಟ್ಟಡವಿಯಲ್ಲಿ ಕಣ್ಣು ಕಟ್ಟಿಬಿಟ್ಟಂತಾಯಿತು. ಸಂಸಾರದ ತಾಪತ್ರಯಗಳು ಒಂದೊಂದಾಗಿ ತಲೆದೋರತೊಡಗಿದವು. ಬರಬರುತ್ತ ಆತನ ಸಂಸಾರವು ಬಹು ಕಠಿಣ ಪರಿಸ್ಥಿತಿಗೆ ಬಂದುಬಿಟ್ಟಿತು. ಭಾನುದಾಸನ ಇಂಥ ಕರುಣಾಜನಕ ಪರಿಸ್ಥಿತಿಯನ್ನು ಕಂಡು ಕೆಲ ಪ್ರಮುಖ ವರ್ತಕರು ಒಂದುಗೂಡಿ ಭಾನುದಾಸನಿಗೆ ಸ್ವಲ್ಪ ಮಟ್ಟಿಗಾದರೂ ಸಹಾಯ ಮಾಡಬೇಕೆಂದು ಆಲೋಚಿಸಿ ನಿರ್ಧರಿಸಿದರು. ಆದರಂತೆ ಅವರು ಭಾನುದಾಸನ ಮನೆಗೆ ಬಂದು ಭಾನುದಾಸನನ್ನು ಕುರಿತು ಭಕ್ತವರ್ಯನೇ ! ನೀನೇನೋ ಪಾಂಡುರಂಗನ ಸ್ಮರಣೆಯಲ್ಲಿ ನಿರತನಾಗಿರುತ್ತೀ; ಆದರೆ ನಿನ್ನ ಸತಿಯು ಸಂಸಾರ ನಿರ್ವಹಣೆಗಾಗಿ ಪಡುತ್ತಿರುವ ಕಷ್ಟ ಅಷ್ಟಿಷ್ಟಲ್ಲ. ಇಂತಿರುವಾಗ ನಾವೊಂದು ಉಪಾಯ ಹೇಳುವೆವು ಕೇಳು, ಆದರಂತೆ ನಡೆದರೆ ಸಂಸಾರ ತಾಪತ್ರಯಗಳಾದರೂ ಕಡಿಮೆಯಾಗುವವು; ಮತ್ತು ನಿನ್ನ ಭಗವತ್ಸೇವೆಗೂ ಆತಂಕವಾಗಲಾರದು. ನಾವೆಲ್ಲರೂ ಕೂಡಿ ಕೆಲವೊಂದು ಹಣವನ್ನು ಶೇಖರಿಸಿಕೊಡುವೆವು; ನೀನು ಆದರಿಂದ ಒಂದು ವ್ಯವಹಾರವನ್ನು ಪ್ರಾರಂಭಿಸು. ಜೀವನೋಪಾಯಕ್ಕಾದರೂ ತಕ್ಕಷ್ಟು ಹಣ ಸಂಪಾದನೆ ಮಾಡಿದರೆ ಮಾತ್ರ ಇಹಲೋಕಯಾತ್ರೆಯು ಸುಸೂತ್ರವಾಗಿ ಸಾಗಬಲ್ಲದು. ಇಲ್ಲವಾದರೆ ನಿನ್ನ ಹೆಂಡರು ಮಕ್ಕಳು ಉಪವಾಸದಿಂದ ಕೊರಗಿ ಕೊರಗಿ ಸತ್ತರೆ ಆ ದೋಷವು ನೀನೆಂಥ

ಭಗವದ್ಭಕ್ತನಾಗಿದ್ದರೂ ನಿನಗೆ ತಪ್ಪದಿರದು ಎಂದು ಹೇಳಿದರು. ಭಾನುದಾಸನು ಪ್ರಾಪಂಚಿಕ ವ್ಯವಹಾರದಲ್ಲಿ ಇಷ್ಟವಿಲ್ಲದಾಗ್ಯೂ ವರ್ತಕರ ಹಿತ ನುಡಿಗಳನ್ನು ಉಲ್ಲಂಘಿಸಲು ಬೇರೊಂದು ಉಪಾಯವಿಲ್ಲದಿರುವದರಿಂದ ಅವರ ಮಾತಿನಂತೆ ನಡೆಯಲು ಒಪ್ಪಿಕೊಂಡನು. ತರುವಾಯ ಆ ವರ್ತಕರು ಹಣಕೂಡಿಸಿ ಆತನಿಗೆ ಕೊಟ್ಟರು. ಭಾನುದಾಸನು ಒಂದು ಅಂಗಡಿಯನ್ನು ಚಾಲೂಮಾಡಿ ಎಲ್ಲ ಪದಾರ್ಥಗಳನ್ನೂ ವಿಕ್ರಯಿಸಲು ಪ್ರಾರಂಭಿಸಿದನು. ಸುಳ್ಳುಹೇಳದೆ ವ್ಯವಹಾರವು ನಡೆಯುವದಿಲ್ಲವಾದರೂ ಸತ್ಯವನ್ನಾಡಿ ಸ್ವಲ್ಪ ಫಾಯದೆಯಿಂದ ಮಾಲು ಮಾರಲು ಪ್ರಾರಂಭಿಸಿದನು. ಇಂತು ಭಾನುದಾಸನು ಮಾಡುತ್ತಿದ್ದ ವ್ಯವಹಾರವು ಜನರ ಮೆಚ್ಚುಗೆಗೆ ಪಾತ್ರವಾಗಿ ಅವನ ವ್ಯವಹಾರವು ಅಭಿವೃದ್ಧಿಗೊಂಡಿತು; ತಕ್ಕಮಟ್ಟಿಗೆ ಧನಸಂಪಾದನೆಯೂ ಆಯಿತು. ಮೊದಲು ವ್ಯವಹಾರ ಪ್ರಾರಂಭಿಸಲು ಯಾರು ಹಣ ಕೊಟ್ಟಿದ್ದರೋ ಅವರೆಲ್ಲರ ಹಣವನ್ನು ಕೊಟ್ಟು ಋಣಮುಕ್ತನಾದನು. ಬರಬರುತ್ತ ವ್ಯವಹಾರವು ಉನ್ನತ ಸ್ಥಿತಿಗೆ ಮುಟ್ಟಿ ಲಕ್ಷಾಂತರ ರೂಪಾಯಿಗಳನ್ನು ಸಂಪಾದನೆ ಮಾಡಿದನು. ದೊಡ್ಡ ವ್ಯಾಪಾರಿಯೆಂದು ಹೆಸರುವಾಸಿಯಾದನು. ಇತರರ ವ್ಯಾಪಾರವು ಸ್ವಲ್ಪ ಕಡಿಮೆಯಾಯಿತು; ಇದರಿಂದ ಕೆಲವರು ಭಾನುದಾಸನಲ್ಲಿ ಅಸೂಯೆಗೊಂಡರು. ಯಾರು ಮೊದಲುಸಲ ಹಣ ಕೊಟ್ಟು ಸಹಾಯ ಮಾಡಿದ್ದರೋ ಅವರೇ ಅವನ ಮೇಲೆ ಮತ್ಸರಪಡಲಾರಂಭಿಸಿದರು. ವ್ಯವಹಾರದಲ್ಲಿಯ ಆತನ ಅಭಿವೃದ್ಧಿಯನ್ನು ಕಂಡು ಸಹಿಸಲಾರದೆ ಹೇಗಾದರೂ ಮಾಡಿ ಇವನ ವ್ಯವಹಾರವನ್ನು ಮುರಿಯಬೇಕೆಂದು ಹೊಂಚುಹಾಕತೊಡಗಿದನು; ಅದಕ್ಕೆ ಕಾರ್ಯಾರಂಭವನ್ನೂ ಕೈಕೊಂಡರು.

ಸಮೀಪದ ಊರಲ್ಲಿ ಒಂದು ದೊಡ್ಡ ಜಾತ್ರೆ ನಡೆಯುತ್ತಿತ್ತು. ಆ ಸಮಯ ಸಾಧಿಸಿ ಆ ವರ್ತಕರು ಭಾನುದಾಸನಲ್ಲಿಗೆ ಬಂದು ಏನಯ್ಯಾ ಭಾನುದಾಸ ಜಾತ್ರೆಗೆ ಅಂಗಡಿಯನ್ನು ಒಯ್ಯುತ್ತೇವೆ; ನೀನೂ ಬರುವಿಯಾ? ಅಲ್ಲಿ ದೇಶದೇಶಗಳಿಂದ ವ್ಯಾಪಾರಸ್ಥರು ಬರುವರು, ವ್ಯವಹಾರವೂ ಚನ್ನಾಗಿ ನಡೆಯುವದು. ಕಾರಣ ನೀನೂ ನಿನ್ನ ಸರಕುಗಳನ್ನು ಹಾಕು ಎಂದು ಹೇಳಿ ಆತನನ್ನು ಬರುವಂತೆ ಕಬೂಲ ಮಾಡಿಸಿ ಕರೆದು

ಕೊಂಡು ಜಾತ್ರೆಗೆ ಹೋದರು. ಎಲ್ಲರೂ ಸಂತೆಯಲ್ಲಿ ಅಂಗಡಿಯನ್ನಾರಂಭಿಸಿ ವ್ಯವಹಾರ ಮಾಡತೊಡಗಿದರು ಎಲ್ಲರಿಗೂ ಅವರವರ ಸರಕುಗಳ ಪ್ರಮಾಣಕ್ಕನುಸರಿಸಿ ಲಾಭಕರವಾದ ವ್ಯಾಪಾರವಾಯಿತು. ಭಾನುದಾಸನಿಗೂ ಲಾಭವುಂಟಾಯಿತು. ಇಂತು ಜಾತ್ರೆಯ ವ್ಯವಹಾರವನ್ನು ಮುಗಿಸಿ ಧನವನ್ನೂ ಉಳಿದ ಸರಕುಗಳನ್ನೂ ಗಂಟುಕಟ್ಟಿ ಕುದುರೆಯಮೇಲೆ ಹೇರಿ, ಹಿಂತಿರುಗಿ ಪೈಠಣಕ್ಕೆ ಹೊರಟರು. ದಾರಿಯಲ್ಲಿಯೇ ಹೊತ್ತು ಮುಳುಗಲು ಅಲ್ಲಿಯೇ ಸಮೀಪದಲ್ಲಿದ್ದ ಒಂದು ಊರಲ್ಲಿ ವಸ್ತಿಮಾಡಿದರು ರಾತ್ರಿ ಊಟಮಾಡಿದ ನಂತರ ಭಾನುದಾಸನು ಊರಲ್ಲಿ ಹರಿಕಥಾ ಪ್ರಸಂಗವನ್ನು ಓರ್ವ ಭಾಗವತನು ಮಾಡುವನೆಂಬುದನ್ನು ಮೊದಲೇ ಕೇಳಿದವನಾಗಿದ್ದರಿಂದ ತಾನಲ್ಲಿಗೆ ಹೋಗಿ ಕಥಾ ಶ್ರವಣ ಮಾಡಬೇಕೆಂದು ನಿರ್ಧರಿಸಿ, ಇತರರನ್ನು ಕರೆದನು. ಆದರೆ ಅವರಾರೂ ಬರಲೊಪ್ಪಲಿಲ್ಲ. ಆ ಭಾನುದಾಸನು ತನ್ನ ಸರಕಿನ ಮೂಟೆಗಳನ್ನೂ ಕುದುರೆಗಳನ್ನೂ ಅವರಿಗೆ ಒಪ್ಪಿಸಿ, ತಾನೊಬ್ಬನೆ ಕೀರ್ತನೆ ನಡೆಯುತಕ್ಕ ಸ್ಥಳಕ್ಕೆ ಹೋಗಿ ಏಕ ಚಿತ್ತದಿಂದ ಪರಮಾತ್ಮನ ಕಥಾಶ್ರವಣ ಮಾಡುತ್ತಿದ್ದನು.

ಇತ್ತ ಭಾನುದಾಸನ ಸಂಗಡಿಗ ವರ್ತಕರು ಭಾನುದಾಸನಿಲ್ಲದ ಸಮಯಸಾಧಿಸಿ, ದುರಾಲೋಚನೆಯಿಂದ ಆತನ ಕುದುರೆಗಳನ್ನು ಬಿಚ್ಚಿ ಹೊಡೆದೋಡಿಸಿದರು. ಗಂಟುಗಳನ್ನೆತ್ತಿ ಒಯ್ದು ಒಂದು ಭಾವಿಯಲ್ಲಿ ಚಲ್ಲಿ ಬಂದು ಏನೂ ಅರಿಯದವರಂತೆ ಮಲಗಿದರು. ಅಲ್ಲಿಯೇ ಅವರು ನಿದ್ರಾ ಪರವಶರಾದರು.

ಅತ್ತ ಭಾನುದಾಸನು ಬೆಳಗಿನ ಕೋಳಿ ಕೂಗುವತಕ, ತನ್ನ ಗಂಟು ಮೂಟೆಗಳನ್ನೆಲ್ಲ ಮರೆತು, ಕಥಾ ಶ್ರವಣದಲ್ಲಿ ಲೀನನಾಗಿದ್ದನು ಇಂಥ ಭಕ್ತನಿಗುಂಟಾಗಿದ್ದ ಹಾನಿಯನ್ನು ತುಂಬಿಕೊಡುವ ಉದ್ದೇಶದಿಂದ ಭಕ್ತವತ್ಸಲನಾದ ಪಾಂಡುರಂಗನು ಕೂಡಲೆ ಬಂದು ಭಾವಿಯಲ್ಲಿ ಬಿದ್ದಿದ್ದ ಗಂಟುಗಳನ್ನು ಮೇಲಕ್ಕೆತ್ತಿ, ಓಡಿಹೋಗಿದ್ದ ಕುದುರೆಗಳನ್ನು ಹಿಡಿದು ತಂದು ಅವುಗಳನ್ನು ವರ್ತಕರಿದ್ದಲ್ಲಿಯೇ ತಂದು ಮಗ್ಗುಲಲ್ಲಿ ಅವುಗಳನ್ನು ನಿಲ್ಲಿಸಿ ತಾನು ಕಾಯತೊಡಗಿದನು. ಮತ್ತು ದುರ್ಮಾರ್ಗಿಗಳಾದ ಆ ವರ್ತಕರ ಗಂಟುಗದಡಿಗಳನ್ನೆಲ್ಲ ಕಳ್ಳರು ಕದ್ದೊಯ್ಯುವಂತೆ ಮಾಡಲು ಕೆಲಜನ ಕಳ್ಳರು ಬಂದು ಅವರನ್ನು ಚನ್ನಾಗಿ ಬಡಿದು ಅವರ ಸಾಮಾನುಗಳನ್ನೆಲ್ಲ

ಕದ್ದೊಯ್ದರು. ಅಷ್ಟೊತ್ತಿಗೆ ಭಾನುದಾಸನು ಕೀರ್ತನೆಯನ್ನು ಮುಗಿಸಿಕೊಂಡು ಬಂದನು. ಆಗಲ್ಲಿ ಆತನ ಸಾಮಾನುಗಳನ್ನು ಕಾಯುತ್ತ ನಿಂತಿದ್ದ ಭಗವಂತನು ಎಲೈ ಭಾನುದಾಸ ನಿನ್ನ ಸಾಮಾನುಗಳನ್ನೂ ಕುದುರೆಗಳನ್ನೂ ಇನ್ನು ನೋಡಿಕೊಂಡಿರು, ಎಂದು ಹೇಳಿ ಅದೃಶ್ಯನಾದನು. ಆಗಾ ವರ್ತಕರಿಗೆ ಅರಿವುಂಟಾಯಿತು. ಅಯ್ಯೋ ನಾವೆಂಥ ತಪ್ಪು ಮಾಡಿದೆವು. ಭಾನುದಾಸನೊಡನೆ ನಾವೂ ಕೀರ್ತನ ಕೇಳಲು ಹೋಗಿದ್ದರೆ ನಮ್ಮ ಸಾಮಾನುಗಳನ್ನು ಭಗವಂತನೇ ಕಾಯುತ್ತಿದ್ದನು. ಅದನ್ನು ಬಿಟ್ಟು ದುರ್ಬುದ್ಧಿಯಿಂದ ಭಾನುದಾಸನಿಗೆ ಹಾನಿಯನ್ನುಂಟು ಮಾಡಬೇಕೆಂದು ಆಲೋಚಿಸಿದ್ದರಿಂದಲೇ ನಮ್ಮ ಸಾಮಾನುಗಳ ಕಳವಾದವು ಎಂದು ಹಳಹಳಿಸಿ ಭಾನುದಾಸನಲ್ಲಿಗೆ ಬಂದು ನಡೆದ ಸಮಾಚಾರವನ್ನು ತಿಳಿಸಿ ಆತನ ಕ್ಷಮೆ ಕೇಳಿಕೊಂಡರು ಆಗ ಭಾನುದಾಸನವರಿಗೆ ವಿವೇಕ ವುಂಟಾಗುವಂತೆ ಸದ್ವಿಷಯಗಳನ್ನು ತಿಳಿಸಿ ಹೇಳಿ ಸಮಾಧಾನಪಡಿಸಿದನು. ತರುವಾಯ ಎಲ್ಲರೂ ಕೂಡಿ ಪೈಠಣಕ್ಕೆ ಬಂದು ಮುಟ್ಟಿದರು.

ಒಂದು ದಿನ ವಿಜಯನಗರದ ರಾಜನು, ಸಾವಂತ ರಾಜರಿಂದಲೂ ಪುರಜನರಿಂದಲೂ, ಮಂತ್ರಿವರ್ಯರಿಂದಲೂ ತುಂಬಿದ ಆಸ್ಥಾನದಲ್ಲಿ ರಾಜನು ವಿರಾಜಮಾನನಾಗಿದ್ದನು. ಆ ವೇಳೆಗೆ ಪಂಡರಪುರ ಯಾತ್ರಾರ್ಥವಾಗಿ ಹೋಗಿದ್ದ ಕೆಲ ಜನ ಬ್ರಾಹ್ಮಣರು ಆ ಸ್ಥಾನಕ್ಕೆ ಬಂದರು. ಅವರಿಗೆ ರಾಜನು ತಕ್ಕ ಆಸನದಲ್ಲಿ ಕುಳಿತುಕೊಳ್ಳಲು ತಿಳಿಸಲು ಅವರಲ್ಲಿ ವಿರಾಜಮಾನರಾದರು. ಅವರೊಡನೆ ಮಾತುಕತೆಗಳನ್ನಾಡುತ್ತಿರಲು ಪ್ರಸ್ತಾಪವಶದಿಂದ ಶ್ರೀ ಪಾಂಡುರಂಗ ಕ್ಷೇತ್ರ ಮಹಿಮೆಯನ್ನೂ, ಪುಂಡರೀಕ ವರದ ವಿಠ್ಠಲನ ವೈಭವವನ್ನೂ ವರ್ಣಿಸಲು, ರಾಜನು ಆನಂದದಿಂದ ಕೇಳಿದಬಳಿಕ ಆತನಲ್ಲಿ ಪಂಡರೀಪುರಯಾತ್ರೆ ಮಾಡಬೇಕೆಂಬ ಕುತೂಹಲ ಉಂಟಾಯಿತು. ಬಂದಿದ್ದ ಬ್ರಾಹ್ಮಣರಿಗೆ ತಕ್ಕ ಮರ್ಯಾದೆಮಾಡಿ ಕಳಿಸಿದನು. ಮರುದಿನವೇ ಪಂಡರೀಪುರಕ್ಕೆ ತಕ್ಕ ಪರಿವಾರದೊಂದಿಗೆ ಪ್ರಯಾಣ ಬೆಳೆಸಿದನು. ಕೆಲದಿನ ಪ್ರಯಾಣದ ನಂತರ ರಾಜನು ಚಂದ್ರಭಾಗಾ ನದಿಗೆ ಬಂದು ಮುಟ್ಟಿದನು ನದಿಯಲ್ಲಿ ಸ್ನಾನಮಾಡಿ ಶ್ರೀ ಪಾಂಡುರಂಗ ವಿಠ್ಠಲನ ದರ್ಶನಪಡೆದು ಅತ್ಯಾನಂದಭರಿತನಾದನು. ಬ್ರಾಹ್ಮಣರು ವರ್ಣಿಸಿದ

ವೈಭವಕ್ಕಿಂತಲೂ ಅಧಿಕವಾದ ಸುಂದರ ವೈಭವವನ್ನು ಕಣ್ಣಾರೆ ಕಂಡು ಆನಂದಿಸುತ್ತಿದ್ದನು. ಇಂತಿರುವಾಗ ಅವನಿಗೊಂದು ಯೋಚನೆ ಹೊಳೆಯಿತು ಈ ಪರಮಾತ್ಮನ ದಿವ್ಯಸೇವೆಯು ನಿತ್ಯವೂ ದೊರೆಯಬೇಕಾದರೆ, ಈ ಮೂರ್ತಿಯನ್ನು ರಾಜಧಾನಿಗೊಯ್ದರೆ ನನ್ನ ಬಯಕೆ ಪೂರೈಸುವದೆಂದು ಆಲೋಚಿಸಿ, ಭಯಭಕ್ತಿಯಿಂದ ಆತನನ್ನು ಕುರಿತು ಪ್ರಾರ್ಥಿಸಲು, ಆ ಭಕ್ತವತ್ಸಲನಾದ ಭಗವಂತನು ಪ್ರಸನ್ನನಾಗಿ, ಎಲೈ ರಾಜನೆ! ನಿನ್ನಿಚ್ಛೆಯಂತೆ ನಿನ್ನ ರಾಜಧಾನಿಯಲ್ಲಿ ಒಂದು ನೆಲೆಸುವೆನು. ಆದರೆ, ನಿನ್ನರಾಜ್ಯದಲ್ಲಿ ನಿನ್ನಿಂದೇನಾದರೂ ಅನ್ಯಾಯವಾದರೆ, ಅಂದೇ ನಿನ್ನ ನಗರವನ್ನು ಬಿಟ್ಟು ತೆರಳುವೆನು ಲಕ್ಷದಲ್ಲಿರಲಿ ಎಂದು ಹೇಳಿ ಆತನನ್ನು ಕಳುಹಿಸಿ ಕೊಟ್ಟನು. ರಾಜನು ರಾಜಧಾನಿಗೆ ಬಂದು ಅರಮನೆಯ ಎದುರಿನಲ್ಲಿಯೇ ಒಂದು ಸುಂದರವಾದ ಮಂದಿರವನ್ನು ಕಟ್ಟಿಸಿ ಸಾನ್ನಿಧ್ಯಕ್ಕಾಗಿ ಪ್ರಾರ್ಥಿಸಲು ಆ ಭಕ್ತವತ್ಸಲನಾದ ಭಗವಂತನು, ವಚನಕೊಟ್ಟಂತೆ ಅಲ್ಲಿಗೆ ಬಂದು ನೆಲೆಸಿ ಅರಸನನ್ನು ಸಂತೋಷಪಡಿಸಿದನು. ಪ್ರತಿದಿನವೂ ಅಮೌಲ್ಯವಾದ ವಸ್ತ್ರಾಭರಣಗಳಿಂದಲೂ, ಷೋಡಶೋಪಚಾರಗಳಿಂದಲೂ, ಧೂಪದೀಪಾದಿಗಳಿಂದಲೂ ಸ್ವಾಮಿಯನ್ನು ಸೇವಿಸಿ ನಂತರ ಮಂದಿರದ ಬಾಗಿಲು ಮುಚ್ಚಿ ಬೀಗಹಾಕಿ ಬೀಗದಕೈಯನ್ನು ತನ್ನವಶದಲ್ಲಿಯೇ ಇರಿಸಿಕೊಂಡು, ಪೂಜಾದಿ ಮಂದಿರದ ಎಲ್ಲ ಕಾರ್ಯಗಳನ್ನೂ ತಾನೇ ನೋಡಿಕೊಳ್ಳುತ್ತಿದ್ದನು.

ಅತ್ತ ಪಂಡರಪುರದಲ್ಲಿ ದೇವರ ಸಾನ್ನಿಧ್ಯವು ಮಂದಿರದಲ್ಲಿರದ್ದರಿಂದ ಅನೇಕ ಭಕ್ತರು ನೊಂದುಕೊಂಡು ದರ್ಶನಕ್ಕಾಗಿ ಹಂಬಲಿಸುತ್ತಿದ್ದರು ಸ್ಥಳಿಕರೂ ಪರಸ್ಥಳದವರೂ ಮುಂತಾದ ಅಸಂಖ್ಯಾತ ಭಕ್ತರು ಪಾಂಡುರಂಗನ ಅಗಲುವಿಕೆಯನ್ನು ಸಹಿಸಲಾರದೆ ಹಲವು ಬಗೆಯಾಗಿ ಹಂಬಲಿಸುತ್ತಿದ್ದರು ಪಾಂಡುರಂಗ ಪರಮಾತ್ಮನನ್ನು ಕುರಿತು ದೇವಾ! ನೀನೆಲ್ಲಿರುವಿ; ಬಂದು ದರ್ಶನವನ್ನಿತ್ತು ನಮ್ಮನ್ನುದ್ಧರಿಸು ಎಂದು ಪ್ರಾರ್ಥಿಸುತ್ತಿದ್ದರು.

ಇಂತಿರಲು ಮೂರನೇ ದಿನ ಪೈಠಣದ ಭಾನುದಾಸರು ಪಂಡರಪುರಕ್ಕೆ ಬಂದು ಚಂದ್ರಭಾಗಾ ನದಿಯಲ್ಲಿ ಸ್ನಾನಮಾಡಿ, ದೇವಾಲಕ್ಕೆ ಬಂದು ಪ್ರದಕ್ಷಿಣೆ ಮಾಡುತ್ತಲಿದ್ದರು. ಆಗ ಅವನ ಪರಿಚಯ ಬಲ್ಲವರು ಆತನಲ್ಲಿಗೆ ಬಂದು, ಮಹಾನುಭಾವಾ! ಯಾವಕಾರಣದಿಂದಲೋ ಪಾಂಡು

ರಂಗ ಪ್ರಭುವು ಮೂರು ದಿನಗಳಿಂದ ಅದೃಶ್ಯನಾಗಿದ್ದಾನೆ. ನಮ್ಮಂಥವರಿಗೆ ಗೋಚರಿಸಬಾರದೆಂದು ಮಾಯವಾಗಿರುವನೋ ಏನೋ ನಮಗಂತೂ ತಿಳಿಯದು; ಅದನ್ನು ನೀನೇ ತಿಳಿದು ಮುಂದಿನ ಕರ್ತವ್ಯವನ್ನರುಹು ಎಂದು ಬೇಡಿಕೊಂಡರು. ಅವರ ಮಾತಿಗೆ ಭಾನುದಾಸನು ಆಚ್ಚರಿಗೊಂಡು ಮಂದಿರದ ಒಳಹೊಕ್ಕು ನೋಡಲು ಪಾಂಡುರಂಗಮೂರ್ತಿಯು ಗೋಚರವಾಗಲಿಲ್ಲ. ಆಗಾತನು ತನ್ನ ಜ್ಞಾನದೃಷ್ಟಿಯಿಂದ ನೋಡಿ ಎಲ್ಲವನ್ನೂ ತಿಳಿದು ನಡೆದ ಸಮಾಚಾರವನ್ನು ಆ ಭಕ್ತ ಜನರಿಗೆ ತಿಳಿಸಿ ಶ್ರೀ ಪಾಂಡುರಂಗನು ರಾಮರಾಜನೆಂಬ ವಿಜಯನಗರದ ರಾಜನ ಭಕ್ತಿಗೆ ಮೆಚ್ಚಿ ಅವನ ಇಷ್ಟದಂತೆ ವಿಜಯನಗರಕ್ಕೆ ತೆರಳಿ ಅಲ್ಲಿ ಸಾನ್ನಿಧ್ಯ ಮಾಡಿರುವನು. ಆಗ ಆ ರಾಜನಿಗಿಂತ ನೂರು ಪಾಲು ಭಕ್ತಿಯುಳ್ಳವರು ಅಲ್ಲಿ ತೆರಳಿ ಶ್ರೀ ಪಾಂಡುರಂಗನನ್ನು ಪ್ರಾರ್ಥಿಸಿ ಪುನಃ ಇಲ್ಲಿಗೆ ಬರಮಾಡಿಕೊಳ್ಳಬೇಕು ಎಂದು ಹೇಳಿದನು. ಆಗ ಅಲ್ಲಿ ನೆರೆದಿದ್ದ ಭಕ್ತ ಜನಸಮೂಹವು ಏಕ ಕಂಠದಿಂದ ಮಹಾನುಭಾವರಾದ ಭಾನುದಾಸರೇ ! ಅಂಥ ಸಾಹಸದ ಕಾರ್ಯಕ್ಕೆ ನೀವಲ್ಲದೆ ಮತ್ತಾರೂ ಅರ್ಹರಾಗಲಾರರು; ಆದ ಕಾರಣ ನಮ್ಮೆಲ್ಲರ ಬೇಡಿಕೆಯನ್ನು ನೀವು ಮನ್ನಿಸಿ ನೀವೇ ಆ ಮಹಾಕಾರ್ಯವನ್ನು ಪೂರೈಸಬೇಕೆಂದು ಬೇಡಿಕೊಂಡರು. ಆಗಾಭಾನುದಾಸರು ತನ್ನಲ್ಲಿಯೇ ಇಂತು ಯೋಚಿಸಿದನು; ಈ ಕಾರ್ಯವು ಅಸಾಧಾರಣವಾದುದು. ಆದರೂ ಆತನ ದರ್ಶನ ಲಾಭವಾದರೂ ದೊರೆಯುವದರಿಂದ ನಾನೀ ಕಾರ್ಯ ವಹಿಸಿಕೊಳ್ಳುವೆನು. ಅದರ ಯಶಾಪಯಶಗಳು ಆತವನ್ನೇ ಅವಲಂಬಿಸಿವೆ ಎಂದು ನಿರ್ಧರಿಸಿ ತನ್ನ ಸಮ್ಮತಿಯನ್ನು ಸಾಧುಸಂತರಿಗೆ ತಿಳಿಸಿ, ಅವರೆಲ್ಲರಿಗೂ ನಮಸ್ಕರಿಸಿ ಅದರಿಂದ ಬೀಳ್ಕೊಂಡು ಅಲ್ಲಿಂದ ತೆರಳಿದನು.

ಭಕ್ತಿ, ಜ್ಞಾನ, ವೈರಾಗ್ಯಗಳ ಸಾಧನ ಸಂಪತ್ತಿನಿಂದ ಕಂಗೊಳಿಸತಕ್ಕ ಮಹಾನುಭಾವರಲ್ಲಿ ಭಾನುದಾಸನು ಅಗ್ರಗಣ್ಯನು, ನಿಜ ಗುಣವಂತನು. ಇವನು ದಾರಿಯುದ್ದಕ್ಕೂ ಪಾಂಡುರಂಗನ ಪ್ರಭಾವವನ್ನು ಹೇಳುತ್ತ, ಆನಂದಿಸುತ್ತ ನಿರಾಯಾಸವಾಗಿ ದಾರಿ ನಡೆದು ವಿಜಯನಗರವನ್ನು ತಲುಪಿದನು. ರಾಜಧಾನಿಯಾಗಿದ್ದ ಆ ನಗರದ ವಿಶಾಲ ಬೀದಿಗಳ ಇಕ್ಕಡೆಗಳಲ್ಲಿಯೂ, ಸುಗಂಧವನ್ನು ಸುರಿಸುತ್ತಿದ್ದ ಗಿಡಬಳ್ಳಿಗಳಿಂದಲೂ

ರಥ, ಗಜ, ತುರಗ ಪದಾತಿಗಳೆಂಬ ಚತುರಂಗಬಲದ ಹರಿದಾಟದಿಂದಲೂ, ಎಡೆಬಿಡದೆ ಓಡಾಡುತ್ತಿದ್ದ ಜನಸಂದಣಿಯಿಂದಲೂ ತುಂಬಿ ಕುಳುಕುತ್ತಿದ್ದಿತು. ಇಂಥ ಸಡಗರದ ಬೀದಿಯಲ್ಲಿ ನಿಶ್ಚಲ ಮನೋಭಾವದಿಂದ ನಡೆದಿದ್ದ ಭಾನುದಾಸನು ಅಲ್ಲಿಯ ಜನರನ್ನು ವಿಚಾರಿಸುತ್ತ ಶ್ರೀ ವಿಠ್ಠಲನ ಸಾನಿಧ್ಯವುಳ್ಳ ಮಂದಿರಕ್ಕೆ ಬಂದು ತಲುಪಿದನು. ಆಗ ಅಲ್ಲಿ ಯಾರೂ ಇರಲಿಲ್ಲ; ದೇವಾಲಯದ ಬಾಗಿಲುಗಳು ಬೀಗಮುದ್ರೆಯಿಂದ ಭದ್ರಪಡಿಸಲ್ಪಟ್ಟಿದ್ದವು. ಆಗಾ ಭಾನುದಾಸನು ಹೃದಯದಿಂದುಕ್ಕುವ ಭಕ್ತಿಭಾವದಿಂದ ಓ ಪಾಂಡುರಂಗ ಪರಮಾತ್ಮನೇ, ನಿನಗೆ ನನ್ನಲ್ಲಿ ನಿಜವಾದ ಕರುಣೆಯಿದ್ದರೆ ನಿನ್ನ ಚರಣ ದರ್ಶನವನ್ನಿತ್ತು ಕರುಣಿಸು. ನಿನ್ನ ಅನುಮತಿಯಿಲ್ಲದೆ ಯಾವ ಕಾರ್ಯವೂ ನಡೆಯದಿರುವಾಗ ನಾನೇನು ಮಾಡಬಲ್ಲೆನು. ನೀನು ಸರ್ವಜ್ಞನು, ನಿನಗೆ ನನ್ನ ಹೃದಯದಂತರಂಗವು ತಿಳಿಯದಿರದು. ಇಂತಿರುವಾಗ ನಿನ್ನ ಚರಣಸೇವಕನಿಗೆ ಕರುಣೆಯನ್ನೀಡು ಎಂದು ಬೇಡಿಕೊಂಡು ಕರಮುಗಿದು ಬೇಡಿಕೊಂಡನು. ಕೂಡಲೇ ಬಾಗಿಲಿಗೆ ಬಡಿದಿದ್ದ ಬೀಗಮುದ್ರೆಗಳು ಭಗವಂತನ ಲೀಲಾವಿಲಾಸಗಳಿಂದ ತನ್ನಿಂದ ತಾನೆ ಬಿಚ್ಚಿ ಬಾಗಿಲುಗಳು ತೆರೆದುಕೊಂಡವು. ಆಗಾ ಭಾನುದಾಸನು ಅತ್ಯಂತ ಆನಂದದಿಂದ ಮಂದಿರದಲ್ಲಿ ಪ್ರವೇಶಿಸಿ ಶ್ರೀ ಪಾಂಡುರಂಗನ ಪಾದಸನ್ನಿಧಿಗೆ ಬಂದು ನಿಂತು, ದಂಡವತ್ತ ನಮಸ್ಕಾರಗಳನ್ನು ಮಾಡಿ ಹಲವು ಬಗೆಯಿಂದ ಪ್ರಾರ್ಥಿಸುತ್ತಿರಲು ಶ್ರೀ ಪಾಂಡುರಂಗನು ಪ್ರಸನ್ನನಾಗಿ ಭಾನುದಾಸ! ನೀನು ಪರಮಭಕ್ತನು, ನಿತ್ಯವೂ ನಿನ್ನ ಹೃದಯದಲ್ಲಿ ನನ್ನನ್ನು ನೋಡುತ್ತಿದ್ದರೂ ಭಕ್ತ ಜನರಿಗೆಲ್ಲರಿಗೂ ನಿತ್ಯವೂ ನನ್ನ ದರ್ಶನವು ಸುಲಭವಾಗಿ ಲಭಿಸಲೆಂಬ ಆಶೆಯಿಂದ ನೀನಿಷ್ಟು ಕಷ್ಟಪಟ್ಟು ಇಲ್ಲಿಗೆ ಬಂದಿರುವಿ ಎಂಬುದು ನನಗೆ ಗೊತ್ತು; ಆದರೆ ನನ್ನನ್ನು ನೀನು ಕರೆದೊಯ್ಯಬೇಕಾದರೆ ನೀನಿನ್ನೂ ಹೆಚ್ಚಿನ ಕಷ್ಟಸಹಿಸಬೇಕಾಗುವದು. ಕಾರಣ ನೀನು ಸುಮ್ಮನೇ ಪರತು ಹೋಗುವದೊಳಿತು ಎಂದು ಆತನ ಮನೋನಿಶ್ಚಯವನ್ನು ಅಳೆದುನೋಡಲು ಹೇಳಿದನು. ಭಾನುದಾಸನು— ಪ್ರಭೂ! ನೀನು ಬರುವದಕ್ಕಾಗಿ ನಾನು ಕಷ್ಟಪಡಬೇಕಾಗಿದ್ದರೆ ನನ್ನ ಪ್ರಾಣಾಂತ್ಯದವರೆಗೂ ಎಂಥ ಕಷ್ಟಗಳನ್ನಾದರೂ ಸಹಿಸಬಲ್ಲೆನು. ನನ್ನೊಬ್ಬನ ಕಷ್ಟಗಳನ್ನಾದರೂ ಸಹಿಸಬಲ್ಲೆನು. ನನ್ನೊಬ್ಬನ ಕಷ್ಟದಿಂದ ಸಹಸ್ರಾರು

ಸದ್ಭಕ್ತರು ನಿನ್ನ ದರ್ಶನದ ಸುಖಾನಂದವನ್ನು ಅನುಭವಿಸಿದರೆ ಸಾಕು ನನಗೆ ತೃಪ್ತಿಯಾಗುವದು ಎಂದು ಉತ್ತರವಿತ್ತನು. ಆಗ ಆ ಭಕ್ತವತ್ಸಲನು- ಎಲೈ ಸಾಧುವೇ ಕೇಳು, ಈ ರಾಜನು ತನ್ನ ಭಕ್ತಿಯಿಂದ ನನ್ನನ್ನು ಮೆಚ್ಚಿಸಿ ಇಲ್ಲಿಗೆ ಕರೆತರುವಾಗ್ಗೆ ಆತನಿಗೊಂದು ನಿರ್ಬಂಧವನ್ನು ಹೇರಿರುವೆನು. ಅದೇನಂದರೆ, ನಿನ್ನಿಂದ ಏನಾದರೂ ನನಗೆ ಅನ್ಯಾಯವಾಯಿತೆಂದರೆ ಆ ಕ್ಷಣದಲ್ಲಿಯೇ ಇಲ್ಲಿಂದ ತೆರಳುವೆನೆಂದು ಹೇಳಿರುವೆನು. ಕಾರಣ ನಿನ್ನ ಕಂಠದಲ್ಲಿ ಇಕೋ ಈ ಹಾರವನ್ನು ಹಾಕುವೆನು; ಇದನ್ನು ಧರಿಸಿ ನೀನಿಲ್ಲಿಂದ ಬೇಗನೆ ತೆರಳು. ಪಂಢರಪುರವನ್ನು ಮುಟ್ಟುವದರೊಳಗಾಗಿ ನಿನ್ನನ್ನು ಬಂದು ಕೂಡುವೆನು ಎಂದು ಹೇಳಿ, ತನ್ನ ಕೊರಳಲ್ಲಿಯ ಹಾರತೆಗೆದು ಭಾನು ದಾಸನ ಕೊರಳಿಗೆ ಹಾಕಿ ಆಶೀರ್ವದಿಸಿ ಕಳಿಸಿಕೊಟ್ಟನು. ಭಾನುದಾಸನು ಮಂದಿರದಿಂದ ಹೊರಬೀಳುತ್ತಲೇ ಮೊದಲಿನಂತೆ ಬಾಗಿಲುಗಳು ಮುಚ್ಚಿ ಕೊಂಡು ಬೀಗಮುದ್ರೆಗಳು ಭದ್ರವಾಗಿ ಹಾಕಲ್ಪಟ್ಟವು; ಶ್ರೀ ವಿಠ್ಠಲನು ಎಂದಿನಂತೆ ಮೂರ್ತಿರೂಪ ಧರಿಸಿದನು.

ಕೆಲ ಸಮಯದ ನಂತರ ರಾಜನು ಪೂಜಾ ಸಮಯಕ್ಕೆ ಪರಿಶುದ್ಧನಾಗಿ ಪೂಜಾ ದ್ರವ್ಯಗಳನ್ನು ಹಿಡಿದುಕೊಂಡು ಬಂದು ಬೀಗಮುದ್ರೆಗಳನ್ನು ಬಿಚ್ಚಿಸಿ ಮಂದಿರವನ್ನು ಪ್ರವೇಶಿಸಿ ಪೂಜೆಗಾರಂಭಿಸಿದನು. ಆಗ ವಿಗ್ರಹದ ಕೊರಳ ಲ್ಲಿಯ ಹಾರವು ಕಾಣಲಿಲ್ಲ; ರಾಜನು ಆಶ್ಚರ್ಯಗೊಂಡು ಅತ್ತಿತ್ತ ನೋಡಿದನು ಎಲ್ಲಿಯೂ ಹಾರವು ಕಾಣಲಿಲ್ಲ. ಆಗ ಕಾವಲಿನ ಭಟರನ್ನು ಕರೆದು ವಿಚಾರಿ ಸಿದನು; ಆದರೆ ತಮಗೆ ಆ ವಿಷಯವೇ ಗೊತ್ತಿಲ್ಲವೆಂದು ಹೇಳಿದರು. ಆಗ ರಾಜನಿಗೆ ಮಹಾಕ್ರೋಧ ಉಂಟಾಯಿತು. ನಗರವನ್ನೂ, ರಾಜ್ಯದ ಇನ್ನಿತರ ಎಲ್ಲೆಡೆಯಲ್ಲಿಯೂ ಜಾಗರೂಕತೆಯಿಂದ ಹಾರವನ್ನು ಹುಡುಕಿ ತಂದೊಪ್ಪಿ ಸಲೇಬೇಕೆಂದು ಸೈನಿಕರಿಗೆ ಆಜ್ಞೆಮಾಡಿದನಲ್ಲದೆ ಇಂಥ ನೀಚಕಾರ್ಯ ಮಾಡಿದವನನ್ನು ಸಹ ಹಿಡಿದುತರಲು ಆಜ್ಞೆಮಾಡಿದನು.

ಮಂದಿರದಿಂದ ಹೊರಬಿದ್ದು ಹೊರಟಿದ್ದ ಭಾನುದಾಸನು ನಗರ ವನ್ನು ಬಿಟ್ಟು ತುಂಗಭದ್ರಾ ಪ್ರದೇಶವನ್ನು ಸೇರಿ ಅಲ್ಲೊಂದು ಕಡೆ ರಮ್ಯ ವಾಗಿಯೂ, ಸುಂದರವಾಗಿಯೂ ಕಂಗೊಳಿಸುತ್ತಿದ್ದ ಪ್ರದೇಶದಲ್ಲಿ ನಿಂತು

ಸ್ನಾನಾದಿಗಳನ್ನು ಪೂರೈಸಿಕೊಂಡು ಪದ್ಮಾಸನಾರೂಢನಾಗಿ ಕುಳಿತು ಪರಮಾತ್ಮನ ಧ್ಯಾನದಲ್ಲಿ ನಿರತನಾಗಿದ್ದನು.

ರಾಜಾಜ್ಞೆಯಂತೆ ಹಾರವನ್ನು ಹುಡುಕಲು ಹೊರಟಿದ್ದವರಲ್ಲಿ ಕೆಲವರು, ತುಂಗಭದ್ರಾ ತೀರದಲ್ಲಿ ಹುಡುಕುತ್ತಾ ಹೊರಟಿದ್ದರು. ಧ್ಯಾನಶೀಲನಾಗಿ ಕುಳಿತಿದ್ದ ಭಾನುದಾಸನನ್ನು ಕಂಡರು. ಆತನ ಕೊರಳಲ್ಲಿರುವ ರತ್ನಹಾರವನ್ನೂ ಕಂಡರು. ಕೂಡಲೇ ಅವನ ಮೇಲೆ ಏರಿಹೋಗಿ ಆತನನ್ನು ಹಿಡಿದು ಕಠಿಣವಾಗಿ ಬೈದು, ಬಡಿದು, ರಾಜನಲ್ಲಿಗೆ ಎಳೆದೊಯ್ದರು. ರಾಜನು ಆತನ ಕಂಠದಲ್ಲಿದ್ದ ಹಾರವನ್ನು ಕಂಡು ಕ್ರೋಧಗೊಂಡು, ಹಿಂದು ಮುಂದಿನ ಯೋಚನೆಯನ್ನೇ ಮಾಡದೆ. ಎಲೈ ದುರಾತ್ಮನೆ ದೇವರ ಸನ್ನಿಧಿಯಲ್ಲಿಯೂ ಅಂಜದೆ ಆತನ ಕೊರಳಲ್ಲಿಯ ಹಾರವನ್ನು ಕದ್ದ ನೀನು, ಯಾವ ಕಾರ್ಯ ಮಾಡುವದಕ್ಕೂ ಹಿಂಜರಿಯಲಾರೆ ಎಂದಮೇಲೆ ನಿನ್ನನ್ನು ಕ್ಷಮಿಸಲಾರೆ ಎಂದು ನುಡಿದು, ಭಟರನ್ನು ನೋಡಿ, ಈತನನ್ನು ಎಳೆದೊಯ್ದು ನೇಣು ಹಾಕಿ ಕೊಲ್ಲಿರಿ. ಎಂದಾಜ್ಞೆ ಮಾಡಿ ಅಂತಃಪುರಕ್ಕೆ ತೆರಳುತ್ತಲಿದ್ದನು. ಆಗ ಆ ಭಾನುದಾಸನು ಹೇ....ಸ್ವಾಮೀ, ವಿಶ್ವನಾಟಕ ಸೂತ್ರಧಾರೀ ನಿನ್ನ ಮಾಯಾನಟನೆಯನ್ನು ಅರಿತವರಾರು ? ಎಲ್ಲವೂ ನಿನ್ನ ಸಂಕಲ್ಪವಾಗಿರುವಾಗ ನಾನೇನು ಮಾಡಬಲ್ಲೆ ! ಎಂದು ನುಡಿಯುತ್ತಿರಲು ಪಾಂಡುರಂಗನು ನಿಜರೂಪದಿಂದ ಪ್ರಸನ್ನನಾಗಿ–ಎಲೈ ದೊರೆಯೇ, ನಿನಗೆ ನಾನು ಕೊಟ್ಟಿದ್ದ ವಾಗ್ದಾನವು ಇಂದಿಗೆ ಪೂರೈಸಿತು. ಎಂದು ನಿನ್ನಿಂದ ಅಪರಾಧವಾಗುವದೋ ಅಂದೇ ನಿನ್ನ ಗಾವು ಬಿಡುವೆನೆಂದು ಹೇಳಿದಂತೆ, ಇಂದು ನಿರಪರಾಧಿ ಭಾನುದಾಸನನ್ನು ಬಂಧಿಸಿ, ಆತನಿಗೆ ಜೀವಂತ ಶಿಕ್ಷೆ ವಿಧಿಸಿರುವಿ. ಅಂದಮೇಲೆ ಇದಕ್ಕೂ ಹೆಚ್ಚಿನ ಅಪರಾಧವೇನಾಗಬೇಕು. ಆತನಕೊರಳಲ್ಲಿ ಹಾರ ಕಂಡಾಕ್ಷಣವೇ ಆತನು ಅಪರಾಧಿಯೇ ಪೂರ್ವಾಪರ ವಿಚಾರವನ್ನೇ ಮಾಡಲಿಲ್ಲ? ಆದ ಕಾರಣ ನಾನಿಲ್ಲಿಂದ ತೆರಳುವೆನು ಎಂದು ಹೇಳಿ, ಎಲೈ ಭಕ್ತ ಭಾನುದಾಸನೇ ನಡೆನಾವಿನ್ನು ಹೋಗೋಣ ವೆಂದು ಹೇಳಿ ಆತನನ್ನು ಕರೆದುಕೊಂಡು ಸ್ವಲ್ಪ ದೂರ ನಡೆದು ಅದೃಶ್ಯರಾದರು ಭಗವಂತನ ವಾಣಿಯಿಂದ ಅಚ್ಚರಿಗೊಂಡ ರಾಜನು ಎಚ್ಚರಗೊಂಡು ತನ್ನ ಅ ವಿ ವೇ ಕ ಕ್ಕೆ ಪಶ್ಚಾತ್ತಾಪಪಟ್ಟು ಹಳಹಳಿಸಿದನು.

ಭಾನುದಾಸನು ಭಗವಂತನೊಂದಿಗೆ ಪಂಢರಪುರಕ್ಕೆ ಬಂದು, ಅಲ್ಲಿದ್ದ ಭಕ್ತ ಜನಸಮೂಹಕ್ಕೆ ಸಂದರ್ಶನ ಕೊಟ್ಟನು. ಭಗವಂತನು ಎಂದಿನಂತೆ ಮಂದಿರದಲ್ಲಿ ಮೂರ್ತಿರೂಪ ತಾಳಿ ಎಲ್ಲರಿಗೂ ದರ್ಶನ ಕೊಡತೊಡಗಿದನು. ಭಾನುದಾಸನು ವಿಜಯನಗರದಲ್ಲಿ ನಡೆದ ಸಂಗತಿಯನ್ನು ಭಕ್ತ ವರ್ಗಕ್ಕೆ ತಿಳಿಸಿ ಹೇಳಿ ಆನಂದಿಸುತ್ತಿದ್ದನು. ನಂತರ ಭಾನುದಾಸನು ಭಗವಂತನ ಆಜ್ಞೆಪಡೆದು ಪೈಠಣಪುರಕ್ಕೆ ಬಂದು ಭಕ್ತಿಯೋಗವನ್ನು ಜನರಿಗೆ ಬೋಧಿಸುತ್ತಲಿದ್ದನು. ಇಂತು ಹರಿಸೇವೆಯಲ್ಲಿಯೇ ಕಾಲಕಳೆದು ಒಂದುದಿನ ಭಗವಂತನ ಪಾದಸನ್ನಿಧಿಯನ್ನು ಸೇರಿದನು.

ಈ ಮಹಾನುಭಾವನ ವಂಶದಲ್ಲಿಯೇ ಏಕನಾಥ ಸ್ವಾಮಿಯು ಅವತರಿಸಿ ಶ್ರೀ ಪಾಂಡುರಂಗನನ್ನೇ ಮನೆಯ ಆಳನ್ನಾಗಿ ದುಡಿಸಿಕೊಳ್ಳತಕ್ಕ ಭಾಗ್ಯ ಹೊಂದಿದನು.

---

## ೧೮. ಶ್ರೀ ರಾಮಕೃಷ್ಣರು

ಸುಧಿರಾಮನೆಂಬಾತನು ತನ್ನ ಧರ್ಮಪತ್ನಿಯಾದ ಚಂದ್ರಮಣಿಯೊಡನೆ ಬೇರೆ ಊರಲ್ಲಿ ವಾಸವಾಗಿದ್ದನು. ಇವನು ಮಹಾ ಪರಮ ಸಾಧುವು. ಇವನ ಪತ್ನಿಯಾದರೂ ಪತಿಭಕ್ತಿ ದೈವಭಕ್ತಿಯಿಂದ ಕೂಡಿದವಳಾಗಿ ಸುಧಿರಾಮನೊಡನೆ ಸುಖಸಂಸಾರದಲ್ಲಿ ಕಾಲಕಳೆಯುತ್ತಿದ್ದಳು ಇಂತು ಕೆಲಕಾಲ ಕಳೆಯುತ್ತಿರಲು ಇವರಿಗೆ ಒಬ್ಬ ಹೆಣ್ಣುಮಗಳೂ, ಒಬ್ಬ ಗಂಡುಮಗನೂ ಜನನವಾದರು. ಆಗ ಸುಧಿರಾಮನಿಗೆ ತೀರ್ಥ ಕ್ಷೇತ್ರಗಳ ಯಾತ್ರೆ ಮಾಡಬೇಕೆಂಬ ಬಯಕೆಯಾಯಿತು. ತಕ್ಕಷ್ಟು ಧನ ತಕ್ಕೊಂಡು ಹೊರಟು ಅಯೋಧ್ಯಾ, ಮಥುರಾ, ಕಾಶಿ, ಬೃಂದಾವನ ಮುಂತಾದ ಕ್ಷೇತ್ರಗಳನ್ನು ಸಂದರ್ಶಿಸಿ, ಗಯಾ ಕ್ಷೇತ್ರಕ್ಕೆ ಬಂದನು. ಈ ಕ್ಷೇತ್ರವು ಪುರಾಣ ಪ್ರಸಿದ್ಧವಾದ ಕ್ಷೇತ್ರವಾಗಿದ್ದರಿಂದ ಸುಧಿರಾಮನು ಅಲ್ಲಿ ಮೂರು ದಿನಗಳವರೆಗಿದ್ದನು. ಈ ಕ್ಷೇತ್ರ ಸಂದರ್ಶನವಿತ್ತವರು ಪಿತೃಕಾರ್ಯಗಳನ್ನು ನೆರವೇರಿಸಬೇಕೆಂಬ ವಾಡಿಕೆಯಿರುವದರಿಂದ ಈತನು ಕೂಡಾ ಭಕ್ತಿಪೂರ್ವಕವಾಗಿ ಪಿತೃಕಾರ್ಯಗಳನ್ನು ನೆರವೇರಿಸಿ ಶ್ರೀ ವಿಷ್ಣುಪಾದದಲ್ಲಿ

ತಿಲೋದಕ ಮುಂತಾದ ಸಮಯೋಜಿತ ಕ್ರಿಯೆಗಳನ್ನು ನೆರವೇರಿಸಿದನು. ಅಂದು ರಾತ್ರಿ ಆತನು ನಿದ್ರಿಸುತ್ತಿರಲಾಗಿ ಆತನ ಸ್ವಪ್ನದಲ್ಲಿ ಶ್ರೀ ಮಹಾ ವಿಷ್ಣು ದೇವನು ಪ್ರಸನ್ನನಾಗಿ ಭಕ್ತಾ, ನಿನ್ನ ಭಕ್ತಿ-ಭಾವಕ್ಕೆ ಮೆಚ್ಚಿ, ನಾನು ನಿನಗೊಬ್ಬ ಲೋಕವಿಖ್ಯಾತ ಪುತ್ರನನ್ನು ದಯಪಾಲಿಸುತ್ತೇನೆ. ಅವನು ಜಗದ್ವಿಖ್ಯಾತನಾಗಿ ಬೆಳಗುವನು ಎಂದು ಹೇಳಿ ಅಂತರ್ಗತ ನಾದನು. ಕೂಡಲೇ ಸುಧಿರಾಮನು ಎಚ್ಚತ್ತು ಸ್ವಪ್ನ ಸಮಾಚಾರವನ್ನು ನೆನಸಿಕೊಂಡು ವಿಷ್ಣು ದೇವನಿಗೆ ಮನದಲ್ಲಿಯೇ ಪುನಃ ಪುನಃ ನಮಸ್ಕರಿಸಿ ಅಲ್ಲಿಂದ ತೆರಳಿ, ಸ್ವಗ್ರಾಮಕ್ಕೆ ಬಂದು ತನ್ನ ಪತ್ನಿಗೆ ಸಕಲ ವೃತ್ತಾಂತವನ್ನು ತಿಳಿಸಿ ಭಕ್ತಿಯಿಂದ ಕಾಲಕಳೆಯುತ್ತಿರಲು ಪರಮಾತ್ಮನ ಪ್ರಸಾದ ಬಲದಿಂದ ಚಂದ್ರಮಣಿಯು ಗರ್ಭವತಿಯಾಗಿ ನವಮಾಸಗಳು ತುಂಬಿ ಒಂದು ಶುಭ ಮುಹೂರ್ತದಲ್ಲಿ ಗಂಡುಮಗುವನ್ನು ಹೆತ್ತಳು. ಆಗ ಆ ದಂಪತಿಗಳಿಗಾದ ಆನಂದಕ್ಕೆ ಮಿತಿಇಲ್ಲದಾಯಿತು. ಜಾತಕರ್ಮಾದಿಗಳನ್ನು ತೀರಿಸಿ ಮಗುವಿಗೆ ಗದಾಧರನೆಂಬ ನಾಮಕರಣ ಮಾಡಿದರು.

ಸುಧಿರಾಮನು ತನ್ನ ಊರಾದ ದೇರೆ ಊರನ್ನು ಕೆಲ ಕಾರ್ಯಗಳ ನಿಮಿತ್ತವಾಗಿ ಬಿಟ್ಟು ಕುಮಾರ ಪುಕ್ಷರ ಕ್ಷೇತ್ರಕ್ಕೆ ಬಂದು ನೆಲೆಸಿದ ನಂತರ ಗದಾಧರನ ಜನನವಾಯಿತು.

ಸುಧಿರಾಮನ ಹಿರಿಯ ಮಗನಾದ ರಾಮಕುಮಾರನು ಸಂಸ್ಕೃತ ದಲ್ಲಿಯೂ ಅನೇಕ ಶಾಸ್ತ್ರಗಳಲ್ಲಿಯೂ ಮಹಾಪಾಂಡಿತ್ಯವನ್ನು ಪಡೆದಿದ್ದನು.

ಚಿಕ್ಕ ಮಗನಾದ ಗದಾಧರನ ಬಾಲಲೀಲಾ ವಿಲಾಸಗಳನ್ನು ಕಂಡು ಆ ಸುಧಿರಾಮ ದಂಪತಿಗಳು ಆನಂದಪಡುತ್ತಿದ್ದರು. ದೇವಾಂಶದಿಂದ ಜನಿಸಿ ದವನಾದ ಗದಾಧರನು ಕೃಷ್ಣಾವತಾರದಂತೆಯೂ, ರಾಮಾವತಾರದಂತೆಯೂ ಬಾಲಲೀಲೆಗಳನ್ನು ತೋರ್ಪಡಿಸುತ್ತಲಿದ್ದುದರಿಂದ ಆತನಿಗೆ ರಾಮಕೃಷ್ಣ ನೆಂಬ ಹೆಸರು ರೂಢಿಯಲ್ಲಿ ಬಂದು ಆ ಹೆಸರಿನಿಂದಲೇ ಪ್ರಸಿದ್ಧನಾದನು.

ಗದಾಧರನು ಚಂದ್ರನಂತೆ ಬೆಳೆದು ದೊಡ್ಡವನಾಗುತ್ತಿದ್ದನು. ಒಂದು ದಿನ ಆ ಗ್ರಾಮದಲ್ಲಿ "ಗಿರಿಜಾ ಕಲ್ಯಾಣ" ವೆಂಬ ಬೈಲು ನಾಟಕ ನಡೆದಿದ್ದಿತು. ಆಗ ಆತನು ಪ್ರೇಕ್ಷಕನಾಗಿ ಹೋಗಿದ್ದರೂ, ಯಾರಿಗೂ ಅರಿಯ

ದಂತೆ ಶಿವನ ಪಾತ್ರವಹಿಸಿ ಯೋಗಮುದ್ರಿತನಾಗಿ ರಂಗಸ್ಥಳದಲ್ಲಿ ಕುಳಿತಾಗ ಪ್ರತ್ಯಕ್ಷ ಪರಶಿವನೇ ಭೂಮಿಗಿಳಿದು ಬಂದಂತಾಗಿದ್ದಿತು. ಮತ್ತೊಮ್ಮೆ "ಕೃಷ್ಣಲೀಲಾ" ನಾಟಕದಲ್ಲಿ ರಾಧಾದೇವಿಯ ಪಾತ್ರವಹಿಸಿ ಅತ್ಯುತ್ತಮ ವಾಗಿ ನಟಿಸಿದನು. ಇಂತು ಆತನು ಅದ್ಭುತವಾಗಿ ಪಾತ್ರವಹಿಸುವ ವೈಖರಿ ಯನ್ನು ಕಂಡು ಅನೇಕರು ಆಶ್ಚರ್ಯಗೊಂಡರು. ಇಂದು ಗದಾಧರನು ವೇಷ ಭೂಷಣಗಳಲ್ಲಿ, ಆಟಪಾಟಗಳಲ್ಲಿ, ನಡೆನುಡಿಗಳಲ್ಲಿ ಜನರ ಮನಸ್ಸನ್ನು ಹರು ಷಗೊಳಿಸುತ್ತಲಿದ್ದುದರಿಂದ ಆತನು ಎಲ್ಲರಿಗೂ ಅಚ್ಚುಮೆಚ್ಚಿನವನಾಗಿದ್ದನು. ಅವನನ್ನು ತಮ್ಮ ತಮ್ಮ ಮನೆಗಳಿಗೆ ಕರೆದೊಯ್ದು ಸತ್ಕರಿಸುತ್ತಿದ್ದರು. ಆತನ ವಿದ್ಯಾಭ್ಯಾಸವೂ ಉತ್ತಮ ರೀತಿಯಲ್ಲಿ ನಡೆದಿದ್ದಿತು; ಆಗ್ಗೆ ಆತನಿಗೆ ಹತ್ತೊಂಬತ್ತು ವರುಷಗಳು ನಡೆಯುತ್ತಲಿದ್ದವು.

ಆ ಪ್ರಾಂತದ ಜನರು ಜಗದಂಬೆಯಾದ ಪಾರ್ವತಿಯನ್ನು ಕಾಳಿಕಾಂಬೆ ಯೆಂಬ ಭಾವನೆಯಿಂದ ಪೂಜಿಸುತ್ತಲಿದ್ದುದರಿಂದ ರಾಮಕೃಷ್ಣನಲ್ಲಿಯೂ ಆ ಕಾಳಿಕಾದೇವಿಯ ಬಗ್ಗೆ ಶ್ರದ್ಧಾಭಕ್ತಿಗಳು ಮೂಡಿಕೊಂಡಿದ್ದವು. ಆತನು ಸರ್ವದೇವತೆಗಳು ಒಂದೇ ಎಂದೂ, ದೇವನೊಬ್ಬನಾದರೂ ರೂಪನಾಮಗಳು ಅನಂತವೆಂದೂ ಸಾರಿ ಹೇಳುತ್ತಲಿದ್ದನು.

ಇಂತಿರುವಾಗ ಆ ಭಾಗದಲ್ಲಿಯ ದೊಡ್ಡ ಜಮೀನದಾರನಾದ ರಾಮ ಚಂದ್ರದಾಸಜೀ ಎಂಬಾತನು ಮರಣಹೊಂದಲು ಆತನ ಪತ್ನಿಯಾದ ರಾಣಿ ರಾಸಮಣಿ ಎಂಬವಳು ತನ್ನ ವಿಪುಲ ಐಶ್ವರ್ಯವನ್ನು ತ್ಯಾಗಮಾಡಿ ದೇಶಾಟನೆ ಮಾಡಬೇಕೆಂಬ ಸಂಕಲ್ಪವನ್ನು ತಾಳಿದಳು. ಪ್ರಯಾಣಕ್ಕೆ ಬೇಕಾದ ಪರಿವಾರ ಸಮೇತ ಸಕಲ ಸಿದ್ಧತೆಗಳನ್ನೂ ಮಾಡಿಕೊಂಡಳು. ಆದರೆ ಅಂದು ರಾತ್ರಿ ಆಕೆ ಮಲಗಿ ನಿದ್ರಿಸುತ್ತಿರುವಾಗ ಆಕೆಯ ಸ್ವಪ್ನ ದಲ್ಲಿ ಫಾಲನೇತ್ರನೂ, ಗಂಗಾಧರನೂ, ತ್ರಿಶೂಲಧಾರಿಯೂ ಆದ ಕಾಶೀ ವಿಶ್ವನಾಥನು ಕಾಣಿಸಿಕೊಂಡು ಭಕ್ತಳೇ, ನನ್ನ ಲೀಲಾವಿಲಾಸವಾದ ಕಾಶೀ ಕ್ಷೇತ್ರವನ್ನು ಸಂದರ್ಶಿಸಬೇಕೆಂಬ ನಿನ್ನ ಮನೋರಥವನ್ನು ನಾನು ಬಲ್ಲೆನು. ಆದರೆ ಅದನ್ನು ಸದ್ಯಕ್ಕೆ ನಿಲ್ಲಿಸಿ, ಅದಕ್ಕಾಗಿ ವೆಚ್ಚಮಾಡಬೇ ಕೆಂದಿದ್ದ ಹಣವನ್ನು ಕಾಶೀಘಟ್ಟದ ಒಂದು ಭಾಗವಾದ ದಕ್ಷಿಣೇಶ್ವರ ದಲ್ಲಿ ಒಂದು ಕಾಳಿಕಾಲಯವನ್ನು ಕಟ್ಟಿಸಿ ಅಲ್ಲಿ ಶಾಶ್ವತವಾದ ಪೂಜಾ ವೈಭವಗಳು ನೆರವೇರುವಂತೆ ಅರ್ಚಕನನ್ನು ಗೊತ್ತುಪಡಿಸು. ಅದು ನನಗೆ

ಪ್ರಿಯವಾದದ್ದು ಎಂದು ಹೇಳಿ ಅಂತರ್ಗತನಾದನು. ಕೂಡಲೇ ಆಕೆಯು ಎಚ್ಚತ್ತು ಕನಸಿನ ವೃತ್ತಾಂತವನ್ನು ನೆನಸಿಕೊಂಡು ಆ ಶಿವಾಜ್ಞೆಯನ್ನು ತನ್ನ ಬಳಗದವರಿಗೆಲ್ಲ ತಿಳಿಸಿ, ಕಾಳಿಕಾಲಯ ಸ್ಥಾಪನೆಗಾಗಿ ಉತ್ತಮ ಕೆಲಸಗಾರ ನನ್ನು ಕರೆಯಿಸಿ ಅವರಿಗೆ ಬೇಕಾದಷ್ಟು ಹಣವನ್ನು ಕೊಟ್ಟು ಅವರಿಂದ ಬಹು ಸ್ವಲ್ಪಕಾಲದಲ್ಲಿಯೆ ಆಲಯವನ್ನು ಕಟ್ಟಿಸಿ, ದೇವಿಯ ಪ್ರತಿಷ್ಠಾಪನೆಯನ್ನು ಮಾಡಿ ಯಾರನ್ನು ಅರ್ಚಕನನ್ನಾಗಿ ನೇವಿಸಬೇಕೆಂದು ಆಲೋಚಿಸುತ್ತಿದ್ದಳು

ರಾಮಕೃಷ್ಣನ ಅಣ್ಣನಾದ ರಾಮಕುಮಾರನು ಸರ್ವಶಾಸ್ತ್ರಪಾರಂಗತ ನಾಗಿದ್ದುದರಿಂದ ಆತನನ್ನೇ ಆ ದೇವಿಯ ಅರ್ಚಕನನ್ನಾಗಿ ನೇಮಿಸಿ ಆತನಿಗೆ ಬೇಕಾದ ಎಲ್ಲ ಸೌಕರ್ಯಗಳನ್ನೂ ಒದಗಿಸಿಕೊಟ್ಟಳು. ಅಂದಿನಿಂದ ಶ್ರೀ ಕಾಳಿಕಾಂಬೆಯ ಪೂಜಾದಿ ವೈಭವವು ಅತ್ಯಂತ ವಿಜೃಂಭಣೆಯಿಂದ ನಡೆಯುತ್ತಲಿದ್ದಿತು.

ರಾಮಕುಮಾರನು ಈ ಅರ್ಚಕವೃತ್ತಿಯಿಂದ ಅಲಿಪ್ತನಾಗಿ ಜೀವನ ಸಾಗಿಸಬೇಕೆಂದು ಆಲೋಚಿಸಿ, ಅದರಂತೆ ರಾಸಮಣಿ ದೇವಿಗೆ ತಿಳಿಸಿ ಆಕೆಯ ಅನುಮತಿಯಿಂದ ತನ್ನ ತಮ್ಮನಾದ ರಾಮಕೃಷ್ಣನಿಗೆ ಆ ಅರ್ಚಕ ವೃತ್ತಿ ಯನ್ನು ವಹಿಸಿಕೊಟ್ಟನು. ಆದರೆ ಆತನಿಗೆ ಆ ವೃತ್ತಿಯನ್ನು ಮಾಡಲು ಇಷ್ಟವಿಲ್ಲದಿದ್ದರೂ ರಾಸಮಣಿ ದೇವಿಯ ಬೇಡಿಕೆಯನ್ನು ಅಲ್ಲಗಳೆಯ ಲಾರದೆ ಒಪ್ಪಿಕೊಂಡು ಆಲಯದಲ್ಲಿ ಪ್ರವೇಶಿಸಿದನು. ಎಲ್ಲರಂತೆ ಇವನು ಕೇವಲ ಅರ್ಚಕನಾಗಿ ಉಳಿಯದೇ ಶ್ರೀ ಕಾಳಿಕಾಂಬೆಯನ್ನು ತನ್ನ ಇಷ್ಟ ದೇವತೆಯನ್ನಾಗಿ ನಿಶ್ಚಯಿಸಿಕೊಂಡು ತುಂಬಿದ ಭಕ್ತಿಯಿಂದ ಹಗಲಿರುಳು ಆಕೆಯನ್ನು ಪೂಜಿಸುತ್ತಲಿದ್ದನು.

ಇಂತಿರಲು ಒಂದು ದಿನ ಪಾಂಚಾಲ ದೇಶದ ತೋತಾಪುರಿಯೆಂಬ ಮಹಾಯೋಗಿವರ್ಯನು ದೇಶಸಂಚಾರ ಮಾಡುತ್ತ ಅಲ್ಲಿಗೆ ಬಂದು ರಾಮ ಕೃಷ್ಣರಿಗೆ ಗುರುವಾಗಿ ಕೆಲಕಾಲ ಅಲ್ಲಿಯೇ ಇದ್ದು ಅನೇಕ ಮಹತ್ವದ ವಿಷಯಗಳನ್ನೂ ಯೋಗಸಾಧನೆಯನ್ನೂ ಬೋಧಿಸಿತದನಂತರ ಆತನಿಂದ ಬೀಳ್ಕೊಂಡು ಹೊರಟುಹೋದನು. ಆಗಿನಿಂದ ರಾಮಕೃಷ್ಣನು ಅವಿಚ್ಛಿನ್ನ ವಾದ ಧ್ಯಾನಯೋಗದಲ್ಲಿ ನಿರತನಾಗುತ್ತಲಿದ್ದುದರಿಂದ ಆತನ ದೇಹ

ಸ್ಥಿತಿಯು ಶಿಥಿಲವಾಗಿ ಅನಾರೋಗ್ಯವು ಬಾಧಿಸತೊಡಗಿತು. ಆಗ ಧ್ಯಾನಕ್ಕೆ ಅಡಚಣೆಯಾಗುತ್ತಿರಲು ರಾಮಕೃಷ್ಣರು ಶ್ರೀ ಕಾಳಿಕಾಂಬೆಯನ್ನು ಕುರಿತು-ಹೇ ಮಾತೆಯೇ, ನಿನ್ನ ಧ್ಯಾನಾನಂದದಲ್ಲಿ ಕಾಲ ಕಳೆಯಬೇಕೆಂಬ ನನ್ನ ಹಂಬಲ ನಿನಗೆ ಸರಿಬರುತ್ತಿಲ್ಲವೇ ? ಹಾಗಿಲ್ಲದಿದ್ದರೆ ಈ ರೀತಿಯಾಗಿ ಧ್ಯಾನಕ್ಕೆ ಅಡಚಣೆಯನ್ನುಂಟುಮಾಡುತ್ತಿರುವಿಯೇಕೆ ಎಂದು ಪ್ರಾರ್ಥಿಸಲು ಅಂದೇ ಆ ಜಗದಂಬೆಯು ತನ್ನ ಭಕ್ತನ ತೊಂದರೆಯನ್ನು ನಿವಾರಿಸಿ, ಆತನನ್ನು ಉಪಚರಿಸುವದಕ್ಕಾಗಿ ಭೈರವಿಯ ರೂಪದಿಂದ ಆತನಲ್ಲಿಗೆ ಬಂದು, ಪುತ್ರಪ್ರೇಮದಿಂದಾತನನ್ನು ಉಪಚರಿಸಿ, ಆರೋಗ್ಯವಂತನನ್ನಾಗಿ ಮಾಡಿ ಅಲ್ಲಿಂದ ತೆರಳಿದಳು.

ನವತಾರುಣ್ಯದಲ್ಲಿ ಕಾಲಿಟ್ಟು ಸಂಸಾರ ಸುಖಗಳನ್ನನುಭವಿಸುವ ವೇಳೆಯಲ್ಲಿ ವೈರಾಗ್ಯ ಸಂಪನ್ನನಾಗಿ ಯೋಗಾನಂದವನ್ನನುಭವಿಸುವ ಸಾಮರ್ಥ್ಯವನ್ನು ಪಡೆದ ರಾಮಕೃಷ್ಣರಲ್ಲಿಗೆ ರಾಸಮಣಿದೇವಿಯು ಅಳಿಯನಾದ ಮಥುರನಾಥರು ಬಂದು ಆತನ ಯೋಗನಿಷ್ಠೆಯನ್ನು ಪರೀಕ್ಷಿಸಬೇಕೆಂದು ಆಲೋಚಿಸಿ, ಬಹು ಬೆಲೆಬಾಳುವ ಉತ್ತಮ ಶಾಲನ್ನು ತಂದು ಆತನಿಗೆ ಸಮರ್ಪಿಸಿದನು. ರಾಮಕೃಷ್ಣರು ಅದನ್ನು ಸ್ವಲ್ಪ ಹೊತ್ತು ಹೊದ್ದಿದ್ದು ನಂತರ ಅದು ತನ್ನ ಧ್ಯಾನಕ್ಕೆ ವಿಕಲ್ಪವನ್ನುಂಟುಮಾಡುವದೆಂಬ ಯೋಚನೆಯಿಂದ ಅದನ್ನು ಓರ್ವ ಭಿಕ್ಷುಕನಿಗೆ ಕೊಟ್ಟುಬಿಟ್ಟರು. ಅದನ್ನು ಪರೀಕ್ಷಿಸುತ್ತಲಿದ್ದ ಮಥುರನಾಥನು ಇವನೊಬ್ಬ ಮಹಾನುಭಾವನೆಂದು ನಂಬಿದನು. ಇಂತು ಈತನ ಅನೇಕ ಧ್ಯಾನನಿಷ್ಠೆಯನ್ನು ಕಂಡ ಅನೇಕ ವಿದ್ವಾಂಸರು ಕೂಡಾ ಈತನೊಬ್ಬ ಸತ್ಯಸಂಧನೆಂತಲೂ, ಪರಮಹಂಸನೆಂತಲೂ ನಿಶ್ಚಯಿಸಿ ಆತನನ್ನು “ ರಾಮಕೃಷ್ಣ ಪರಮಹಂಸ ” ಎಂದು ಸಂಬೋಧಿಸಿ ಕರೆಯಲಾರಂಭಿಸಿದರು.

ರಾಮಕೃಷ್ಣನು ಇಪ್ಪತ್ತೊಂದುವರ್ಷದವನಾಗುತ್ತಲೇ ಆತನ ವಿವಾಹಕ್ಕಾಗಿ ಅವನ ತಂದೆ ತಾಯಿಗಳು ಪ್ರಯತ್ನ ನಡೆಸಿದರು. ಶಾರದಾಮಣಿ ಎಂಬ ಸುಂದರ ಸುಕುಮಾರಿಯು ಜಯತಾಂಬತಿಯೆಂಬ ಗ್ರಾಮದಲ್ಲಿರುವ ರಾಮಚಂದ್ರ ಉಪಾಧ್ಯನೆಂಬವನ ಮನೆಯಲ್ಲಿರುವಳೆಂದು ತಿಳಿದು ಅಲ್ಲಿಗೆ ರಾಮಕೃಷ್ಣನ ತಂದೆಯು ಹೋಗಿ ಆಕೆಯನ್ನೇ ಗೊತ್ತುಮಾಡಿ

ಕೊಂಡು ಬಂದನು. ಆಗ ಆಕೆ ಬಾಲಿಕೆಯಾಗಿದ್ದರೂ ಒಂದು ಸುಮುಹೂರ್ತದಲ್ಲಿ ರಾಮಕೃಷ್ಣರೊಡನೆ ಲಗ್ನಮಾಡಿದರು; ಆಕೆ ಬಹಳ ದಿನಗಳವರೆಗೂ ತವರುಮನೆಯಲ್ಲಿಯೇ ಇದ್ದಳು.

ಇತ್ತ ರಾಮಕೃಷ್ಣ ಪರಮಹಂಸರ ಕೀರ್ತಿ ಜನಾಂಗದಲ್ಲಿ ಪಸರಿಸಿಕೊಂಡು ನಿತ್ಯವೂ ನೂರಾರು ಜನರು ಆತನ ದರ್ಶನಕ್ಕಾಗಿ ಬರುತ್ತಿದ್ದರು; ಆತನಿಗೆ ಕಾಣಿಕಾದಿಗಳನ್ನು ಸಹ ಸಲ್ಲಿಸತೊಡಗಿದರು. ಬರಬರುತ್ತ ಅವನ ಕೀರ್ತಿಯು ಪರದೇಶಗಳಿಗೂ ಮುಟ್ಟಿ ಅಲ್ಲಿಂದಲೂ ಜನರು ಆತನ ದರ್ಶನಕ್ಕಾಗಿ ಬರತೊಡಗಿದರು. ಒಂದು ದಿನ ಬಂಗಾರದ ಘಟ್ಟಿಯೊಂದನ್ನು ಒಂದು ಕೈಯಲ್ಲಿಯೂ, ಮಣ್ಣಿನ ಹೆಂಟೆಯೊಂದನ್ನು ಇನ್ನೊಂದು ಕೈಯಲ್ಲಿಯೂ ಹಿಡಿದುಕೊಂಡು ಗಂಗಾದಡಕ್ಕೆ ಹೋಗಿ ಅಲ್ಲಿ ನಿಂತು ಅವುಗಳೆರಡನ್ನೂ ಪರೀಕ್ಷಿಸಿ ಮೂಲತಃ ಇವೆರಡರಲ್ಲಿಯೂ ಯಾವ ಭೇದಗಳಿರುವದಿಲ್ಲವೆಂದು ಭಾವಿಸಿ, ಅವೆರಡನ್ನೂ ನದಿಯಲ್ಲಿ ಬೀಸಾಟ ನಸುನಗುತ್ತ ಮರಳಿ ಬಂದನು. ಈ ವಿಚಿತ್ರವನ್ನು ಕಂಡು ಇವನಲ್ಲಿ ತೀವ್ರವಾದ ವೈರಾಗ್ಯ ಭಾವನೆಯಿದೆ ಎಂದು ಹೊಗಳುತ್ತಿದ್ದರು.

ಒಂದು ದಿನ ಶಾರದಾಮಣಿಯು ಪತಿಯ ಪಾದ ಸನ್ನಿಧಿಯಲ್ಲಿದ್ದು ಆತನ ಸೇವೆಯಲ್ಲಿ ಭಾಗವಹಿಸಬೇಕೆಂದಾಶಿಸಿ ತನ್ನ ತಂದೆಗೆ ಆ ಅಭಿಪ್ರಾಯವನ್ನು ತಿಳಿಸಲಾಗಿ ಆತನು ಶಾರದಾಮಣಿಯನ್ನು ಕರೆತಂದು ಪರಮಹಂಸನ ತಾಯಿಯಾದ ಚಂದ್ರಮಣಿಗಾಕೆಗೆ ಒಪ್ಪಿಸಿ ತೆರಳಿದನು. ಒಂದುದಿನ ರಾತ್ರಿ ಪರಮಹಂಸರು ಕಾಳಿಕಾದೇವಿಯ ಪೂಜೆಯಲ್ಲಿ ನಿರತನಾಗಿರುವಾಗ ಶಾರದಾಮಣಿಯಲ್ಲಿಗೆ ಬಂದು ಆತನಿಗೆ ನಮಸ್ಕರಿಸಿ ನಿಂತುಕೊಳ್ಳಲು, ಆಗಾತನು ದೇವಿ! ಕಾಳಿಕಾಂಬೇ! ಜಗಜ್ಜನನೀ! ವಿಗ್ರಹರೂಪದಲ್ಲಿದ್ದ ನೀನು ಈ ಜಗನ್ಮೋಹನ ರೂಪದಿಂದ ನನಗೆ ದರ್ಶನವಿತ್ತೆಯಾ, ಎಂದೆನ್ನುತ್ತ ಆಸನದಿಂದ ಕೆಳಗಿಳಿದು, ನನ್ನ ಭಾಗ್ಯವನ್ನು ಎಷ್ಟೆಂದು ಬಣ್ಣಿಸಲಿ, ಬಾ ಆಸನದಲ್ಲಿ ಕುಳಿತುಕೋ ಎಂದೆನ್ನುತ್ತ ಆಕೆಯ ಕೈಹಿಡಿದು ಆಸನದಲ್ಲಿ ಕುಳ್ಳಿರಿಸಿ ಪೂಜಿಸತೊಡಗಿದನು. ಇಂತು ಪರಮಹಂಸ ನಿಷ್ಕಳಂಕ ವೈರಾಗ್ಯದ ಪ್ರಭಾವದಿಂದ ಆಕೆಯಲ್ಲಿಯೂ ವೈರಾಗ್ಯವುಂಟಾಗಿ ಅಂದಿನಿಂದ ಆತನ ಶಿಷ್ಯಳಾಗಿ ಕಾಲಕಳೆಯತೊಡಗಿದಳು.

ಇಂಥ ಆಧ್ಯಾತ್ಮಯೋಗ ಸಂಪನ್ನರಾದ ರಾಮಕೃಷ್ಣ ಪರಮಹಂಸರನ್ನು ಕಾಣಲು ಕಲಕತ್ತೆಯ ಪ್ರಸಿದ್ಧ ಪಂಡಿತರಾದ ದೇವೇಂದ್ರ ನಾಥ ಠಾಕೂರ, ಕೇಶವಚಂದ್ರಸೇನ ಬ್ರಹ್ಮಾನಂದ, ವಿಜಯಕೃಷ್ಣ ಗೋಸ್ವಾಮಿಗಳೂ, ಮಹೇಂದ್ರಲಾಲ ಮೊದಲಾದವರೂ ಆಗಾಗ್ಗೆ ಬರುತ್ತಲಿದ್ದರು.

ಅನೇಕ ಪರದೇಶಸ್ಥರೂ, ಸ್ವದೇಶಸ್ಥರೂ ಇವರ ಶಿಷ್ಯತ್ವವನ್ನು ಹೊಂದಿ ಆಧ್ಯಾತ್ಮ ಜ್ಞಾನ ಸಂಪಾದನೆಮಾಡಿಕೊಂಡರು. ಇವರು ಶಿಷ್ಯರ ಸ್ವಭಾವವನ್ನರಿತು ಪ್ರಸಂಗಾನುಸಾರ ಬೋಧನೆಯಲ್ಲಿ ರೂಪಿಸುತ್ತಿದ್ದರು. ಇವರ ಶಿಷ್ಯವರ್ಗದಲ್ಲಿ ಶ್ರೇಷ್ಠಮಣಿಯಾಗಿ ಮೆರೆದ "ಸ್ವಾಮೀ ವಿವೇಕಾನಂದರು" ಇವರ ನಾಲ್ವತ್ತೈದನೇ ವಯಸ್ಸಿಗೆ ಬಂದು ಶಿಷ್ಯತ್ವವನ್ನು ಪಡೆದರು. ಈ ಸ್ವಾಮೀ ವಿವೇಕಾನಂದರೇ ಪರಮಹಂಸರ ತತ್ವಪ್ರಸಾರ ಮಾಡಿ ದೇಶ-ವಿದೇಶಗಳಲ್ಲಿ ಜಯಭೇರಿಯನ್ನು ಬಾರಿಸಿ, ತಮ್ಮ ಮತ್ತು ಗುರುವಾದ ರಾಮಕೃಷ್ಣ ಪರಮಹಂಸರ ಹೆಸರು ಅಜರಾಮರವಾಗಿ ಉಳಿಯುವಂತೆ ಮಾಡಿದರು. ಶ್ರೀ ರಾಮಕೃಷ್ಣರು ತಮ್ಮ ಅರವತ್ತನೇವಯಸ್ಸಿನಲ್ಲಿ ಪರಮಸಿದ್ಧಿಯನ್ನು ಪಡೆದು ಪರಮಾತ್ಮನ ಪಾದಸನ್ನಿಧಿಯನ್ನು ಸೇರಿದರು. ಶ್ರೀ ರಾಮಕೃಷ್ಣ ಪರಮಹಂಸರ ಬಗ್ಗೆ ದಿನಗಳೆದಂತೆ ಅವರ ಲೀಲಾವಿಲಾಸಗಳ ಸಂಗತಿಗಳು ಹೆಚ್ಚೆಚ್ಚಾಗಿ ಬೆಳಕಿಗೆ ಬರುತ್ತಲಿವೆ.

---

# ೧೯. ಸಂತ ನಾಮದೇವ

ಶ್ರೀಕ್ಷೇತ್ರ ಪಂಢರಪುರದಲ್ಲಿ ದಾಮಾಜಿಯೆಂಬ ಸದ್ಗೃಹಸ್ಥನು ಗುಣಾಬಾಯಿಯೆಂಬ ಪತ್ನಿಯೊಡನೆ ಸುಖ-ಸಂಸಾರ ಮಾಡಿಕೊಂಡಿದ್ದನು. ಈ ದಂಪತಿಗಳು ಸಿರಿಯ ಸುಖ-ಸಂಪತ್ತನ್ನು ಸಾಕಷ್ಟು ಅನುಭವಿಸುತ್ತಿದ್ದರೂ ಮಹಾ ಸದ್ಭಕ್ತರೂ, ನಿಗರ್ವಿಗಳೂ ಆಗಿದ್ದರು. ಯೌವ್ವನದ ವರ್ಷಗಳು ಒಂದೊಂದಾಗಿ ಗತಿಸಿದವು. ಮಕ್ಕಳಾಗದಿದ್ದುದಕ್ಕಾಗಿ ಮೇಲಿಂದ ಮೇಲೆ ವ್ಯಥೆಪಡುತ್ತಿದ್ದರು. ಇಂತಿರಲು ಒಂದು ದಿನ ರಾತ್ರಿ ದಂಪತಿಗಳು ಊಟ

ಮಾಡಿ ಮಾತಾಡುತ್ತ ಕುಳಿತಿದ್ದರು. ಆಗ ಗುಣಾಬಾಯಿಯು ಗಂಡನನ್ನು ಕುರಿತು ನಾಥಾ! ಇಷ್ಟು ದಿನಗಳಾದರೂ ಮನೆಗೆ ದೀಪಹಚ್ಚಿ ಮನೆಯ ಹೆಸರು ಉಳಿಸಿಕೊಳ್ಳುವ ಮಕ್ಕಳಿಲ್ಲದಾಯಿತಲ್ಲಾ! ಎಂದು ನುಡಿದು ಮನೋವೇದನೆಯ ನಿಟ್ಟುಸಿರನ್ನೊಂದು ಬಿಟ್ಟಳು. ಆಗಾಭಕ್ತನು ಸತಿಯೇ! ನೀನೆಷ್ಟು ಭ್ರಾಂತಳು, ಮುಪ್ಪಾದ ನಮ್ಮ ಮಕ್ಕಳ ಭ್ರಾಂತಿಯನ್ನು ಕೇಳಿದವರು ನಗಲಿಕ್ಕಿಲ್ಲವೇ, ಈ ವಯಸ್ಸಿನಲ್ಲಿ ನಮಗೆ ಮಕ್ಕಳಾದರೂ ಆಗುವಂತೆ ಪಾಂಡುರಂಗನು ಅನುಗ್ರಹಿಸಬಲ್ಲನೆ! ಎಂಥ ವಿಚಾರವಿದು, ಸಾಕು ಸುಮ್ಮನಿರು ಎಂದುತ್ತರವಿತ್ತನು.

ಗುಣಾಬಾಯಿಯು ಪತಿಯ ಮಾತಿಗೆ ಪ್ರತ್ಯುತ್ತರ ಹೇಳತಕ್ಕವಳಲ್ಲವಾದರೂ ಆ ವಿಷಯದಲ್ಲಿ ತನಗಿರುವ ಮಮತೆಯನ್ನು ತಡೆಯಲಾರದೆ, ಪ್ರಾಣನಾಥಾ! ಹೀಗೇಕೆನ್ನುವಿರಿ! ಪಾಂಡುರಂಗನು ಸರ್ವಶಕ್ತನಲ್ಲವೇ? ಅವನಿಷ್ಟ ಬಂದರೆ ಎಂಥ ಘನಕಾರ್ಯಗಳನ್ನಾದರೂ ಸಹಜವಾಗಿ ಮಾಡಬಲ್ಲನು. ಭಕ್ತೋದ್ಧಾರಕನಾದ ಅವನಿಗೆ ಯಾವದು ಅಸಾಧ್ಯವು ಎಂದು ಹೇಳಿದ ಸತಿಯ ಮತಿಯುಳ್ಳ ಮಾತುಗಳಿಗೊಪ್ಪಿ ಅಲ್ಲಿಂದ ತೆರಳಿ ಶ್ರೀ ಪಂಢರೀನಾಥನನ್ನು ಸಂದರ್ಶಿಸಿ ತನ್ನ ಸತಿಯಾಡಿದ ಮಾತುಗಳನ್ನು ಬಿನ್ನೈಸಿ ಅಲ್ಲಿಯೇ ಆಲಯದಲ್ಲೊಂದು ಕಡೆ ಮಲಗಿ ನಿದ್ರೆಹೋದನು. ಆಗಾತ ಸ್ವಪ್ನದಲ್ಲಿ ಗೋಚರಿಸಿ ದಾಮಾಜಿ, ನೀನು ಚಿಂತಿಸಬೇಡ; ನಿನ್ನ ಸತಿಯಾಡಿದ ಮಾತುಗಳು ಯಥಾರ್ಥವಾದವುಗಳು. ಆಕೆಯ ಇಚ್ಛೆಯಂತೆ ಓರ್ವ ಬಾಲಕನನ್ನು ಅನುಗ್ರಹಿಸುವೆನು. ನಿತ್ಯದಂತೆ ನೀನು ನಾಳಿನ ದಿನ ಬೆಳಗಿನ ಜಾವದಲ್ಲಿ ಚಂದ್ರಭಾಗಕ್ಕೆ ನದಿಯ ಸ್ನಾನಕ್ಕಾಗಿ ಹೋಗು, ಅಲ್ಲೊಂದು ಮುತ್ತಿನ ಸಿಂಪು ನೀರಿನ ಮೇಲೆ ತೇಲಿಬರುವದು. ಅದರಲ್ಲೊಂದು ಸುಕುಮಾರನಿರುವನು, ಅವನನ್ನು ನಿನ್ನ ಮಗನಂತೆ ಪಾಲನೆ ಪೋಷಣೆಗಳಿಂದ ಆತನನ್ನು ಬೆಳೆಸು, ಅವನು ನಿನ್ನ ವಂಶವನ್ನೇ ಉದ್ಧರಿಸತಕ್ಕ ಮಹಾನುಭಾವನಾಗುವನು, ಉದ್ಧವಾಂಶದಿಂದ ಉದ್ಭವಿಸಿದವನು, ನೀನಿನ್ನು ನಿಶ್ಚಿಂತನಾಗಿರು ಎಂದು ಹೇಳಿ ಅದೃಶ್ಯನಾದನು. ಕೂಡಲೇ ದಾಮಾಜಿಯು ಎಚ್ಚತ್ತು ಅಲ್ಲಿಂದ ಮನೆಗೆ ತೆರಳಿ ಪಾಂಡುರಂಗನ ಕೃಪೆಯಿಂದಾದ ಸ್ವಪ್ನಸಮಾಚಾರವನ್ನು ತನ್ನ ಸತಿಗೆ ತಿಳಿಸಿ ಅಂದಿನ ರಾತ್ರಿ

ಯನ್ನು ವಿಠ್ಠಲನಾಮ ಸಂಕೀರ್ತನೆಯಲ್ಲಿಯೇ ಕಳೆದು ಬೆಳಗಾಗುತ್ತಲೇ ಆ ಭಕ್ತನು ಸ್ನಾನಕ್ಕಾಗಿ ಚಂದ್ರಭಾಗಾ ನದಿಗೆ ತೆರಳಿದನು.

ಮನಾನಂದಕರವಾದ ಬೆಳಗಿನ ಜಾವದ ತಂಗಾಳಿಯು ಬೀಸುತ್ತಿತ್ತು, ಸೂರ್ಯನ ಪ್ರಕಾಶವು ಇನ್ನೂ ಪಸರಿಸುವಲ್ಲಿತ್ತು, ನದಿಯ ನೀರು ನಿಧಾನ ವಾಗಿ ಹರಿಯುತ್ತಿತ್ತು. ಆಗಾ ದಾಮಾಜಿಯು ವಿಠ್ಠಲ ನಾಮಸ್ಮರಣೆ ಯನ್ನು ಮಾಡುತ್ತ ಸ್ನಾನಮಾಡುತ್ತಲಿದ್ದನು. ಆ ಹೊತ್ತಿಗೆ ನಿಧಾನವಾಗಿ ಹರಿಯುತ್ತಿದ್ದ ನೀರಿನ ಮೇಲೊಂದು ವಿಶಾಲವಾದ ಮುತ್ತಿನ ಸಿಂಪು ತೇಲಿ ಬರುತ್ತಿತ್ತು. ಅದನ್ನು ನೋಡುತ್ತಲೇ ಹಿಂದಿನ ದಿನದ ಸ್ವಪ್ನ ಸಮಾಚಾರ ನೆನಪಿಗೆ ಬಂದು ನೆಟ್ಟದೃಷ್ಟಿಯಿಂದ ಅದನ್ನೇ ನೋಡತೊಡಗಿದನು. ತೇಲಿ ಬರುತ್ತಿದ್ದ ಆ ಮುತ್ತಿನ ಸಿಂಪು ನಿಧಾನವಾಗಿ ಆತನೆಡೆಗೆ ಬರ ತೊಡಗಿತು. ಆಗಾತನು ಸಮೀಪಿಸಿದ ಮುತ್ತಿನ ಸಿಂಪನ್ನು ಕೈಗೆತ್ತಿಕೊಂಡು ನೋಡಲು ಅದರಲ್ಲಿ ಭಗವಂತನ ಅನುಗ್ರಹವಾಗಿ ಸುಂದರ ಸುಕುಮಾರನು ಆಡುತ್ತ ಮಲಗಿದ್ದನು. ಆಗಾ ಭಕ್ತನಿಗಾದ ಆನಂದವು ಅಷ್ಟಿಷ್ಟಲ್ಲ. ಕೂಡಲೇ ಆತನು ಅಲ್ಲಿಂದ ಮನೆಗೆ ತೆರಳಿ ಲಗುಬಗೆಯಿಂದ ಹೆಂಡತಿಯನ್ನು ಕರೆದು ಆ ಮಗುವನ್ನು ಆಕೆಯ ಕೈಯಲ್ಲಿ ಕೊಟ್ಟು ನೋಡು ನಿನ್ನಿಚ್ಛೆ ಯಂತೆ ಪಾಂಡರಂಗನು ಪುತ್ರನನ್ನು ಅನುಗ್ರಹಿಸಿದ್ದಾನೆ. ನಿನ್ನ ಮನಸ್ಸಿಗೆ ಸಮಾಧಾನವಾಯಿತೆ? ಎಂದು ಕೇಳಿದನು. ಆಗ ಆಕೆಯು ಮುಗುಳುನಗೆ ಯಿಂದೊಮ್ಮೆ ಪತಿಯನ್ನು ನೋಡಿ ಬಾಲಕನನ್ನು ಕೈಗೆತ್ತಿಗೊಂಡು ಮುದ್ದಿಟ್ಟು ನಲಿದಾಡಿದಳು. ಇಂತು ಕೆಲನಿಮಿಷಗಳು ಕಳೆಯಲು ತಟ್ಟನೆ ಆಕೆಯ ಕಣ್ಣಲ್ಲಿ ನೀರೊಡೆದವು. ಅದನ್ನು ಕಂಡು ದಾಮಾಜಿಯು ಏಕೆ ಸತಿ, ಇಷ್ಟು ದಿನಗಳ ವರೆಗೆ ಮಕ್ಕಳಿಲ್ಲವೆಂದು ಅಳುತ್ತಿದ್ದವಳು ಇಂದು ಭಗ ವಂಥನ ಕೃಪೆಯಿಂದ ಪುಪ್ರಪ್ರಾಪ್ತಿಯಾದ ನಿಮಿತ್ತವಾಗಿ ಆನಂದಿಸುವದರ ಬದಲು ಪುನಃ ಅಳುವದೇಕೆ? ಎಂದು ಕೇಳಲು ಆಗ ಆಕೆಯು ಪತಿದೇವಾ, ಬಂಜೆಯಾದ ನನ್ನ ಕುಚಗಳಲ್ಲಿ ಕ್ಷೀರವಿಲ್ಲದಿರುವಾಗ ಈ ಮಗುವನ್ನು ಜೋಪಾನ ಮಾಡುವದೆಂತು ಎಂಬ ಚಿಂತೆಯಿಂದ ಕಣ್ಣಲ್ಲಿ ನೀರೋಡೆದವೇ ವಿನಃ ಮತ್ತೇನಿಲ್ಲವೆನ್ನುತ್ತ ಸೆರಗಿನಿಂದ ಕಣ್ಣೊರಿಸಿಕೊಂಡು ಕುಳಿತು, ಆ ಮಗುವನ್ನು ತೊಡೆಯ ಮೇಲೆ ಮಲಗಿಸಿಕೊಂಡಳು. ಕೂಡಲೇ ಕುಚಗ ಳಲ್ಲಿ ಕ್ಷೀರಗಳು ಬಿಗಿಯತೊಡಗಿದವು. ಆಗ ಆಕೆಯು ಕಟ್ಟುಗಳನ್ನುಚ್ಚಲು

ಕುಚಗಳಿಂದ ಕ್ಷೀರಗಳು ಪುಟಿಯುತೊಡಗಿದವು. ಆಗ ಆ ದಂಪತಿಗಳು ಭಗವಂತನ ಅಪಾರ ಮಹಿಮೆಯನ್ನು ಕೊಂಡಾಡತೊಡಗಿದರು. ಆಕೆಯು ಮಗುವಿಗೆ ಮೊಲೆಯುಣಿಸುತ್ತ ಆನಂದದಲ್ಲಿ ಕಾಲಕಳೆಯುತೊಡಗಿದಳು. ಪಾಂಡುರಂಗನನ್ನು ಅನನ್ಯಭಕ್ತಿಯಿಂದ ಭಜಿಸುತ್ತ ದೇವದತ್ತವಾದ ಆ ಮಗುವಿಗೆ "ನಾಮದೇವ"ನೆಂಬ ಹೆಸರಿಟ್ಟು ಪೋಷಿಸುತ್ತಿದ್ದರು.

ಪರಮಭಕ್ತನಾದ ದಾಮಾಜಿಯು ಮನೆಯಲ್ಲಿಯ ಪದಾರ್ಥಗಳನ್ನು ಪಾವನ ಭಾವನೆಯಿಂದಲೂ, ತ್ರಿಕರಣಶುದ್ಧಿಯಿಂದಲೂ ಪಾಂಡುರಂಗನಿಗೆ ನಿವೇದಿಸದೆ ಎಂದೂ ಊಟ ಮಾಡುತ್ತಿರಲಿಲ್ಲ. ಇಂತು ಕೆಲಕಾಲ ಕಳೆಯುತ್ತಿರಲು ಒಂದು ದಿನ ದಾಮಾಜಿಯು ಯಾವದೋ ಕಾರ್ಯ ನಿಮಿತ್ತವಾಗಿ ಪರಊರಿಗೆ ಹೋಗಬೇಕಾದ ಅತ್ಯಾವಶ್ಯಕವಾದ ಕಾರ್ಯವಿದ್ದುದರಿಂದ ಪಾಂಡುರಂಗನ ಪೂಜೆಗಾಗಿ ಮಗನನ್ನು ನೇಮಿಸಿಹೋದನು. ಮಧ್ಯಾಹ್ನವಾಯಿತು, ಗುಣಾಬಾಯಿಯು ಪೂಜಾ ದ್ರವ್ಯಗಳನ್ನೂ, ನೈವೇದ್ಯ ಪದಾರ್ಥಗಳನ್ನೂ ಮಗನ ಕೈಯಲ್ಲಿ ಕೊಟ್ಟುಕಳುಹಿದಳು. ಅವುಗಳನ್ನು ಕಟ್ಟಿಕೊಂಡು ಹೊರಟಿದ್ದ ನಾಮದೇವನು ನೆಟ್ಟಗೆ ಗುಡಿಗೆ ತೆರಳಿ, ಅಲ್ಲಿ ಎಲ್ಲವನ್ನೂ ದೇವರ ಸನ್ನಿಧಿಯಲ್ಲಿಟ್ಟು, ಪುಷ್ಪಾದಿಗಳಿಂದ ದೇವರನ್ನು ಪೂಜಿಸಿ ನೈವೇದ್ಯವನ್ನರ್ಪಿಸಿ ನಿಂತುಕೊಂಡನು. ಆದರೆ ಆ ಪಾಂಡುರಂಗನು ನೈವೇದ್ಯದ ಅನ್ನವನ್ನು ಊಟಮಾಡಲೂಯಿಲ್ಲ, ಮಾತಾಡಲೂಯಿಲ್ಲ, ಆಗ ಆ ನಾಮದೇವನಿಗೆ ಸಂಶಯಬಂದಿತು. ಆದರೂ ಮತ್ತೆ ಕೆಲ ಸಮಯ ತಡೆದನು. ಆಗಲೂ ದೇವರು ಮಿಸುಕದಿರಲು, ಇದೇನನ್ಯಾಯವಿದು ನಮ್ಮಪ್ಪನು ಬಂದರೆ ನೈವೇದ್ಯವನ್ನು ಊಟಮಾಡುವದು, ನಾನು ಬಂದರೆ ಊಟಮಾಡದಿರುವದು ಯೋಗ್ಯವೇ ? ದೇವರಲ್ಲಿ ಪಕ್ಷಪಾತದ ಸ್ವಭಾವವುಂಟೆ; ಅಥವಾ ನಾನು ಸಣ್ಣವನೆಂದು ಹೀಗೆ ಮಾಡುತ್ತಿರುವನೆ; ಹೀಗೆ ಇನ್ನೂ ಅನೇಕ ವಿಧದಲ್ಲಿ ತನ್ನ ಬುದ್ಧಿಗೆ ತೋಚಿದಂತೆ ಆಲೋಚಿಸಿದನು. ಆದರೂ ಒಂದೂ ಅರ್ಥವಾಗಲಿಲ್ಲ. ಆಗ ನಾಮದೇವನು ಭಯಭಕ್ತಿಗಳಿಂದ ತುಂಬಿದ ಹೃದಯದಿಂದ ಇಂತೆಂದನು. ಹೇ.... ಭಗವಂತನೇ ಬಾ, ಬಾ, ಬಂದು ನನ್ನ ನೈವೇದ್ಯದ ಅನ್ನವನ್ನು ಭುಂಜಿಸು. ನೀನಿಂತು ನಿರಾಕರಿಸಿದರೆ ನನ್ನ ಗತಿಯೇನು ? ನಾನು ನಿನಗ್ಯಾವ ಅಪ

ಕಾರ ಮಾಡಿರುವೆನೆಂದು ಹೀಗೆ ಮಾಡುತ್ತಿರುವಿ? ನೀನು ಈಗ ಭುಂಜಿಸ ದಿದ್ದರೆ ನಮ್ಮವ್ವನು ನನ್ನನ್ನು ಬಹು ಕಠಿಣವಾಗಿ ಶಿಕ್ಷಿಸುವಳು. ಅಯ್ಯೋ ಭಗವಂತನೇ! ಕರುಣಿಸು, ಕರುಣಿಸು ಎಂದು ಬೇಡಿಕೊಳ್ಳುತ್ತಿರುವ ಆತನ ಭಕ್ತಿಭಾವವು ಹೃದಯದಲ್ಲಿ ತುಂಬಿ, ಉಕ್ಕಿ ನೇತ್ರಾಶ್ರುಗಳ ಮೂಲಕ ಹರಿಯುತ್ತಿರುವದನ್ನು ಕಂಡು ಪಾಂಡುರಂಗನು ಆ ಬಾಲಕನಲ್ಲಿ ಕರುಣೆ ಗೊಂಡು ಪ್ರಸನ್ನನಾದನು. ಆತನ ನೈವೇದ್ಯದ ಅನ್ನವನ್ನುಂಡು, ಬಾಲ ಕನನ್ನಪ್ಪಿಕೊಂಡು ಮುದ್ದಾಡಿ ನಾಮದೇವಾ! ನಾನು ನಿನ್ನನ್ನವನ್ನುಂಡ ಸಂಗತಿಯನ್ನು ಇನ್ನಾರಮುಂದೆಯೂ ಹೇಳಬೇಡ, ಎಂದು ಹೇಳಿ ಆಶೀರ್ವ ದಿಸಿ ಕಳುಹಿಸಿಕೊಟ್ಟನು. ನಾಮದೇವನು ಮನೆಗೆ ಹಿಂತಿರುಗಿ ಬಂದು ತನ್ನ ತಾಯಿಗೆ ಆ ಸಮಾಚಾರವನ್ನು ತಿಳಿಸಲು ಆಕೆಯು ಅದನ್ನು ನಂಬಲಿಲ್ಲ. ತನ್ನ ಪತಿಯು ಊರಿಂದ ಬಂದೊಡನೆ ಆತನಿಗೆ ಆ ಸಮಾಚಾರವನ್ನು ಹೇಳಿದಳು. ಅದನ್ನು ಕೇಳುತ್ತಲೇ ದಾಮಾಜಿಗೆ ಆಶ್ಚರ್ಯವಾಯಿತು. ನಾಮ ದೇವಾ! ನಾಳೆ ನಾನೂ ನಿನ್ನೊಡನೆ ಗುಡಿಗೆ ಬರುವೆನು, ನೀನೇ ದೇವರನ್ನು ಪೂಜಿಸು ಎಂದು ಹೇಳಿ ಅದರಂತೆ ಮರುದಿನ ನಾಮದೇವನೊಡನೆ ತಾನೂ ದೇವಾಲಯಕ್ಕೆ ಹೋದನು. ನಾಮದೇವನು ಗುಡಿಯು ಒಳಹೊಕ್ಕು ದೇವ ರನ್ನು ಪೂಜಿಸಿ ನೈವೇದ್ಯವನ್ನು ಸಮರ್ಪಿಸಲು ಪಾಂಡುರಂಗನು ಇಂತೆಂದನು- ನಾಮದೇವಾ! ಇಂದು ನಿಮ್ಮಪ್ಪನು ಬಂದಿರುವ ಕಾರಣ ನಾನು ಊಟ ಮಾಡುವದಿಲ್ಲ; ಯಾಕಂದರೆ ಆತನಿಗೆ ನಾನು ಪ್ರತ್ಯಕ್ಷ ದರ್ಶನ ಕೊಡು ವಂತಿಲ್ಲವೆಂದು ಹೇಳಿದನು. ನಾಮದೇವನು ಇಂತೆಂದನು- ದೇವಾ! "ಸರ್ವ ಪ್ರಾಣಿ ವರ್ಗಗಳಲ್ಲಿಯವೆ ನನಗೆ ಪ್ರೀತಿಯುಂಟೆಂದು" ನೀನೇ ಹೇಳಿರುವಾಗ ನನಗೆ ಗೋಚರಿಸಿ ನನ್ನ ತಂದೆಗಾಗದಿರುವದು ಧರ್ಮವೇ ? ನಿಶ್ಚಲ ಭಕ್ತಿ ಯಿಲ್ಲದವರಿಗೆ ಗೋಚರಿಸಲಾರೆನೆಂಬ ವಿಯಾ? ನಿನ್ನ ದರ್ಶನದ ಹೊರ್ತು ನಿಶ್ಚಲ ಭಕ್ತಿ ಬರುವದಾದರೂ ಹೇಗೆ? ಬೀಜದಿಂದ ಗಿಡವೂ, ಗಿಡದಿಂದ ಬೀಜವೂ ಉಂಟಾಗುತ್ತವೆ ಎಂಬ ಎರಡೂ ತತ್ವವನ್ನು ಒಪ್ಪಿಕೊಳ್ಳುವಂತೆ ನಿಶ್ಚಲ ಭಕ್ತಿಯಿಲ್ಲದೆ ನಿನ್ನ ದರ್ಶನ ದೊರೆಯಲಾರದು ಇದೂ ನಿಜ; ನಿನ್ನ ದರ್ಶನದ ಹೊರ್ತು ಭಕ್ತಿಯು ನಿಶ್ಚಲವಾಗಲಾರದು ಇದೂ ನಿಜ; ಹೀಗಿರು ವಾಗ ಇಂಥ ಸಂದುಕಟ್ಟಿನ ಸಮಯದಲ್ಲಿ ನ್ಯಾಯ ನಿರ್ಣಯ ನೀಡುವವನು

ನೀನೇ ಆಗಿರುವಾಗ, ಇದ್ದ ಭಕ್ತಿಯನ್ನು ನಿಶ್ಚಲಗೊಳಿಸುವದಕ್ಕಾಗಿ ನಿನ್ನ ದರ್ಶನವನ್ನು ನೀಡು, ಹೇ ದೇವಾ! ದೇವಾಧಿ ದೇವಾ! ಪಾಂಡುರಂಗಾ! ಕರುಣಿಸು ಎಂದು ಪ್ರಾರ್ಥಿಸಲು ಪಾಂಡುರಂಗನು ಪ್ರಸನ್ನನಾಗಿ, ಮೆಚ್ಚಿ, ನಾಮದೇವ ದಾಮಾಜಿಯೊಡನೆ ಕೂಡಿ ಕುಳಿತು ಊಟ ಮಾಡಿದನು. ಆಗಾ ದಾಮಾಜಿಗೆ ಆದ ಆನಂದ ಅಷ್ಟಿಷ್ಟಲ್ಲ ಬಳಿಕ ಪಾಂಡುರಂಗನಿಂದ ಅಪ್ಪಣೆ ಪಡೆದು ಮನೆಗೆ ಬಂದು, ಪರಂಧಾಮನ ಕಾರುಣ್ಯವನ್ನು ಗುಣಾಬಾಯಿಗೆ ತಿಳಿಸಿ, ಆನಂದದಲ್ಲಿ ಕಾಲಕಳೆಯುತ್ತಿದ್ದನು.

ಇಂತು ಕಾಲ ಕಳೆಯುತ್ತಿರಲು ನಾಮದೇವನು ವಿವಾಹ ವಯಸ್ಕನಾದುದನ್ನರಿತು, ಪಾಂಡುರಂಗನ ಕರುಣಾವಿಶೇಷದಿಂದ ರಾಧಾಬಾಯಿ ಎಂಬ ಸುಂದರ ಕನ್ನೆಯನ್ನು ತಂದು ಲಗ್ನ ಮಾಡಿದರು. ಅಂದಿನಿಂದ ನಾಮದೇವನು ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಅತಿಥಿ ಅಭ್ಯಾಗತರಿಗೆ ಅನ್ನೋದಕಗಳನ್ನು ಕೊಟ್ಟು ಸತ್ಕರಿಸುತ್ತ ವಿಠ್ಠಲ ನಾಮಸಂಕೀರ್ತನೆಯಲ್ಲಿ ಕಾಲ ಕಳೆಯುತ್ತಿದ್ದನು.

ಇಂತು ಕೆಲದಿನ ಕಳೆಯುತ್ತಿರುವಲ್ಲಿ, ಸತ್ಕುಲ ಪ್ರಸೂತೆಯೂ, ಸುಗುಣಿಯೂ ರಾಧಾಬಾಯಿಯು ಗರ್ಭವತಿಯಾಗಿ ಒಂದು ಶುಭ ಮೂಹೂರ್ತದಲ್ಲಿ ಗಂಡುಮಗುವನ್ನು ಹೆತ್ತಳು ನಾಮಕರಣ ದಿನ ದಾಮಾಜಿಯು ಪಂಢರಿನಾಥನನ್ನು ಭೋಜನಕ್ಕೆ ಆಹ್ವಾನಿಸಿದನು. ಅಂದು ಆ ಭಕ್ತವತ್ಸಲನು ಬಂದು ಆ ಬಾಲಕನಿಗೆ "ನಾರಾಯಣ" ಎಂಬ ನಾಮಕರಣಮಾಡಿ ವಸ್ತ್ರಾಭರಣಗಳ ಶೋಭೆಮಾಡಿ, ಭುಂಜಿಸಿ ಸ್ವಸ್ಥಾನಕ್ಕೆ ತೆರಳಿದನು.

ಕೂತು ತಿಂದರೆ ಕುಡಿಕೆ ಹೊನ್ನು ಸಾಲುವದಿಲ್ಲವೆಂಬ ನಾಣ್ಣುಡಿಯಂತೆ ನಾಮದೇವನ ಮನೆಯಲ್ಲಿ ಸಂಪಾದನೆಯಿಲ್ಲದೆ ಎಲ್ಲರೂ ಕೂತುಂಡರೆ ಬಡತನ ಬರದಿರುವದೆ? ಕ್ರಮೇಣ ಸಂಸಾರನಿರ್ವಹಣಕ್ಕಾಗಿ ಬೇಕಾದ ಸೌಕರ್ಯಗಳು ಕಡಿಮೆಯಾಗಿ ಕಳವಳಗೊಳ್ಳತೊಡಗಿದರು. ರಾಧಾಬಾಯಿಯು ತನಗೂ ತನ್ನ ಮಗನಿಗೂ ಅನ್ನದೊರೆಯದಿರುವದನ್ನು ಅತ್ತೆಯಲ್ಲಿ ಮೊರೆಯಿಟ್ಟು ಅತ್ತಳು. ನಾಮದೇವನು ಈ ವಿಷಯವನ್ನರಿತು ಚಿಂತಿಸುತ್ತ ಪಾಂಡುರಂಗರ ಸನ್ನಿಧಿಗೆ ತೆರಳಿ, ಜಗದ್ರಕ್ಷಕನಾದ ಭಗವಂತನನ್ನು ಪ್ರಾರ್ಥಿಸಲು ಆಗಾ ವಿಠಲನು, ನಾಮದೇವನಲ್ಲಿರುವಾಗಲೇ ಶಾನೋರ್ವ ವರ್ತಕನ ವೇಷಧರಿಸಿ ಧನವನ್ನು ಎತ್ತಿನಮೇಲೆ ಹೇರಿ

ಕೊಂಡು ನಾಮದೇವನ ಮನೆಗೆ ಹೋಗಿ, ಆತನ ಹೆಂಡತಿ ರಾಧಾಬಾಯಿಯನ್ನು ಕೂಗಿ, ಆಕೆಗಾಧನವನ್ನು ಕೊಟ್ಟು ಹೋದನು. ಆ ಧನವಾದರೂ ಎಷ್ಟು ದಿನಗಳವರೆಗೆ ಸಾಲಬಲ್ಲದು? ದಿನ ಬೆಳಗಿದಂತೆ ಬಡತನದ ಭವಣೆಯು ಬೆಳೆದು ಬರತೊಡಗಿತು. ಅನೇಕ ಕಷ್ಟನಷ್ಟಗಳಿಗೆ ನಾಮದೇವನ ಸಂಸಾರದವರು ಸಿಕ್ಕುಕೊಂಡು ಬಳಲತೊಡಗಿದರು. "ಯಾರನ್ನು ನಾನು ಅನುಗ್ರಹಿಸುವೆನೋ ಅವರ ಸುಖ ಸಂಪತ್ತುಗಳನ್ನು ನಾನು ಅಪಹರಿಸುವೆನು" ಎಂದು ಭಗವಂತನು ನುಡಿದಿರುವಂತೆ ನಾಮದೇವನ ಸ್ಥಿತಿಯು ಕಂಗಾಲ ಪರಿಸ್ಥಿತಿಗೆ ಬಂದು ಮುಟ್ಟಿ, ಒಪ್ಪೊತ್ತಿನ ಊಟಕ್ಕೂ ದಿಕ್ಕಿಲ್ಲದಂತಾಯಿತು. ಆದರೂ ನಾಮದೇವನ ವಿಠ್ಠಲ ನಾಮಸ್ಮರಣೆಯು ಕಡಿಮೆಯಾಗದೆ ಮತ್ತಿಷ್ಟು ಹೆಚ್ಚುತ್ತಲಿತ್ತು.

ಒಂದುದಿನ ಗಣೂಬಾಯಿಯು ತಮಗೊದಗಿದ ಬಡತನವನ್ನು ಪಾಂಡುರಂಗನಲ್ಲಿ ಅರಿಕೆ ಮಾಡಿಕೊಳ್ಳಬೇಕೆಂದು ಆಲೋಚಿಸಿ ವಿಠ್ಠಲನ ಮಂದಿರಕ್ಕೆ ತೆರಳಿದಳು. ಆಗಲ್ಲಿ ಪಾಂಡುರಂಗನ ಸನ್ನಿಧಿಯಲ್ಲಿ ಕೂತು ಆತನ ಸ್ಮರಣೆಯನ್ನು ಮಾಡುತ್ತಲಿದ್ದ ನಾಮದೇವನನ್ನು ಕಂಡು ಕೋಪಗೊಂಡು ಎಲೋ ನಾಮದೇವಾ! ಮನೆಯಲ್ಲೆಲ್ಲರೂ ಉಪವಾಸವಿರುವಾಗ ನೀನಿಲ್ಲಿ ಬಂದು ಕೂತರೆ ಮುಂದೇನು ಗತಿ? ಎಲೈ ಮಾಯಾಗಾರನೇ, ನೀನು ನನ್ನ ಮಗನನ್ನು ವಶಪಡಿಸಿಕೊಂಡಿರುವದು ನ್ಯಾಯವೇ? ಮನೆಯಲ್ಲಿ ಎಲ್ಲರೂ ಹೊಟ್ಟೆಗಾಗಿ ಪಡುತ್ತಿರುವ ಕಷ್ಟ ಅಷ್ಟಿಷ್ಟಲ್ಲವೆಂದು ನುಡಿಯುತ್ತಿರುವಷ್ಟರಲ್ಲಿ ಉಕ್ಕಿಬರುತ್ತಿರುವ ದುಃಖವನ್ನು ತಡೆಯಲಾಗದೆ ಅತ್ತುಬಿಟ್ಟಳು, ಆಗಾ ಪಂಢರಿನಾಥನು ಪ್ರಸನ್ನನಾಗಿ ತಾಯೀ! ಹೀಗೇಕೆ ದುಃಖಿಸುವೆ; ನಿನ್ನ ಮಗನಿಗೂ ನನಗೂ ಇರುವ ಸಂಬಂಧವು ಅನಿವಾರ್ಯವೂ ಶಾಶ್ವತವೂ ಆಗಿರುವದು. ನಿನಗೂ ನಿನ್ನ ಮಗನಿಗೆ ಇರುವ ಸಂಬಂಧವು ಪ್ರಾಪಂಚಿಕವೂ ತಾತ್ಕಾಲಿಕವೂ ಆಗಿರುವದು. ಬೇಕಾದರೆ ನೀನು ನಿನ್ನ ಮಗನನ್ನು ಕರೆದುಕೊಂಡುಹೋಗು, ನನ್ನದೇನೂ ತಕರಾರವಿಲ್ಲ ಎಂದೆನ್ನುತ್ತ ನಾಮದೇವನ ಕೈಗಳನ್ನು ಆಕೆಯ ಕೈಯಲ್ಲಿ ಕೊಟ್ಟು ಇನ್ನಾತನನ್ನು ಮನೆಗೆ ಕರೆದುಕೊಂಡು ಹೋಗು ಆದರೆ ನಿಷ್ಠುರ ಮಾತುಗಳಿಂದ ನನ್ನನ್ನು ಬೈಯ್ಯಬೇಡ ಎಂದು ನುಡಿದು ಕಳಿಸಿಕೊಟ್ಟನು. ಗುಣಾಬಾಯಿಯು ಮಗನೊಂದಿಗೆ ಮನೆಗೆ ಬಂದಳು.

ಶ್ರೀ ಪಾಂಡುರಂಗನ ಕರುಣಾಕಟಾಕ್ಷದಿಂದ ಮನೆಯಲ್ಲಿ ಧನ-ಧಾನ್ಯಗಳು ತುಂಬಿಕೊಂಡಿದ್ದವು. ರಾಧಾಬಾಯಿಯು ಮೃಷ್ಟಾನ್ನಭೋಜನವನ್ನು ಸಿದ್ಧಪಡಿಸಿ, ಗಂಡನು ಬರುವದನ್ನು ಎದುರು ನೋಡುತ್ತಿದ್ದಳು. ಅಷ್ಟರಲ್ಲಿ ತಾಯಿಮಗರಿಬ್ಬರೂ ಬಂದರು. ನಾಮದೇವನೂ ಗುಣಾಬಾಯಿಯೂ ಮನೆಯಲ್ಲಿರುವ ಧನಧಾನ್ಯಗಳನ್ನು ಕಂಡು ಆನಂದ ಅಚ್ಚರಿಗಳನ್ನು ಹೊಂದಿದವರಾದರು. ಅಷ್ಟರಲ್ಲಿ ರಾಧಾಬಾಯಿಯು ಊಟಕ್ಕೆ ಕರೆಯಲು ನಾಮದೇವನು ಎಲ್ಲರೊಡನೆ ಊಟ ಮಾಡಿದನು. ಆದರೆ ಆ ಧನ ಧಾನ್ಯಗಳು ಹೇಗೆ ಬಂದವು? ಯಾರು ಕೊಟ್ಟರು? ಎಂಬ ವಿಚಾರದಲ್ಲಿರುವಾಗ ಆತನ ಮನೆಯಲ್ಲಿ ಪರಿಚಾರಿಕೆಯಾಗಿದ್ದ ಸಂತ ಜನಾಬಾಯಿಯು ಬಂದಳು. ಆಗಾತನು ಆಕೆಯನ್ನು ಕೇಳಲು, ಆಕೆಯು ಭಗವಂತನು ಕೇಶವ ಸಾವುಕಾರನೆಂಬ ಹೆಸರಿನಿಂದ ಬಂದು, ಧನಧಾನ್ಯಗಳನ್ನಿತ್ತು ಹೋದನೆಂದು ಹೇಳಿದಳು. ನಾಮದೇವನು ಪಾಂಡುರಂಗನ ಪರಮ ಭಕ್ತ ವಾತ್ಸಲ್ಯವನ್ನು ಅನನ್ಯ ಭಕ್ತಿಭಾವದಿಂದ ಇಂತು ಕೊಂಡಾಡಿದನು.

ಸರ್ವಶಕ್ತನೇ, ನಿತ್ಯ ನಿರಂಜನ ಮೂರ್ತಿಯಾದ ನಿನ್ನ ಕರುಣಾಕಟಾಕ್ಷದಿಂದ ಪ್ರಾಣಿಕೋಟಿಗಳು ಭವಸಾಗರದಿಂದ ಉದ್ಧಾರಹೊಂದಬೇಕಲ್ಲದೆ, ಬೇರೊಂದು ಮಾರ್ಗವಿಲ್ಲ. ದೇವಾ! ನೀನು ಸ್ವಾಮಿಯು. ನಾನು ಸೇವಕನು. ನೀನು ಗುರುವು ನಾನು ಶಿಷ್ಯನು. ನೀನು ದೇವಾಧಿದೇವನು; ನಾನು ನಿನ್ನಾಶ್ರಿತನು. ನೀನೇ ಎನ್ನ ಮಾತಾಪಿತೃ ಸ್ವರೂಪನು. ನಾನು ನಿನ್ನ ಮಗನು. ನಿನ್ನ ಇಚ್ಛೆ ಇದ್ದಂತಾಗಲಿ ಎಂದು ನುಡಿಯುತ್ತಿರಲು ಭಗವಂತನು ಪ್ರಸನ್ನನಾಗಿ ನಾಮದೇವಾ ನೀನು ಧನ್ಯನು! ನಿನ್ನ ಹೃದಯವು ಮೃದು ಮಧುರವಾದುದರಿಂದ ನಿನಗೆ ಕಲ್ಯಾಣವಾಗಲಿ ಎಂದು ಆಶೀರ್ವದಿಸಿ ಅಂತರ್ಗತನಾದನು.

ಕೆಲ ದಿನಗಳ ತರುವಾಯ ಜ್ಞಾನದೇವರು ಕೆಲಜನ ಭಗವದ್ಭಕ್ತರನ್ನು ಕೂಡಿಕೊಂಡು ನಾಮದೇವನಲ್ಲಿಗೆ ಬಂದು ಇವನನ್ನು ಕರೆದುಕೊಂಡು ತೀರ್ಥಯಾತ್ರೆಗೆ ಹೊರಟರು. ಆಗ ಇವರೆಲ್ಲರೂ ಕೂಡಿ ಮಹಾ ಭಕ್ತನಾದ ಗೋರಾ ಕುಂಬಾರನಲ್ಲಿ ಬಂದರು. ಆಗ ಗೋರನು ಎಲ್ಲರನ್ನೂ ಸಮಯೋಚಿತ ಸತ್ಕಾರಗಳಿಂದ ಸನ್ಮಾನಿಸಿದನು. ಎಲ್ಲರೂ ಸುಖಾಸೀನ

ರಾಗಿ ಕೂತಿರುವಾಗ, ಜ್ಞಾನದೇವರು ಗೋರಾ ! ಇಲ್ಲಿರುವ ಘಟಗಳಲ್ಲಿ ಯಾವದು ಅಪಕ್ವಘಟವಿದೆ; ಯಾವದು ಪಕ್ವಘಟವಿದೆ, ಪರೀಕ್ಷಿಸಿ ನೋಡೆಂದು ಆಜ್ಞೆ ಮಾಡಲು ಗೋರನು, ಮಡಿಕೆಗಳನ್ನು ತಯಾರಿಸುವ ಕೈಮಣಿಯನ್ನೆತ್ತಿಕೊಂಡು ಎಲ್ಲರ ತಲೆಗೊಂದರಂತೆ ಪೆಟ್ಟು ಹಾಕುತ್ತ ಬಂದನು. ಎಲ್ಲರೂ ದೇಹದ ಮೇಲಿನ ಭ್ರಾಂತಿಯನ್ನು ಬಿಟ್ಟವರಾದ ಕಾರಣ ಸುಮ್ಮನಿದ್ದರು. ಆದರೆ ನಾಮದೇವನೊಬ್ಬನು ಮಾತ್ರ ಭೀತಿಯಿಂದ ಚೀರಿದರು. ಆಗ ಗೋರನು ಇಲ್ಲಿರುವ ಘಟ (ಜೀವಾತ್ಮ ಅಥವಾ ಜೀವಿ) ಗಳ ಪೈಕಿ ಇದೊಂದು ಮಾತ್ರ ಅಪಕ್ವ ಘಟವೆಂದನು. ಆಗ ಅಲ್ಲಿದ್ದವರೆಲ್ಲರೂ ನಕ್ಕರು. ನಾಮದೇವನಿಗೆ ಆ ಘಟನೆಯಿಂದ ಸಂಕೋಚವೂ ಅಪಮಾನವೂ ಆದಂತಾಯಿತು. ಜ್ಞಾನಿಗಳೀಪರಿ ಅನ್ಯರನ್ನು ಅಲ್ಲಗಳೆದು ನಗುವದುಚಿತವೇ ? ಎಂದು ತನ್ನಲ್ಲಿಯೇ ಆಲೋಚಿಸಿ ಕೊನೆಗೆ ಎಲ್ಲವೂ ಪಾಂಡುರಂಗನ ಲೀಲೆಯಲ್ಲದೆ ಮತ್ತೇನಲ್ಲವೆಂದು ನಿಶ್ಚಯಿಸಿ ಆತನ ಸ್ಮರಣೆ ಮಾಡಿದನು. ಆಗ ಪಾಂಡುರಂಗನು ಅಲ್ಲಿ ಪ್ರಸನ್ನನಾಗಿ ಸಾಧುಗಳಿರಾ, ನಾಮದೇವನು ನನ್ನ ಪ್ರೀತಿಗೆ ಪಾತ್ರನಾದನು ಎಂದೆನ್ನುತ್ತ ಅವರನ್ನು ಅಪ್ಪಿಕೊಂಡು ಭಕ್ತನೇ ! ಪುಷ್ಪಕ್ಕೂ ಪರಿಮಳಕ್ಕೂ ಹೇಗೆ ಭೇದವಿಲ್ಲವೋ ಹಾಗೆ ನನಗೂ ನಿನಗೂ ಅಭೇದ ಸಂಬಂಧವುಂಟು. ಜ್ಞಾನದೇವಾದಿಗಳೆಲ್ಲರೂ ನಿನ್ನ ವಿಷಯದಲ್ಲಿ ನಗುವದಕ್ಕೆ ಕಾರಣವು ನಿನ್ನ ಮೇಲಿನ ಪ್ರೀತಿಯೇ ಹೊರತು ನಿನ್ನನ್ನು ಅಪಮಾನಪಡಿಸುವದಕ್ಕಾಗಿ ಅಲ್ಲ. ನೀನೊಬ್ಬ ಸದ್ಗುರುವನ್ನಾಶ್ರಯಿಸಿ ತತ್ವೋಪದೇಶವನ್ನು ಪಡೆಯಬೇಕು. ಆಗ ನಿನಗೆ ಸ್ಥಿರ ಪ್ರಜ್ಞೆ ಉಂಟಾಗುವದು. ಕಾರಣ ನೀನು ಇಲ್ಲಿಗೆ ಸಮೀಪದಲ್ಲಿರುವ ನಾಗನಾಥ ಸ್ವಾಮಿಯ ಆಲಯಕ್ಕೆ ಹೋಗು. ಅಲ್ಲಿ ವಿಠೋಬಾಕೇಶವನೆಂಬ ಪರಮ ಸುಜ್ಞಾನಿ ಇರುವನು. ನೀನು ಅಲ್ಲಿಗೆ ಹೋಗಿ ಅವನನ್ನು ಆಶ್ರಯಿಸಿ ತತ್ವೋಪದೇಶವನ್ನು ಹೊಂದು. ಎಂದು ಆಜ್ಞೆ ಮಾಡಿ ಅದೃಶ್ಯನಾದನು. ಆಗ ನಾಮದೇವನು ಆತನನ್ನು ಮನಸಾರೆ ಸ್ಮರಿಸುತ್ತ ನಾಗನಾಥನಆಲಯಕ್ಕೆ ಬಂದನು. ಅಲ್ಲಿ ವಿರೋಬನು ಶಿವಲಿಂಗದ ಮೇಲೆ ಕಾಲು ಚಾಚಿಕೊಂಡು ಮಲಗಿದ್ದನು. ಇದನ್ನು ಕಂಡ ನಾಮದೇವನು ಸಂಕೋಚಗೊಂಡು, ಈ ದೇವದ್ರೋಹಿಯು ಸದಾಚಾರಿಯೆಂದು

ಹೇಳಿದ ಪಾಂಡುರಂಗನ ಸಂಕಲ್ಪವಾದರೂ ಏನು ? ಎಂದು ಆಲೋಚಿಸುತ್ತ ಆತನಲ್ಲಿಗೆ ಬಂದು ಸ್ವಾಮಿ, ತಾವು ತಿಳಿದವರಿದ್ದಾಗ್ಯೂ ಈ ರೀತಿ ಶಿವಲಿಂಗದ ಮೇಲೆ ಕಾಲು ಚಾಚಿ ಮಲಗಿರುವದು ಯೋಗ್ಯವೇ ? ಎಂದನು. ಅದಕ್ಕೆ ವಿಠೋಬನು ಸಾಧುವೇ ನಿನನ್ನುವಂತೆ ಶಿವಲಿಂಗದ ಮೇಲೆ ಕಾಲು ಚಾಚಿ ಕೊಂಡು ಮಲಗಿರುವದು ತಪ್ಪೆ ಸರಿ. ಆದರೆ ನಾನು ಕಡುವೃದ್ಧನು. ನನ್ನ ಕಾಲುಗಳು ನನ್ನ ಸ್ವಾಧೀನದಲ್ಲಿಲ್ಲ. ಕಾರಣ ನೀನೇ ನನ್ನ ಕಾಲುಗಳನ್ನೆತ್ತಿ ಲಿಂಗವಿಲ್ಲದ ಮತ್ತೊಂದು ಕಡೆ ಇಡು. ಎಂದನು. ಅದಕ್ಕೆ ನಾಮದೇವನು ಸಮಾಧಾನ ಹೊಂದಿ ವಿಠೋಬನ ಕಾಲುಗಳನ್ನು ಹಿಡಿದೆತ್ತಿ ಮತ್ತೊಂದು ಕಡೆ ಇಡಹೋಗಲು ಅಲ್ಲೊಂದು ಶಿವಲಿಂಗವಿದ್ದಿತು. ಅಲ್ಲಿ ಬಿಟ್ಟು ಮತ್ತೊಂದೆಡೆ ಇಡಹೋಗಲು ಅಲ್ಲೊಂದು ಶಿವಲಿಂಗವಿದ್ದಿತು. ಎಲ್ಲಿ ಇಡಬೇಕೆನ್ನುವನೋ ಅಲ್ಲೆಲ್ಲ ಶಿವಲಿಂಗಗಳೇ ಇರುತ್ತಿದ್ದವು. ಆಗ ನಾಮದೇವನು ವಿಸ್ಮಿತನಾಗಿ ಸುಮ್ಮನೇ ನಿಂತುಬಿಟ್ಟನು. ಆಗ ವಿಠೋಬನು ನಾಮದೇವಾ ! ಅಣುವಿನಿಂದ ಬ್ರಹ್ಮಪರ್ಯಂತರವಾದ ಚರಾಚರ ಸೃಷ್ಟಿಯೆಲ್ಲವೂ ಸರ್ವಾಂತರ್ಯಾಮಿಯಾದ ಭಗವಂತನಿಂದ ವ್ಯಾಪ್ತವಾಗಿದೆ. ಆತನಿಲ್ಲದ ಸ್ಥಳವೇ ಇಲ್ಲ. ಅಂದ ಮೇಲೆ ಕಾಲುಗಳನ್ನು ಎಲ್ಲಿಟ್ಟರೂ ದೇವರ ಮೇಲಿಟ್ಟಂತಾಗುವದು. ಅದಕ್ಕೆ ನಾನೇನು ಮಾಡಲಿ, ಎಂದು ನುಡಿದು ಸುಮ್ಮನಾದನು. ಆಗ ನಾಮದೇವನು, ಅಹಾ ಇವನೆಂತಹ ಮಹನೀಯನು. ಹಾಗಿಲ್ಲದಿದ್ದರೆ ಪಂಢರಿನಾಥನು ನನ್ನನ್ನು ಇಲ್ಲಿಗೇಕೆ ಕಳಿಸುತ್ತಿದ್ದನು. ? ಎಂದು ಆಲೋಚಿಸಿ, ಆತನ ಚರಣಗಳಿಗೆ ನಮಸ್ಕರಿಸಿದನು. ವಿಠೋಬನು ಅಯ್ಯಾ, ನಿನ್ನನ್ನು ಪಾಂಡುರಂಗನೇ ಇಲ್ಲಿಗೆ ಕಳಿಸಿದನಲ್ಲವೇ ? ಸಂತೋಷ ನಿನ್ನ ಇಷ್ಟಾರ್ಥವು ನೆರವೇರುವದು. ಬಾ, ಇಲ್ಲಿ ಕುಳಿತಕೋ ಎಂದು ಹೇಳಿ ಆತನನ್ನು ಕುಳ್ಳಿರಿಸಿಕೊಂಡು, ಪರತತ್ವೋಪದೇಶಗಳನ್ನು ಮಾಡಿದನು ಆಗ ನಾಮದೇವನು ತನ್ನಗುರುವಿಗೂ ಗುರುಗಳ ಗುರುವಾದ ಶ್ರೀ ವಿಠ್ಠಲನಿಗೂ ಸಾಸ್ಟಾಂಗದಂಡಪ್ರಣಾಮುಗಳನ್ನರ್ಪಿಸಿ ಅಪ್ಪಣೆ ಪಡೆದು ಅಲ್ಲಿಂದ ಹೊರಟನು.

ಬಳಿಕ ನಾಮದೇವನು ಜ್ಞಾನದೇವಾದಿಗಳೊಂದಿಗೆ ತೀರ್ಥಯಾತ್ರೆಗಳನ್ನು ಮಾಡುತ್ತಿರಲು ಅನೇಕ ಅದ್ಭುತ ಘಟನೆಗಳನ್ನು ವಿಠ್ಠಲ ಕರುಣೆ

ಯಿಂದ ಸುಸೂತ್ರವಾಗಿ ಪರಿಣಮಿಸಿದವು. ಇಂತು ತೀರ್ಥಯಾತ್ರೆಗಳನ್ನು ಮಾಡುತ್ತ ಲಕ್ಷಾಂತರ ಅಭಂಗಗಳನ್ನು ರಚಿಸಿ ಪಾಂಡುರಂಗನ ಪರಮ ವೈಭವವನ್ನು ಪ್ರಕಾಶಗೊಳಿಸಿದನು. ರಾಧಾಬಾಯಿ ಜನಾಬಾಯಿ ಮುಂತಾದ ವರಿಗೆ ಪರತತ್ತ್ವೋಪದೇಶವನ್ನು ಮಾಡಿದನು.

ಇಂತು ನಾಮದೇವನು ಧ್ಯಾನಯೋಗದಲ್ಲಿ ಪಾಂಡುರಂಗ ಪರಬ್ರಹ್ಮ ನನ್ನು ಸಂದರ್ಶಿಸುತ್ತ ಆನಂದದಲ್ಲಿ ಕಾಲಕಳೆದು ಪರಂಧಾಮನ ದಿವ್ಯ ಸನ್ನಿಧಿಯನ್ನು ಸೇರಿದನು.

---

## ೨೦. ಜಗನ್ಮಿತ್ರ ನಾಗನಾಥರು

ನಾಗನಾಥನೆಂಬ ಒಬ್ಬ ಬಡ ಬ್ರಾಹ್ಮಣನು ವೈದ್ಯನಾಥಪುರವೆಂಬ ಗ್ರಾಮದಲ್ಲಿ ವಾಸವಾಗಿದ್ದನು. ಈತನು ಕಾಮ, ಕ್ರೋಧ, ಲೋಭಾದಿ ಗಳೆಂಬ ಷಡ್ವರ್ಗಗಳನ್ನು ಅಳಿದು ನ್ಯಾಯ ಮತ್ತು ಸತ್ಯಗಳೆಂಬ ದೀವಟಿ ಗೆಯ ಬೆಳಕಿನಲ್ಲಿ, ಸಾತ್ವಿಕ ವೃತ್ತಿಯಿಂದ ಜೀವಿಸುತ್ತಿದ್ದನು. ಸದಾ ವಿಷ್ಣು ಭಕ್ತ ಪರಾಯಣನಾಗಿ ಆತನ ನಾಮ ಸಂಕೀರ್ತನೆಯಲ್ಲಿ ಕಾಲಕಳೆಯುತ್ತಿ ದ್ದನು. ಈತನ ಸ್ವಾರ್ಥತ್ಯಾಗವನ್ನೂ ಪರೋಪಕಾರ ಬುದ್ಧಿಯನ್ನೂ ನೋಡಿ ಊರ ಜನರು ಆತನಿಗೆ ಜಗನ್ಮಿತ್ರ ನಾಗನಾಥನೆಂಬ ಹೆಸರಿನಿಂದ ಕರೆದು ಪ್ರೀತಿಸುತ್ತಿದ್ದರು.

ನಾಗನಾಥನು ಮಹಾ ಬಡವನಾಗಿದ್ದರಿಂದ, ಉದರ ಪೋಷಣೆಗಾಗಿ ಬಹಳ ಕಷ್ಟಪಡುತ್ತಿದ್ದನು. ಅನ್ಯರಿಗೆ ತೊಂದರೆ ಕೊಡುತ್ತಿದ್ದಿಲ್ಲ. ತನ್ನ ವೃತ್ತಿಯಿಂದ ಲಭಿಸುವ ಪ್ರತಿಫಲದಲ್ಲಿಯೇ ತೃಪ್ತಿಹೊಂದಿ ಜೀವಿಸುತ್ತಿ ದ್ದನು. ಐಹಿಕ ಸುಖಗಳಿಗೆ ಎಳ್ಳಷ್ಟೂ ಮಹತ್ವ ಕೊಡುತ್ತಿರಲಿಲ್ಲ. ಇಂತು ಸರಳ ಜೀವನವನ್ನು ಸಾಗಿಸಿಕೊಂಡಿರುತ್ತಿದ್ದರೂ ಹಲವಾರು ವಿರೋಧಿಗಳು ಆತನಿಗೆ ಹುಟ್ಟಿಕೊಂಡಿದ್ದರು. ಇಂತಿರುವಾಗ, ಒಂದು ದಿನ ಆತನ ವಿರೋಧಿ ಗಳು ನಿರಪರಾಧಿಯಾದ ನಾಗನಾಥನ ಮೇಲೆ ಅಸೂಯೆಗೊಂಡು ಮಧ್ಯ

ರಾತ್ರಿಯಲ್ಲಿ ಆತನ ಮನೆಗೆ ಕೊಳ್ಳಿಯಿಟ್ಟರು. ಆಗ ನಾಗನಾಥನು ಅವನ ಪತ್ನಿ ಪುತ್ರರೊಡನೆ ಮಲಗಿ ನಿದ್ರಿಸುತ್ತಿದ್ದನು. ಮನೆಗೆ ತಗಲಿದ ಬೆಂಕಿಯ ಝಳವು ನಾಗನಾಥನಿಗೆ ತಾಗಿ ಆತನು ಎಚ್ಚರಗೊಂಡು ಧಗಧಗನೆ ಉರಿಯುವ ಬೆಂಕಿಯ ಅಬ್ಬರವನ್ನು ಕಂಡು ಅಚ್ಚರಿಗೊಂಡು ಸ್ಥಂಬೀಭೂತನಾಗಿ ಸುಮ್ಮನೆ ಕುಳಿತುಬಿಟ್ಟನು. ಸುತ್ತಲೂ ಬೆಂಕಿ ಹಬ್ಬಿಕೊಂಡಿದ್ದರೂ ನಾಗನಾಥನು ಕೂತ ಸ್ಥಳದಿಂದ ಕದಲಲಿಲ್ಲ. ತನ್ನ ಪತ್ನಿ ಪುತ್ರರನ್ನು ಕೂಡ ಎಬ್ಬಿಸಲಿಲ್ಲ. ತಾನಾಗಿ ತಗಲಿದ ಬೆಂಕಿಯಿಂದ ಈ ಸಂಸಾರ ಬಂಧನದಿಂದ ಮುಕ್ತರಾಗುವೆವು. ಎಂದು ನುಡಿದು ಪರಮಾತ್ಮನ ಧ್ಯಾನದಲ್ಲಿ ಮಗ್ನನಾಗಿಬಿಟ್ಟನು. ಬೆಂಕಿ ಹಚ್ಚಿದ ದುರಾತ್ಮರನ್ನು ದೂಷಿಸದೆ ಅವರೇ ನಿಜವಾದ ಹಿತಮಿತ್ರರೆಂದು ಭಾವಿಸಿದನು.

ಇಂಥ ಸತ್ಪುರುಷರಿಗೆ ಜನರು ದೂಷಿಸಲಿ ಅಥವಾ ಭೂಷಿಸಲಿ, ಸಿರಿಯು ಬರಲಿ ಅಥವಾ ಸರಿದು ಹೋಗಲಿ, ಈಗಲೇ ಮರಣವು ಸಂಭವಿಸಲಿ ಅಥವಾ ಸಂಭವಿಸದಿರಲಿ, ಅವರು ಮಾತ್ರ ನ್ಯಾಯ ಮಾರ್ಗವನ್ನು ಬಿಟ್ಟು ಎಂದೂ ಹಿಂದೆ ಸರಿಯುವದಿಲ್ಲ.

ಬೆಂಕಿಯಿಂದ ಮನೆಯು ಸುಟ್ಟು ಹೋಗುತ್ತಿದ್ದರೂ ಸ್ವಲ್ಪವೂ ಕಂಗೆಡದೆ ನಿಶ್ಚಲ ಮನಸ್ಸಿನಿಂದ ಭಗವಂತನ ಭಜನೆಯಲ್ಲಿ ಮಗ್ನನಾಗಿದ್ದ ನಾಗನಾಥನನ್ನು ಕಂಡು ನೆರೆದ ಕೆಲವರು ನಕ್ಕರು. ಕೆಲವರು ದೂಷಿಸಿದರು. ಕೆಲವರು ಕನಿಕರದಿಂದ ಮರುಗಿದರು. ಇಂಥ ಗಂಭೀರ ಪರಿಸ್ಥಿತಿಯಲ್ಲಿ ಆಪದ್ಬಂಧುವಾದ ಭಗವಂತನು ತನ್ನ ನಿಜ ಭಕ್ತರ ರಕ್ಷಣೆಗಾಗಿ ಟೊಂಕಕಟ್ಟಿದಿರುವನೆ. ಮನೆಗೆ ತಗಲಿದ್ದ ಬೆಂಕಿಯು ಕಾಡ್ಗಿಚ್ಚಿನಂತೆ ಸುತ್ತಲೂ ವ್ಯಾಪಿಸಿ ಉರಿಯುತ್ತಿದ್ದರೂ, ಒಂದು ಹುಲ್ಲುಕಡ್ಡಿಯೂ ಕೂಡ ಸುಡದಂತೆ ಆ ಜ್ವಾಲೆಯು ಭಗವಂತನ ಮಾಯಾವಿಲಾಸದಿಂದ ತನ್ನಷ್ಟಕ್ಕೆ ತಾನೇ ನಿಧಾನವಾಗಿ ಆರುತ್ತ ಬಂದಿತು. ನಾಗನಾಥನ ಕುಟುಂಬ ಸಮೇತ ಸುರಕ್ಷಿತವಾಗಿದ್ದುದನ್ನು ಅಲ್ಲಿ ನೆರೆದಿದ್ದ ಜನರು ಕಂಡು ಆಶ್ಚರ್ಯಗೊಂಡು ನಾಗನಾಥನ ಭಕ್ತಿ ಭಾವವನ್ನೂ ಭಗವಂತನ ಮಾಯಾವಿಲಾಸವನ್ನೂ ಕೊಂಡಾಡಿದರು. ಕೊಳ್ಳಿಯಿಟ್ಟ ದುಷ್ಟರು ಕೂಡ ಭಗವಂತನ ಪ್ರೇರಣೆಯಿಂದ ಭಾಗವತೋತ್ತಮನಾದ ನಾಗನಾಥನಲ್ಲಿಗೆ ಬಂದು ಆತನಲ್ಲಿ ಕ್ಷಮೆ

ಕೇಳಿಕೊಂಡರು. ಆಗವರನ್ನು ನಾಗನಾಥನು ಕ್ಷಮಿಸಿ ಭಗವಂತನ ಲೀಲಾ ವಿಲಾಸಗಳ ಬೋಧನೆಯನ್ನು ಮಾಡಿ ಭಗವದ್ಭಕ್ತರನ್ನಾಗಿ ಮಾಡಿದನು.

ತರುವಾಯ ಕೆಲ ಪ್ರಮುಖ ಪುರವಾಸಿಗಳು ಒಂದುಗೂಡಿ ನಾಗನಾಥ ನಲ್ಲಿಗೆ ಬಂದು— ಭಕ್ತವರ್ಯಾ! ನಾವೆಲ್ಲರೂ ಕೂಡಿ ನಿನ್ನ ಕುಟುಂಬ ಪೋಷಣೆಗಾಗಿ ಸ್ವಲ್ಪ ಭೂಮಿಯನ್ನು ನಿನಗೆ ದಾನವಾಗಿ ಕೊಡಬೇಕೆಂದಿ ದ್ದೇವೆ; ಕಾರಣ ನೀನದನ್ನು ದಯವಿಟ್ಟು ಸ್ವೀಕರಿಸಬೇಕೆಂದು ಬೇಡಿ ಕೊಂಡರು. ಆಗ ನಾಗನಾಥನು— ಸಜ್ಜನರೇ! ನಿಮಗೆ ದೇವರು ಮಂಗಳ ವನ್ನುಂಟುಮಾಡಲಿ; ಆದರೆ ಈ ಜಗತ್ತಿನಲ್ಲಿಯ ವ್ಯಾಮೋಹವನ್ನೇ ಬಿಟ್ಟ ನನಗೆ ನೀವು ಭೂದಾನ ಮಾಡಿದರೆ ಆಗುವ ಪ್ರಯೋಜನವೇನು?

ರಣಭೂಮಿಯನ್ನು ಕಂಡು ಹೆದರುವ ಮನುಷ್ಯನನ್ನು ನೋಡಿ ಮೃತ್ಯುವು ನಗುವಂತೆ, ನಾನು ಸಂಸಾರವನ್ನು ಕಂಡು ಹೆದರುತ್ತಿರುವೆ. ನನಗೆ ನೀವು ಭೂದಾನ ಮಾಡಿದರೆ ಪ್ರಯೋಜನವೇನಾದೀತು? ಮತ್ತು ಈವರೆಗಿಲ್ಲದ ನಿಮ್ಮ ದಾನವನ್ನು ಸ್ವೀಕರಿಸಿದರೆ ಬರುವ ನನ್ನ ಭೂಮಿ, ಜಮೀನು ಎಂಬ ಹಂಬಲವನ್ನು ಕಂಡು ಭೂಮಿಯು ನಗಲಿಕ್ಕಿಲ್ಲವೇ? ಛೇ....ಹಾಗಾಗಬಾರದು; ಎಂದು ಹೇಳಿದರೂ ಆ ಜನರು ಕೇಳದೆ, ಅವನ ಅನುಮತಿಯನ್ನು ಪಡೆಯದೇ ಆತನ ಹೆಸರಿನಲ್ಲಿ ಒಂದು ಭೂಮಿಯನ್ನು ಬರೆದು ಅದರಿಂದ ಬರುವ ಉತ್ಪನ್ನವನ್ನು ಧರ್ಮಕಾರ್ಯಗಳಿಗಾಗಿ ಉಪ ಯೋಗಿಸಬೇಕೆಂದು ತೀರ್ಮಾನಿಸಿದರು.

ನಾಗನಾಥನಾದರೂ ಇದಾವ ವಿಷಯವನ್ನೂ ಅರಿಯದೆ ಮೊದಲಿ ನಂತೆ ತನ್ನ ವೃತ್ತಿಯಿಂದ ಬರುವ ಪ್ರತಿಫಲದಲ್ಲಿ ಉಪಜೀವಿಸಿ ತೃಪ್ತನಾಗಿ ದ್ದನು. ಇಂತು ಕೆಲದಿನಗಳು ಕಳೆದ ಮೇಲೆ ಆ ಗ್ರಾಮಕ್ಕೆ ಮತ್ತೊಬ್ಬ ಹೊಸ ಅಧಿಕಾರಿಯು ಬಂದನು. ಅವನು ನಾಗನಾಥನ ಹೆಸರಿನಲ್ಲಿದ್ದ ಜಮೀನನ್ನು ಸರಕಾರಕ್ಕೆ ಸೇರಿಸಿಕೊಂಡನು. ಈ ಸಂಗತಿಯನ್ನರಿತ ಪುರ ಜನರು ನಾಗನಾಥನ ಹೆಸರಿನಲ್ಲಿದ್ದ ಜಮೀನನ್ನು ಬಿಟ್ಟುಕೊಡಬೇಕೆಂದು ಬಹುವಿಧದಲ್ಲಿ ಕೇಳಿಕೊಂಡರೂ ಅದಕ್ಕೆ ಲಕ್ಷ್ಯಗೊಡಲಿಲ್ಲ. ಒಂದು ದಿನ ತಾನೇ ಜಗನ್ಮಿತ್ರ ನಾಗನಾಥನನ್ನು ಕರೆಯಿಸಿಕೊಂಡು ಅಯ್ಯಾ! ಈ ಊರ

ಜನರು ನಿನ್ನ ಮಹಿಮೆಯನ್ನು ಬಹಳವಾಗಿ ಕೊಂಡಾಡುತ್ತಿರುವರು. ನೀನು ಜಗನ್ಮಿತ್ರ ನಾಗನಾಥನೆಂದು ಹೆಸರು ಪಡೆದಿರುವಿಯಷ್ಟೇ? ಹಾಗಾದರೆ ನೀನು ಜಗತ್ತಿನ ಎಲ್ಲ ಜೀವಿ ವರ್ಗಕ್ಕೂ ಮಿತ್ರನಾಗಿರಬೇಕಲ್ಲವೇ? ನಮಗೆ ವ್ಯಾಘ್ರವು ವಂಶಪರಂಪರೆಯಾದ ಕುಲದೇವತೆಯಾಗಿರುವದು. ಕಾರಣ ಈಗ ವ್ಯಾಘ್ರವನ್ನು ಪೂಜೆ ಮಾಡಬೇಕಾಗಿದೆ. ಆದ್ದರಿಂದ ನೀನು ಸಾಯಂಕಾಲ ದೊಳಗಾಗಿ ಅಡವಿಯಿಂದೊಂದು ವ್ಯಾಘ್ರಯನ್ನು ಹಿಡಿದು ತಂದರೆ ನಿನ್ನ ಹೆಸರಿನ ಜಮೀನನ್ನು ಪುನಃ ಬಿಟ್ಟು ಕೊಡುವೆನು. ಒಂದು ವೇಳೆ ನೀನು ತರದೇಯಿದ್ದ ಪಕ್ಷದಲ್ಲಿ ಆ ಜಮೀನು ನಿನ್ನ ಹೆಸರಿಗೆ ಬಂದಾರಭ್ಯ ಅದರಿಂದ ಬಂದ ಉತ್ಪನ್ನ ನಿನ್ನಿಂದ ವಸೂಲ ಮಾಡಲಾದೀತು ಎಂದು ಹೇಳಿದ. ಅಧಿ ಕಾರಿಯ ಮಾತಿಗೆ ಯತ್ನವಿಲ್ಲದೇ ಒಪ್ಪಿಕೊಂಡು ಕೂಡಲೇ ಒಂದು ಅರ ಣ್ಯಕ್ಕೆ ಹೊರಟುಹೋದನು.

ಅಡವಿಯಲ್ಲಿಯ ಕಾಡುಮೃಗಗಳ ಕೈಯಲ್ಲಿ ಸಿಕ್ಕು ಜೀವದಿಂದ ಉಳಿದು ಬರುವದೇ ಮಹಾ ಕಠಿಣವೆನಿಸುವಾಗ, ಕಾಡು ಮೃಗವಾದ ಹುಲಿಯನ್ನು ಜೀವಂತ ಹಿಡಿದು ತರುವದೆಂದರೆ ಸಾಮಾನ್ಯವಾದುದೇ? ಅದರಲ್ಲಿಯೂ ಬರಿಗೈಯಿಂದ ಅಡವಿಗೆ ತೆರಳುವದೆಂದರೆ ಮೃತ್ಯುವಿಗೆ ಕರೆಕೊಟ್ಟಂತೆಯೇ. ಇಂಥ ಕಠಿಣ ಕಾರ್ಯ ಕೈಕೊಂಡ ನಾಗನಾಥನು ಹುಲಿ ಹಿಡಿಯಲು ಅಡವಿ ಯಲ್ಲಿ ಅತ್ತಿತ್ತ ಅಲೆಯುತ್ತಿದ್ದನು. ಎಷ್ಟು ತಿರುಗಿದರೂ ಯಾವದೊಂದು ಹುಲಿಯೂ ಕಂಡುಬರಲಿಲ್ಲ. ಆಗ ನಾಗನಾಥನು ಎಲೈ ಅನಾಥಬಂಧುವೇ! ಈಗ ಈ ಅಧಿಕಾರಿಯು ನನ್ನನ್ನು ಪರೀಕ್ಷಿಸುತ್ತಿದ್ದಾನಲ್ಲಾ! ಈ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಬಲ್ಲೆನೇ? ಎಂದು ಭಗವಂತನನ್ನು ಅನನ್ಯ ಭಕ್ತಿ ಯಿಂದ ಪ್ರಾರ್ಥಿಸಲು ಶ್ರೀಮನ್ ನಾರಾಯಣನು ಭಯಂಕರವಾದ ವ್ಯಾಘ್ರ ರೂಪದಿಂದ ಪ್ರತ್ಯಕ್ಷನಾದನು. ಆಗ ನಾಗನಾಥನು ಆ ಭೀಕರ ವ್ಯಾಘ್ರವನ್ನು ಕಂಡು ಸ್ವಲ್ಪವೂ ಭಯಪಡದೇ ಆ ವ್ಯಾಘ್ರ ರೂಪಿಯಾದ ಭಗವಂತನಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಿ, ಎಲೈ ದೀನ ಬಂಧುವೇ! ನೀನು ನನ್ನ ಜೊತೆಯಲ್ಲಿ ಬಂದು ಆ ಗ್ರಾಮಾಧಿಕಾರಿಯಿಂದ ಪೂಜೆಯನ್ನು ಸ್ವೀಕರಿಸಿ, ನನ್ನ ಮಾನರಕ್ಷಣೆ ಮಾಡಬೇಕೆಂದು ಬೇಡಿಕೊಳ್ಳಲು, ಆಗ ಆ ವ್ಯಾಘ್ರರೂಪಿ ಶ್ರೀಹರಿಯು– ನಾಗನಾಥಾ, ನಿನ್ನ ಘೋರತರವನ್ನು ನನ್ನ

ಕೊರಳಿಗೆ ಕಟ್ಟಿ ಕರೆದುಕೊಂಡು ನಡಿ ಎಂದು ಹೇಳಲು ನಾಗನಾಥನು ಅದೇ ಪ್ರಕಾರ ಹುಲಿಯನ್ನು ಕರೆದುಕೊಂಡು ನಡೆದನು.

ಇಂತು ಜಗನ್ಮಿತ್ರ ನಾಗನಾಥನು ಆ ಹುಲಿಯನ್ನು ಕರೆದುಕೊಂಡು ಬರಲು, ಭಯಂಕರವಾದ ಈ ಹುಲಿಯನ್ನು ಕಂಡು, ಊರ ಜನರೂ, ಪಶುಗಳೂ ಹೆದರಿ ಓಡಿ ಹೋಗಿ ಕೋಟೆಯ ಬಾಗಿಲನ್ನು ಹಾಕಿ ಭದ್ರಪಡಿಸಿ ಅಲ್ಲಿಯೇ ಅವಿತುಕೊಂಡರು. ನಾಗನಾಥನು ಆ ಹುಲಿಯೊಡನೆ ಬರಲು ಕೋಟೆಯ ಬಾಗಿಲು ಮುಚ್ಚಿರುವದನ್ನು ಕಂಡು ಇಂದೇಕೆ ಈ ಬಾಗಿಲವು ಮುಚ್ಚಿದೆ, ಎಂದೆನ್ನುತ್ತಿರುವಾಗಲೇ ಆ ವ್ಯಾಘ್ರವು ತನ್ನ ಕಾಲುಗಳಿಂದ ನೂಕಿ ಮುರಿದು ಮುನ್ನಡೆಯಿತು. ಆಗ ಆ ನಾಗನಾಥನು ಆ ಹುಲಿಯೊಡನೆ ಊರಲ್ಲಿ ತಿರುಗಾಡಿ ಆ ಅಧಿಕಾರಿಯನ್ನು ಹುಡುಕುತ್ತ ಅಧಿಕಾರಿಯ ಮನೆಯತ್ತ ಹೊರಟನು. ಊರ ಜನರು ವ್ಯಾಘ್ರನನ್ನು ನೋಡಿ ಭಯಪಡುತ್ತಿರಲು– ನಾಗನಾಥನು ಹೆದರಬೇಡಿರಿ, ಭಗವಂತನೇ ವ್ಯಾಘ್ರರೂಪದಿಂದ ಬಂದಿರುವನು. ಅವನು ಅಧಿಕಾರಿಯಿಂದ ಪೂಜೆಯನ್ನು ಸ್ವೀಕರಿಸಿ ಹೊರಟು ಹೋಗುವನು. ಅಧಿಕಾರಿಯ ಅಪ್ಪಣೆಯಿಂದ ನಾನು ಕರೆತಂದಿರುವೆನು. ಕಾರಣ ನೀವು ಭಯಪಡಬೇಡಿರಿ. ಎಂದು ಹೇಳುತ್ತ ಅಧಿಕಾರಿಯ ಮನೆಗೆ ಬರಲು ಹೆದರಿಕೆಯಿಂದ ಆ ಅಧಿಕಾರಿಯು ಮನೆಯ ಬಾಗಿಲ ಮುಚ್ಚಿಕೊಂಡು ಮೂಲೆಯಲ್ಲಿ ಕುಳಿತಿದ್ದನು. ಕೋಟೆಯ ಬಾಗಿಲ ಮುಚ್ಚಿದಂತೆ ಆಗ ಆ ವ್ಯಾಘ್ರವು ಆ ಬಾಗಿಲವನ್ನು ಮುರಿಯಲು ನಾಗನಾಥನು ಒಳಗೆ ನುಗ್ಗಿ ನೋಡಲು ಯಾರೂ ಕಾಣಲಿಲ್ಲ. ಆಗ ಆ ಹುಲಿಯನ್ನು ಕಂಬಕ್ಕೆ ಕಟ್ಟಿ ತಾನು ಅಧಿಕಾರಿಯನ್ನು ಹುಡುಕುತ್ತಿದ್ದನು.

ಅಧಿಕಾರಿಯು ತನ್ನ ಕಪಟತನ ಹೊರಬಿದ್ದದರಿಂದಲೂ, ಪ್ರಾಣಭಯದಿಂದಲೂ ಹೆಂಡಿರುಮಕ್ಕಳನ್ನು ಒಂದೆಡೆ ಮುಚ್ಚಿಟ್ಟು ತಾನೂ ಒಂದು ಮೂಲೆಯಲ್ಲಿ ಅವಿತು ಕುಳಿತನು.

ಮನೆತುಂಬ ಹುಡುಕುತ್ತಿದ್ದ ನಾಗನಾಥನು ಅಲ್ಲಿಯೇ ಒಂದು ಮೂಲೆಯಲ್ಲಿ ಅವಿತು ಕುಳಿತಿದ್ದ ಅಧಿಕಾರಿಯನ್ನು ಕಂಡು, ವಿನಯದಿಂದ ಸ್ವಾಮೀ ನಿಮ್ಮ ಅಪ್ಪಣೆಯಂತೆ ನಿಮ್ಮ ಕುಲದೇವತೆಯಾದ ವ್ಯಾಘ್ರವನ್ನು ಹಿಡಿದು ತಂದಿದ್ದೇನೆ. ಬೇಕಾದ ಪೂಜೆಯನ್ನು ಮಾಡಬಹುದು. ಆದರೆ ಹೀಗೇಕೆ

ಭಯಪಡುತ್ತಿರುವಿರಿ ? ಎಂದು ಕೇಳಲು ಅದಕ್ಕೆ ಆ ಅಧಿಕಾರಿಯು ನಾಚಿಕೆಯಿಂದ ತಲೆತಗ್ಗಿಸಿ ನಿಂತುಕೊಂಡು- ಮಹಾನುಭಾವಾ ! ನಿನ್ನ ಮಹಿಮೆಯನ್ನರಿಯದ ನಾನು ನಿನಗೆ ಕುಚೇಷ್ಟೆಗಾಗಿ ಹಾಗೆಂದೆ. ನನ್ನ ತಪ್ಪನ್ನು ಕ್ಷಮಿಸಿ ಉದ್ಧರಿಸು. ಎಂದು ಪ್ರಾರ್ಥಿಸುತ್ತಿದ್ದನು. ಅಷ್ಟೊತ್ತಿಗೆ ಊರಲ್ಲಿಯ ಪ್ರಮುಖ ಸಜ್ಜನರೂ, ಪಂಡಿತರೂ ಬಂದು ನಡೆದ ಆಶ್ಚರ್ಯವನ್ನು ನಿರೀಕ್ಷಿಸಿ, ಆ ಅಧಿಕಾರಿಯ ಅಧಿಕ ಪ್ರಸಂಗತನವನ್ನೂ, ಜಗನ್ಮಿತ್ರ ನಾಗನಾಥನ ಮಹಿಮೆಯನ್ನೂ ಕಂಡು ಭಗವಂತನೇ ವ್ಯಾಘ್ರರೂಪದಿಂದ ಬಂದಿರುವನೆಂದು ನಂಬಿದವರಾಗಿ ಪರಮಾತ್ಮನನ್ನು ಸ್ತುತಿಸತೊಡಗಿದರು. ಆಗಾ ಅಧಿಕಾರಿಯು ನಾಗನಾಥನನ್ನು ಕುರಿತು ಭಾಗವತೋತ್ತಮಾ ! ಇಂದು ನನಗೆ ನಿನ್ನಿಂದ ಚನ್ನಾಗಿ ಜ್ಞಾನೋದಯವಾಯಿತು. ಭಗವಂತನು ಭಕ್ತಾಧೀನನೆಂಬ ವಿಷಯವನ್ನೂ ಅರಿತುಕೊಂಡೆನು. ಇನ್ನು ಮೇಲೆ ಇಂಥ ಕುಚೇಷ್ಟೆಯನ್ನು ಎಂದೂ ಮಾಡುವದಿಲ್ಲ. ನನ್ನ ಅಪರಾಧವನ್ನು ಕ್ಷಮಿಸಿ ರಕ್ಷಿಸು. ಎಂದು ಬೇಡಿಕೊಳ್ಳಲು ನಾಗನಾಥನು ಇನ್ನುಮೇಲೆ ಇಂಥ ಗೋಜಿಗೆ ಹೋಗದೆ ಸರ್ವವೂ ಭಗವಂತನ ಸ್ವರೂಪವೆಂದು ಭಾವಿಸಿ ಆತನ ನಾಮೋಚ್ಚಾರಣೆಯನ್ನು ಮಾಡುತ್ತಿರು. ನಿನ್ನ ಕೈಕೆಳಗಿನ ಜನರನ್ನು ನೀತಿಯಿಂದ ರಕ್ಷಿಸುತ್ತ ಸುಖವಾಗಿರು. ಎಂದು ಹೇಳಿ ವ್ಯಾಘ್ರರೂಪಿಯಾಗಿದ್ದ ಪರಮಾತ್ಮನಿಗೆ ನಮಸ್ಕರಿಸಿ ಸ್ತೋತ್ರ, ಮಾಡಲಾರಂಭಿಸಿ, ಅಲ್ಲಿ ಜನರಿಗೆ ಈ ಪ್ರಕಾರ ಪರಮಾತ್ಮನ ಮಹಿಮೆಯನ್ನು ವಿವರಿಸಿದನು.

ಯಾವ ಭಗವಂತನು ಜನನ ಮರಣ ರಹಿತನಾಗಿಯೂ, ನಾಮರೂಪಗಳಿಲ್ಲದವನಾಗಿಯೂ, ಗುಣದೋಷರಹಿತನಾಗಿಯೂ ಮೆರೆಯುತ್ತಿದ್ದರೂ, ಸೃಷ್ಟಿಯ ಲಯಾಲಯಗಳಿಗಾಗಿ ಆಗಾಗ ಜನ್ಮವೆತ್ತಿ ರಕ್ಷಿಸುತ್ತ ಬಂದಿರುವನು. ಮತ್ತು ಆತನು ಸರ್ವವ್ಯಾಪಕನಾಗಿಯೂ, ಅನಂತ ರೂಪವುಳ್ಳವನಾಗಿಯೂ, ಆಶ್ಚರ್ಯಕಾರಕ ತನ್ನ ಮಾಯೆಯಿಂದ ಸೃಷ್ಟಿಯ ಸರ್ವ ಸೂತ್ರಗಳನ್ನೂ ತನ್ನ ಆಧೀನದಲ್ಲಿಟ್ಟುಕೊಂಡು ಸರಿಯಾಗಿ ನಡೆಸುತ್ತಿರುವ ಆತನ ಶಕ್ತಿ ವಿಶೇಷಗಳನ್ನು ಪೂರ್ತಿ ಹೇಳಲು ಆದಿಶೇಷನಿಗೂ ಸಾಧ್ಯವಿಲ್ಲ ಎಂದನು. ಭಗವಂತನು ವ್ಯಾಘ್ರರೂಪವನ್ನು ತೊರೆದು ನಿಜರೂಪದಿಂದ ಪ್ರಸನ್ನನಾಗಿ ನಾಗನಾಥನನ್ನು ಆಲಂಗಿಸಿಕೊಂಡು–ಭಕ್ತನೇ, ನೀನಿನ್ನು ನಿನ್ನ

ಮನೆಗೆ ತೆರಳಿ ಮೊದಲಿನಂತೆ ನನ್ನ ಪ್ರಾರ್ಥನೆಯಲ್ಲಿ ಸುಖವಾಗಿ ಕಾಲಕಳೆಯುತ್ತಿರು ಎಂದು ಹೇಳಿ ಅಂತರ್ಗತನಾದನು. ನಾಗನಾಥನಲ್ಲಿಂದ ಊರಿಗೆ ಬರಲು ಗ್ರಾಮದ ಜನರೂ, ಅಧಿಕಾರಿಗಳೂ ಭಯಭಕ್ತಿ ವಿಶ್ವಾಸಗಳಿಂದ ಎದುರುಗೊಂಡು ಆತನ ಭಕ್ತಿಭಾವಗಳನ್ನೂ, ಮಹಿಮೆಯನ್ನೂ ಕೊಂಡಾಡುತ್ತ ಆತನಮನೆ ಸೇರಿದರು. ನಾಗನಾಥನು ಇಂತು ಹರಿಭಕ್ತಿಯಲ್ಲಿ ಕಾಲ ಕಳೆದು ಒಂದು ದಿನ ಶ್ರೀಕಾಂತನ ಪಾದಪದ್ಮಗಳಲ್ಲಿ ಐಕ್ಯನಾದನು.

---

## ೨೧. ಭಕ್ತ ಕಬೀರದಾಸ

ಕಾಶೀನಗರದಲ್ಲಿ ಮಹಮ್ಮದೀಯ ಧರ್ಮದವನಾದ ತಮಾಲನೆಂಬಾತನು ತನ್ನ ಸಹಧರ್ಮಿಣಿಯಾದ ಬೀಜಾಬೇಬಿ ಎಂಬ ಸಾಧ್ವಿ ಶಿರೋಮಣಿಯೊಡನೆ ಸುಖಸಂಸಾರವನ್ನು ಸಾಗಿಸಿಕೊಂಡಿದ್ದನು. ಆತನು ತನ್ನ ಜೀವನೋಪಾಯಕ್ಕಾಗಿ ಮನೆತನದ ಮೂಲ ಉದ್ಯೋಗ ನೇಯ್ಗೆಯ ಕೆಲಸವನ್ನು ಮಾಡುತ್ತಿದ್ದನು. ಇವರಿಗೆ ಯೌವನವು ಕಳೆದು ಮುಪ್ಪಾವಸ್ಥೆಯು ಸಮೀಪಿಸಿದರೂ ಮಕ್ಕಳು ಮಾತ್ರ ಆಗಿರಲಿಲ್ಲ. ಇಂಥ ವಯಸ್ಸಿನಲ್ಲಿ ಮಕ್ಕಳು ಆಗುವವೆಂದು ನಂಬಿರಲೂ ಇಲ್ಲ, ಅದಕ್ಕಾಗಿ ಅವರು ಚಿಂತಿಸುತ್ತಿರಲೂ ಇಲ್ಲ. ಒಂದು ದಿನ ಒಬ್ಬ ಫಕೀರನು ಅವರ ಮನೆಗೆ ಬಂದು ಭಿಕ್ಷೆಬೇಡಿದನು; ಆಗಾ ಸಾಧ್ವಿಯು ಕೈತುಂಬ ಭಿಕ್ಷೆತಂದು ಆ ಫಕೀರನಿಗೆ ನೀಡಲು ಆ ಫಕೀರನು ಅಮ್ಮಾ, ನೀನು ಪೂಜ್ಯಪುರುಷನ ತಾಯಿಯಾಗು ಎಂದು ಆಶೀರ್ವದಿಸಿದನು. ಆಗಾ ಸಾಧ್ವಿಯು ವಿಸ್ಮಿತಳಾಗಿ ಸ್ತಬ್ಧಳಾಗಿ ನಿಂತುಬಿಟ್ಟಳು. ಆಗ ಫಕೀರನು ಏಕಮ್ಮಾ, ವಿಚಾರಿಸುತ್ತಿರುವಿ ನಿನಗೆ ನಂಬಿಗೆಯಾಗಲಿಲ್ಲವೆ; ಅಲ್ಲಾನ ಅಪ್ಪಣೆಯಂತೆ ನೀನು ನಿಶ್ಚಯವಾಗಿ ಸತ್ಪುತ್ರನ ತಾಯಿಯಾಗುವಿ ಎಂದು ಹೇಳಿ ಹೊರಟುಹೋದನು. ಆಗ ತಮಾಲನು ಮನೆಯಲ್ಲಿರಲಿಲ್ಲವಾದ್ದರಿಂದ ಆತನು ಬಂದಕೂಡಲೇ ನಡೆದ ಸಮಾಚಾರವನ್ನು ಆತನಿಗೆ ಅರುಹಿದಳು. ಆಗಾತನು ತನ್ನ ಸತಿಯನ್ನು ಕುರಿತು, ನಸುನಕ್ಕು ನೆಟ್ಟಗಿದೆ ಯೌವ್ವನ

ದಲ್ಲಾಗದ ಮಕ್ಕಳು ಮುಪ್ಪು ಸಮೀಪಿಸಿಸಿದಾಗ ಆಗಬಲ್ಲವೇ ? ನೀನೆಂಥ ಹುಚ್ಚಿಯು ಎಂದನು. ಆಗ ಬೀಜಾಬೀಬಿಯು ಹಾಗೆನ್ನಕೂಡದು ನಾಥಾ ! ಎಲ್ಲ ಫಕೀರರೂ ಒಂದೇ ಇರುವದಿಲ್ಲ. ಅವರಲ್ಲನೇಕರು ತ್ರಿಕಾಲಜ್ಞಾನಿಗಳಾದ ಸತ್ಪುರುಷರು. ಅವರಾಡಿದ ಮಾತು ಎಂದೂ ಸುಳ್ಳಾಗಲಾರವು. ಎಂದೆನಲು ಆಗ ತಮಾಲನು ಯೋಚಿಸಿ ಆದರೂ ಆಗಬಹುದು. ಭಗವಂತನ ಮರ್ಮವನ್ನು ಬಲ್ಲರು ಮಹಾತ್ಮರು. ಮಹಾತ್ಮರ ವಚನಗಳನ್ನು ಪೂರೈಸುವ. ಭಗವಂತನ ಆಜ್ಞೆಯಾದರೆ ಏನು ತಾನೇ ಆಗಲಾರದು. ಎಂದು ನಿಶ್ಚಯಿಸಿ ಸಮ್ಮತನಾದನು. ಕೆಲ ದಿನಗಳು ಕಳೆದ ನಂತರ ಒಂದು ದಿನ ಬೆಳಿಗ್ಗೆ ತಮಾಲನು ಹೊಳೆಯಲ್ಲಿ ಸ್ನಾನಮಾಡಿ ಒರುವಾಗ್ಗೆ ನೂಲು ಕಂಡಿಕೆಗಳನ್ನು ತೊಯ್ಸಿಕೊಂಡು ಬರಬೇಕೆಂದಾಲೋಚಿಸಿ ತಗೆದುಕೊಂಡು ಹೊರಟು ಗಂಗಾನದಿಗೆ ಬಂದನು. ಕಂಡಿಕೆಗಳನ್ನು ತೊಯಿಸಿ, ಒಂದೆಡೆಯಿಟ್ಟು ಸ್ನಾನಕ್ಕೆಂದು ನೀರಿಗಿಳಿದನು. ದೇವರ ಧ್ಯಾನ ಮಾಡುತ್ತ ಸ್ನಾನ ಮಾಡುತ್ತಿರುವಾಗ ಆತನಿಗೆದುರಾಗಿ ಒಂದು ಮುತ್ತಿನ ಶಿಂಪೆಯು ನೀರ ಮೇಲೆ ತೇಲುತ್ತ ಪ್ರವಾಹದೊಡನೆ ಹರಿದು ಬರುತ್ತಿದ್ದಿತು. ಆಗದನ್ನು ನೋಡಿ ತಮಾಲನು ಅದೇನೆಂದು ತಿಳಿಯಲು ಸ್ವಲ್ಪ ಮುಂದೆ ಹೋಗಿ ನೋಡಲು ಅದರಲ್ಲಿ ಸರ್ವಾಂಗಸುಂದರವಾದ ಒಂದುಮಗುವಿದ್ದಿತು. ಅದನ್ನು ಕಂಡು ತಮಾಲನಿಗೆ ಮಹಾ ಸಂತೋಷವಾಯಿತು. ತಮಾಲನು ನಿಧಾನವಾಗಿ ಮುತ್ತಿನ ಶಿಂಪನ್ನು ಕೈಯ್ಯಲ್ಲಿ ತೆಗೆದುಕೊಂಡು ನೂಲಿನ ಗಂಟನ್ನು ಬಗಲಲ್ಲಿ ಹಿಡಿದುಕೊಂಡು ಮನೆಗೆ ಬಂದನು. ತನ್ನ ಸತಿಯನ್ನು ಕರೆದು ಮುತ್ತಿನ ಶಿಂಪನ್ನು ಆಕೆಯ ಕೈಗೆ ಕೊಟ್ಟು ನಡೆದ ಸಂಗತಿಯನ್ನು ಹೇಳಿದನು. ಆಗಾ ಬೀಜಾಬಿಯು ಫಕೀರನು ಹೇಳಿದಂತೆ ನಾನು ಮಗುವಿನ ತಾಯಿಯಾದೆನಲ್ಲವೇ ? ಎಂದು ಗಂಡನಿಗೆ ಹೇಳಿ, ಮಮತೆಯಿಂದ ಆ ಮಗುವಿಗೆ ಮುದ್ದಿಟ್ಟೊಡನೆ ಕುಚಗಳು ಕ್ಷೀರದಿಂದ ತುಂಬಿಕೊಂಡವು. ಮಗುವು ಬಾಯಿಬಿಟ್ಟು ಅತ್ತಿತು, ಆಗಾ ತಾಯಿಯು ಮೊಲೆಯುಣಿಸಿದಳು.

ಭಗವಂತನ ಮಾಯಾ ವಿಲಾಸವು ಅಪಾರವಾದುದು. ಖಣಿಯಲ್ಲಿ ದೊರೆಯುವ ಬಂಗಾರವು ಕಮಲದಲ್ಲಿ ದೊರೆತಂತೆ ಮಗು ದೊರೆಯಿತು. ಬಂಜೆಭಾವಿಯು ಶಲೆಯೊಡೆದಂತೆ ಬಂಜೆಯ ವೃಕ್ಷೋಜಗಳಲ್ಲಿ ಕ್ಷೀರದ ಶಲೆಯೊಡೆಯಿತು.

ತಮಾಲ ದಂಪತಿಗಳು ಆ ಮಗುವಿಗೆ ಕಬೀರನೆಂದು ನಾಮಕರಣ ಮಾಡಿ ಹೊಟ್ಟೆಯ ಮಗನಂತೆ ಸಾಕಿ ಸಲುಹಿದರು. ಕಬೀರನು ಶುಕ್ಲಪಕ್ಷದ ಚಂದ್ರನಂತೆ ಬೆಳೆಯತೊಡಗಿದನು. ನಯನಮನೋಹರ ರೂಪಲಾವಣ್ಯ ಗಳಿಂದ ತುಂಬಿತುಳುಕುತ್ತಿರುವ ಕಬೀರನನ್ನು ಕಂಡವರು ಪ್ರೀತಿಯಿಂದ ಮಾತನಾಡಿಸದೆ ಇರುತ್ತಿರಲಿಲ್ಲ. ಕಬೀರನಿಗೆ ಐದು ವರ್ಷಗಳು ನಡೆಯುತ್ತಿರುವಾಗಲೇ ಅಕ್ಷರಾಭ್ಯಾಸವನ್ನು ಸುರುಮಾಡಿಸಿದರು. ಬಾಲಕನು ಬಹು ಸೂಕ್ಷ್ಮಗ್ರಹಣ ಶಕ್ತಿಯುಳ್ಳವನಾದ್ದರಿಂದ ಹೇಳಿದ್ದನ್ನು ಕೂಡಲೇ ತಿಳಿದು ಕೊಳ್ಳುತ್ತಿದ್ದನು.

ಕಬೀರನಿಗೆ ಆಟಗಳಲ್ಲಿ ಆಸಕ್ತಿಯಿರಲಿಲ್ಲ. ಅದರ ಬದಲಾಗಿ ಆತನು ಆಗಾಗ್ಗೆ ಧ್ಯಾನಯೋಗಿಯಂತೆ ಪದ್ಮಾಸನದಲ್ಲಿ ಕುಳಿತು ಕಣ್ಣುಮುಚ್ಚಿ ಹರಿ, ಹರಿ ಎಂದು ಉಚ್ಚರಿಸುತ್ತಿದ್ದನು. ಆದರೆ ಕಬೀರನು ಬಾಲಕನಿದ್ದುದ ರಿಂದ ತೊದಲು ನುಡಿಯಿಂದ ಅಂದದ್ದು, ಆಡಿದ್ದು ಎಲ್ಲವೂ ತಮಾಲ ದಂಪತಿಗಳಿಗೆ ವಿನೋದಗಳ ರೂಪದಲ್ಲಿ ಆನಂದವನ್ನುಂಟುಮಾಡಿದವು. ಆದರೆ ಆತನು ಬೆಳೆದಂತೆ ಆತನ " ಹರಿ " ನಾಮೋಚ್ಚಾರಣೆಯೂ ಬೆಳೆಯ ತೊಡಗಿತು.

ಕಬೀರನು ಹನ್ನೆರಡು ವರ್ಷದವನಾಗುವದರಲ್ಲಿಯೇ ಎಲ್ಲ ವಿಷಯ ಗಳನ್ನೂ ಸರಳವಾಗಿ ಬಿಡಿಸಬಲ್ಲವನಾದ ವಾಂಙ್ಮಯಾದ. ವಜ್ರಕ್ಕೆ ಕುಂದಣಹಾಕಿದಂತೆ ನಯವಿನಯಗಳು ನೆಲೆಗೊಂಡವು. ಆದರೆ ಹರಿ ನಾಮೋಚ್ಚರಣೆಯೊಂದು ಸ್ವಧರ್ಮಕ್ಕೆ ವಿರೋಧವಾಗಿ ನೆಲೆಗೊಂಡಿದ್ದ ರಿಂದ ಸ್ವಧರ್ಮಾಭಿಮಾನವುಳ್ಳ ಮಹಮ್ಮದೀಯರ ಅಸಮಾಧಾನಕ್ಕೆ ಅವ ಕಾಶವುಂಟಾಯಿತು. ತಮಾಲನೂ ಬೀಜಾಬೀಬಿಯೂ ಅನೇಕಾನೇಕ ಸಲ ಕಬೀರನಿಗೆ ಹರಿನಾಮೋಚ್ಚರಣೆಯನ್ನು ಬಿಡು ಎಂದು ಹೇಳಿದರೂ ಕಬೀರನು ಅವರ ಮಾತಿಗೊಪ್ಪದೇ ತನ್ನ ಇಚ್ಛೆಯಂತೆ ಹರಿನಾಮೋಚ್ಚ ರಣೆಯನ್ನು ಹಾಗೇ ಮುಂದರಿಸಿದನು. ಇದರಿಂದ ತಮಾಲ ದಂಪತಿಗಳು ಸ್ವಲ್ಪ ಚಿಂತೆಗೊಂಡರು. ಇವನ ನಡತೆಯನ್ನು ಖಾಜಿಗಳಂತೂ ಸಹಿಸ ತಕ್ಕವರಲ್ಲ. ಆಗಲಿ ಮಾಡುವದೇನು ಖಾಜಿ (ಇಸ್ಲಾಮು ಧರ್ಮದ ಪುರೋ ಹಿತರು) ಗಳಿಗೆ ತಿಳಿಸಿ ನೋಡೋಣ. ಅವರೇನು ಹೇಳುವರೋ ಹಾಗೆ

ಮಾಡಿದರಾಯಿತು. ಎಂದು ಹೇಳಿ ತಮಾಲನು ಖಾಜಿಯ ಮನೆಗೆ ಹೋಗಿ ಅವನನ್ನು ಕಂಡು, ಇದ್ದ ಸಂಗತಿಯನ್ನು ತಿಳಿಸಿದನು.

ಆಗ ಆ ಖಾಜಿಯು ತಮಾಲ ಅದಕ್ಕೇಕೆ ಚಿಂತಿಸುವಿ. ನಮ್ಮ ಧರ್ಮ ದೀಕ್ಷೆಯಾದ "ಸುನ್ನತ್"ವನ್ನು ಮಾಡಿಸು. ಅಂದರೆ ಎಲ್ಲವೂ ಸರಿಹೋಗುವದೆಂದನು. ತಮಾಲನು ಖಾಜಿಹೇಳಿದ ಮಾತು ಸರಿಯೆಂದು ನಂಬಿ "ಸುನ್ನತ್" ದೀಕ್ಷೆಯನ್ನು ಮಗನಿಗೆ ಕೊಡಿಸುವದಕ್ಕಾಗಿ ಎಲ್ಲ ತಯಾರಿಯನ್ನೂ ಮಾಡಿಕೊಂಡು ಖಾಜಿಗಳಿಗೂ ಇಷ್ಟ ಬಂಧು - ಬಳಗದವರಿಗೂ ಹೇಳಿಕಳಿಸಿ, ಕರೆಯಿಸಿಕೊಂಡನು. ಸುನ್ನತ್ ಕರ್ಮಾಂಡವು ಪ್ರಾರಂಭವಾಯಿತು. ಖಾಜಿಯು ಕಬೀರನಿಗೆ ಇತ್ತ ಬಾ. ಇಲ್ಲಿ ಕುಳಿತುಕೊ. ಈ ಹಜಾಮನು ನಿನಗೆ ಸುನ್ನತ್ ಮಾಡುವನು. ಆಗ ನಾನು ಮತ ವಿಧಿಗಳಿಗನುಸಾರವಾಗಿ ಮಂತ್ರೋಕ್ತಿಗಳನ್ನು ಪೂರೈಸಬೇಕಾಗುತ್ತದೆ. ಕಾರಣ ತೀವ್ರ ಬಾ, ಎಂದು ಕರೆದನು.

ಕಬೀರ—ಖಾಜಿಗಳೇ, ಈ ಸುನ್ನತ್ ಕರ್ಮಪದ್ಧತಿಯು ನಮ್ಮ ಮತದವರಿಗೆ ಮಾತ್ರ ಇದೆಯಲ್ಲವೇ ?

ಖಾಜಿ—ಅಹುದು.

ಕಬೀರ—ಹಾಗಾದರೆ, ಇತರ ಧರ್ಮದವರಿಗೇಕಿಲ್ಲ?

ಖಾಜಿ—ಅದು ಅವರ ವಿಚಾರ.

ಕಬೀರ—ಹಾಗಾದರೆ, ನಮ್ಮನ್ನು ಪುನಿತರನ್ನಾಗಿ ಮಾಡಬೇಕೆಂಬ ಸದ್ಬುದ್ಧಿಯಿಂದಲ್ಲವೇ. ನೀವು ಸುನ್ನತ್ ವಿಧಾನವನ್ನು ಪೂರೈಸುವದು.

ಖಾಜಿ—ನಿಜ ನೀನು ಈ ವಿಚಾರವನ್ನು ಚನ್ನಾಗಿ ತಿಳಿದಿರುವೆಯಲ್ಲ; ಮತ್ತೇಕೆ ಸಂದೇಹ ?

ಕಬೀರ—ಸಂದೇಹವಿದೆ. ಪ್ರತಿ ಮಾನವನನ್ನು ಮತದ ಅರ್ಹತೆಯುಳ್ಳವರನ್ನಾಗಿ ಮಾಡುವದಲ್ಲದೇ ಪರಿಶುದ್ಧನನ್ನಾಗಿಯೂ ಮಾಡತಕ್ಕ ಈ ಧರ್ಮ ದೀಕ್ಷೆಯನ್ನು ಸ್ತ್ರೀಯರಿಗೂ ಮಾಡದೇ ಪುರುಷರಿಗೆ ಮಾತ್ರವೇಕೆ ?

ಖಾಜಿ— ಹಾಗೆಲ್ಲ ಮಾತನಾಡಬಾರದು. ಸ್ತ್ರೀಯರು ಕುರಾನದಲ್ಲಿ ವಿಧಿಸಲ್ಪಟ್ಟ ಮಂತ್ರೋಚ್ಚಾರಣೆಯಿಂದಲೇ ಪರಿಶುದ್ಧರಾಗಬಲ್ಲರು. ಸುನ್ನತ್ ಅವರಿಗೆ ತಕ್ಕದಾದುದಲ್ಲ.

ಕಬೀರ— ಹಾಗಾದರೆ ಯಾವ ಮಂತ್ರೋಚ್ಚರಣೆಯಿಂದ ಸ್ತ್ರೀಯರು ಪುನೀತರಾಗಬಲ್ಲರೋ ಅಂಥ ಮಂತ್ರೋಚ್ಚರಣೆಯಿಂದ ಪುರುಷರನ್ನೂ ಪರಿಶುದ್ಧರನ್ನಾಗಿ ಏಕೆ ಮಾಡಬಾರದು? ನಿಷ್ಪಕ್ಷಪಾತಿಯಾದ ದೇವರು ಪುರುಷರು ಅಂಗವಿಚ್ಛೇದನೆಯಿಂದಲೂ, ಸ್ತ್ರೀಯರೂ ಕೇವಲ ಮಂತ್ರೋಚ್ಚರಣೆಯಿಂದಲೂ ಪರಿಶುದ್ಧರಾಗಬಲ್ಲರೆಂದು ಹೇಳುವದು ಅರ್ಥವಿಲ್ಲದ ಮಾತುಗಳು.

ಖಾಜಿ— ಹಾಗೆಲ್ಲ ಮಾತನಾಡಬಾರದು, ನೀನಿನ್ನೂ ಸಣ್ಣವ, ಶಾಸ್ತ್ರಾಭ್ಯಾಸವು ಸಾಕಷ್ಟಾಗಿಲ್ಲ. ನಮ್ಮ ಮತದ ಮೂಲಪುರುಷರಾದ ಇಬ್ರಾಹಿಮ ಪೈಗಂಬರರೂ, ನಮ್ರೂದ ಬಾದಶಹ ಮುಂತಾದವರು ಶ್ರದ್ಧೆಯಿಂದ ಈ ಕರ್ಮವನ್ನು ಆಚರಿಸಿದ್ದಾರೆ; ಇದರ ಮಹಿಮೆಯನ್ನರಿಯದೆ ಈ ಕರ್ಮವನ್ನಾಚರಿಸಿದರೆ? ಇಲ್ಲ. ಅದನ್ನು ತಿಳದೇ ಆಚರಿಸಿದ್ದಾರೆ.

ಕಬೀರ— ಖಾಜಿಗಳೇ! ಇಬ್ರಾಹಿಮ ಪೈಗಂಬರಿಗೂ, ನಮ್ರೂದರಿಗೂ ಅವರು ಮಾಡಿದ ತಪ್ಪಿಗಾಗಿ ಅವರಿಗೆ ಆ ಶಿಕ್ಷೆ ವಿಧಿಸಲ್ಪಟ್ಟಿತು. ಆದರೆ ಅದೇ ಇಬ್ರಾಹಿಮ ಪೈಗಂಬರರ ಕಿರಿಹೆಂಡತಿಯ ಮಗನೂ, ಪುತ್ರಿ ತರರೂ ಈ ಕರ್ಮವನ್ನೇಕೆ ಆಚರಿಸಲಿಲ್ಲ. ಯಮಧರ್ಮಗಳೇ ಆಗಲಿ, ಜ್ಞಾನದಿಂದ ಮೇಲ್ಮೆಯನ್ನು ಹೊಂದುವದೇ ಹೊರ್ತು ಇಂಥ ಕರ್ಮಾಚರಣೆಯಿಂದಲ್ಲ.

ಖಾಜಿ— ನೀನು ಹೇಳುವದು ಕಟ್ಟಕಡೆಯ ಮಾತು. ಜ್ಞಾನವೆಂದರೆ ಮಾರಿಫತ್ ಎಂಬ ಕೊನೆಯ ಅಧ್ಯಾಯಕ್ಕೆ ಸೇರಿರುತ್ತದೆ. ಅದಕ್ಕೂ ಮೊದಲು ಶರೀಖತ್, ತರೀಖತ್, ಅಲೀಖತ್ ಎಂಬ ಭಕ್ತಿಪ್ರಧಾನ ಕಾರ್ಯಗಳನ್ನು ಆಚರಿಸಿದ ನಂತರ ಅಲ್ಲವೇ ಮಾರೀಫತ್ ಆಚರಣೆಯಿಂದ ಜ್ಞಾನಯೋಗ ಸಂಪಾದಿಸಲು ಶಕ್ಯ.

ಕಬೀರ— ಜ್ಞಾನಾಭ್ಯಾಸವು ಕಡೆಯ ಭಾಗವೆಂದು ತಿಳಿದ, ಮುದುಕರಂತೆ ಮಕ್ಕಳೂ ಆಚರಿಸುತ್ತ ಬಂದರೆ ಜ್ಞಾನಯೋಗವನ್ನು ತಿಳಿಯುವದು ಹೇಗೆ? ಅದನ್ನು ಬಿಟ್ಟು ಜ್ಞಾನಯೋಗವು ಈಗ ಸಾಧ್ಯವಲ್ಲ; ಆಗ ಸಾಧ್ಯವೆಂದು ಶುಷ್ಕಸಮಾಧಾನವನ್ನು ಹೇಳಿದರೆ ಧರ್ಮದ ಹೆಸರಿನಲ್ಲಿ ಜನರನ್ನು ಅಜ್ಞಾನಿಗಳನ್ನಾಗಿ ಮಾಡುವ ಶಾಲೆಯೆಂದು ಹೇಳಬಹುದು.

ಖಾಜಿ— (ಬಹಳ ಕೋಪಗೊಂಡು) ಎಲೈ ತಮಾಲ, ಇವನು ಕಾಫರರಂತೆ ನುಡಿಯುತ್ತಿರುವನು. ಇವನು ನಿನ್ನ ಮಗನಾದ್ದರಿಂದ ಸುಮ್ಮನೆ ಬಿಟ್ಟದ್ದೇನೆ. ಮತ್ತೆ ಯಾರಾದರೂ ಆಗಿದ್ದರೆ ತಕ್ಕ ಶಿಕ್ಷೆಯನ್ನು ಮಾಡಿಬಿಡುತ್ತಿದ್ದೆವು. ಇವನನ್ನು ಆದಷ್ಟು ತೀವ್ರ ತಿದ್ದಿ, ಯೋಗ್ಯಮಾರ್ಗಕ್ಕೆ ತರುವದು ನಿಮ್ಮ ಕರ್ತವ್ಯ. ಇಲ್ಲವಾದರೆ ಇವನೊಡನೆ ನಿನ್ನನ್ನೂ ಕುಲ ದಿಂದ ಹೊರದಬ್ಬಿ ಕಠಿಣವಾದ ಬಹಿಷ್ಕಾರ ಹಾಕುವೆವು. ನೆನಪಿರಲಿ ಎಂದು ಹೇಳಿ ಹೊರಟು ಹೋದನು.

ಖಾಜಿಯು ಹೇಳಿದ ಮಾತುಗಳಿಂದ ಕಬೀರನ ಮೇಲೆ ತಮಾಲನು ಬಹಳ ಕ್ರೋಧಗೊಂಡನು. ಮಗನನ್ನು ನಿರ್ದಯವಾಗಿ ಬೈದನು. ಮಗನು ಮಾತನಾಡಲೇ ಇಲ್ಲ, ಆದುದರಿಂದ ಹೇಳಿ ನೋಡಿದನು. ಆಗಲೂ ಮಾತ ನಾಡಲಿಲ್ಲ. ಇಂಥ ಅವಿವೇಕಿಯು ತನಗೇನು ಮಗನಾದಾನೆಂದು ಹಳಹಳಿ ಸಿದನು. ಕಬೀರನಿಗೆ ಮನೆಬಿಟ್ಟು ಹೋಗೆಂದು ನೊಂದ ಮನಸ್ಸಿನಿಂದಂದನು. ಕಬೀರನು ಆಗ ಯೋಚಿಸಿ ಈ ಸಮಯದಲ್ಲಿ ಇಲ್ಲಿಂದ ಮರೆಯಾಗು ವದೇ ಲೇಸೆಂದೆಣಿಸಿ ತಟ್ಟನೆದ್ದು ಅಲ್ಲಿಂದ ತೆರಳಿ ಗಂಗಾತೀರಕ್ಕೆ ಹೋಗಿ ಅಲ್ಲೊಂದುಕಡೆ ಕುಳಿತು ದೇವರ ಧ್ಯಾನದಲ್ಲಿ ಮಗ್ನನಾದನು.

ಮಕ್ಕಳ ವಿಷಯದಲ್ಲಿ ತಂದೆ ಕ್ರೋಧಗೊಂಡು ಕಡೆಗಣಿಸಿದರೆ ತಾಯಿ ಸುಮ್ಮನಿರುವಳೇ ? ಮಗನ ಅಗಲುವಿಕೆಯಿಂದ ಕಳವಳಗೊಂಡ ಕಬೀರನ ತಾಯಿ, ಪತಿಯು ಶಾಂತವಾಗುವವರೆಗೆ ಸುಮ್ಮನಿದ್ದು, ಸಮಯ ನೋಡಿ ಸಮಾಧಾನ ಹೇಳಿ ಮಗನನ್ನು ಹುಡುಕಿ ತರುವಂತೆ ಬೇಡಿಕೊಂ ಡಳು. ಆತನು ಅನುಲಕ್ಷಿಸಿದನು. ಬೀಜಾಬೀಬಿಯು ಕಬೀರನನ್ನು ಹುಡು ಕುತ್ತಾ ಬೀದಿಬೀದಿಗಳನ್ನು ತಿರುಗಿ ಬೇಸತ್ತು ಕಡೆಗೆ ಗಂಗಾ ತೀರಕ್ಕೆ ಬಂದಳು. ಅಲ್ಲಿ ಮಗನನ್ನು ಕಂಡು ಸಮಾಧಾನಪಡಿಸಿ ಬುದ್ಧಿ ಹೇಳಿ ಮನೆಗೆ ಕರೆದು ತಂದು ಊಟಕ್ಕಿಟ್ಟಳು.

ವಂಶವೃತ್ತಿಯಾದ ನೆಯಿಗೆಯ ಕೆಲಸಕ್ಕಾದರೂ ಕಲಿಸಿ, ಉದ್ಯೋ ಗಕ್ಕೆ ಹಚ್ಚಿದರೆ ದಾರಿಗಾದರೂ ಬರಬಹುದೆಂದು ಆ ತಮಾಲ ದಂಪತಿಗಳು ತಮ್ಮ ತಮ್ಮಲ್ಲಿಯೇ ಯೋಚಿಸಿದರು. ಅದರಂತೆ ತಮಾಲನು ಕಬೀರನನ್ನು ಕರೆದು ಕಬೀರ ನಮಗಂತೂ ವಯಸ್ಸಾಗಿದ್ದರಿಂದ ನಾವೇನು ಮಾಡಬ

ಲ್ಲೀವು ? ಆದ್ದರಿಂದ ನೀನು ನೇಯಿಗೆಯ ಕೆಲಸವನ್ನು ಕಲಿತು ನಮ್ಮೆಲ್ಲರ ಜೀವನೋಪಾಯವನ್ನಾದರೂ ನಡೆಸುವವನಾಗು. ಎಂದು ಹೇಳಿ ಅವನಿಗೆ ನೆಯಿಗೆಯ ಕೆಲಸವನ್ನು ಕಲಿಸತೊಡಗಿದರು.

ಕಬೀರನು ಮಗ್ಗದ ಮೇಲೆ ಕುಳಿತು ನೇಯತೊಡಗಿದನಾದಾಗ್ಯೂ, ಆತನಿಗದು ಸಮ್ಮತವಾದ ಕೆಲಸವೆಂದು ತೋರಲಿಲ್ಲಿ. ಕಬೀರನು ಸ್ವಲ್ಪ ನೇಯುವದು ಶ್ರೀರಾಮನ ಧ್ಯಾನದಲ್ಲಿ ಮಗ್ನನಾಗುವದು, ಮತ್ತೆ ನೇಯುವದು ಪುನಃ ಧ್ಯಾನಸ್ಥನಾಗುವದು ಹೀಗಾಗಿ ಕ್ರಮ ತಪ್ಪಿ ಲಾಳಿ ಒಗೆಯುವದರಿಂದ ದಾರಗಳು ಹರಿದು ಅಲ್ಲಲ್ಲಿ ಗಂಟುಗಳು ಬಿದ್ದು ನೇಯ್ಗೆಯು ಯದ್ವಾತದ್ವಾ ಆಯಿತು. ಆಗ ಕಬೀರನು ಬೇಜಾರಪಟ್ಟು ಶ್ರೀಹರಿ ಇದು ನನ್ನಿಂದಾಗದ ಕೆಲಸ ನಾನೇನು ಮಾಡಲಿ ? ನಿನ್ನ ಚಿತ್ತ ನನ್ನ ಭಾಗ್ಯವೆಂದೆನ್ನುತ್ತ ಮಗ್ಗದ ಮಗ್ಗಲಲ್ಲಿಯೇ ಮಲಗಿ ನಿದ್ರೆಹೋದನು. ಆಗ ಭಕ್ತವತ್ಸಲನಾದ ಶ್ರೀರಾಮನು ಕಬೀರನಮೇಲೆ ಕರುಣೆಗೊಂಡು ಮಗ್ಗದಮೇಲೆ ಕುಳಿತು ಯಾರಿಗೂ ಅರಿಯದಂತೆ ಸರ್ವಾಂಗ ಸುಂದರವಾದ ವಸ್ತ್ರವನ್ನು ನೆಯ್ದು ಸಿದ್ಧಪಡಿಸಿ ಮಗ್ಗದಿಂದ ತೆಗೆದು ಮಡಚಿ ಕಬೀರನ ತಲೆದಿಂಬಿಗಿಟ್ಟು ಅದೃಶ್ಯನಾದನು. ಆಗ ತಮಾಲನು ಅಲ್ಲಿಗೆ ಬಂದು ಕಬೀರನು ಮಲಗಿರುವದನ್ನು ನೋಡಿ ಗೊಣಗುಡತೊಡಗಿದನು. ಅಷ್ಟರಲ್ಲಿ ಬೀಜಾಬೀಬಿಯೂ ಅಲ್ಲಿಗೆ ಬಂದು ಕಬೀರನ ಹತ್ತಿರಿರುವ ತಳತಳನೆ ಹೊಳೆಯುವ ವಸ್ತ್ರದ ಮಡಿಕೆಯನ್ನು ಕಂಡು ಕೈಗೆತ್ತಿಕೊಂಡು ಗಂಡನನ್ನು ಕರೆದು ನೋಡಿರಿ ವಸ್ತ್ರವನ್ನು ಎಷ್ಟು ಸುಂದರವಾಗಿ ನೆಯ್ದಿದ್ದಾನೆ. ಎಷ್ಟು ಶೀವ್ರ. ನೇಯ್ಗೆಯನ್ನು ಕಲಿತುಕೊಂಡಿದ್ದಾನೆಂದು ಅನ್ನುತ್ತ ಪತಿಗೆ ಆ ವಸ್ತ್ರವನ್ನು ತೋರಿಸಿದಳು. ತಮಾಲನು ಪರೀಕ್ಷಿಸಿ ನೋಡಿ ಭೇಷ್ ಎಷ್ಟು ಸುಂದರವಾಗಿದೆ ಈ ವಸ್ತ್ರ. ಇವನ ಈ ವಸ್ತ್ರ ಕೈಗಾರಿಕೆ ಹೊಗಳತಕ್ಕಂಥದು ಎಂದು ಹೇಳಿದನು.

ಕೆಲ ಹೊತ್ತಿನ ನಂತರ ಮಲಗಿದ ಕಬೀರನು ಏಳಲು, ಬೀಜಾಬೀಬಿಯು ಅವನನ್ನು ಕರೆದು ಮಗು ಮುಖ ತೊಳೆದುಕೊಂಡು ನೀನು ನೇಯ್ದ ವಸ್ತ್ರವನ್ನು ನೀನೇ ಅಂಗಡಿ ಸಾಲಿಗೆ ಒಯ್ದು ಮಾರಿಕೊಂಡು ಬಾ. ಆ ಹಣದಿಂದ ಮನೆತನದ ಸಾಮಾನುಗಳನ್ನು ತರೋಣವೆಂದು ಹೇಳಿ ಮಗನಿಗೆ ವಸ್ತ್ರಕೊಟ್ಟು ಕಳಿಸಿದನು.

ಕಬೀರನು ವಸ್ತ್ರವನ್ನು ವಿಕ್ರಯಿಸಲು ಅಂಗಡಿ ಸಾಲಿಗೆ ಹೋದನು. ಅಂಗಡಿಕಾರರು ಅದನ್ನು ನೋಡಿ ಒಂದೊಂದು ಬಗೆಯ ಧಾರಣೆಯನ್ನು ಕಟ್ಟಿದರು ವಸ್ತ್ರ ಉತ್ತಮವಿದೆ. ಹೆಚ್ಚು ಬೆಲೆಬರುವದು ಎಂದು ಹೇಳಿದರೇ ಹೊರ್ತು ಯಾರೂ ಖರೀದಿಸಲಿಲ್ಲ. ಆಗ ಕಬೀರನು ಬೇಸರಗೊಂಡು ಮನೆಗೆ ಮರಳಿ ಹೊರಟನು, ಮಳೆಗಾಲವಲ್ಲದಿದ್ದರೂ ಎಲ್ಲಿಲ್ಲದ ಮಳೆಯೇ ಬಂದು ಧೋ, ಧೊ, ಎಂದು ಸುರಿಯತೊಡಗಿತು. ಕಬೀರನು ಒಂದು ಮಳಿಗೆಯ ಆಶ್ರಯ ಪಡೆದು ನಿಂತುಕೊಂಡನು. ಅಷ್ಟೊತ್ತಿಗೆ ಹಾಲುಹಂಣ್ಣಾದ ಶರೀರವುಳ್ಳ ವಯೋವೃದ್ಧನು, ಮಳೆಯಲ್ಲಿ ತೋಯಿಸಿಕೊಂಡು ನಡುಗುವ ತಲೆಯಿಂದ ಶರೀರಭಾರವನ್ನು ಕೈಗೋಲಿನಮೇಲೆ ಹಾಕಿ ಒಂದೊಂದೇ ಹೆಜ್ಜೆಯನ್ನಿಡುತ್ತಲೂ, ಚಳಿಯಿಂದ ನಡಗುತ್ತಲೂ, ಕಬೀರನಿದ್ದಲ್ಲಿಗೆ ಬರಿ ಮೈಯಿಂದ ಬಂದನು. ಆ ವೃದ್ಧನು ಕಬೀರನ ಹತ್ತರ ಬರುತ್ತಲೇ ಕಾಲು ಜಾರಿ ದೊಪ್ಪನೆ ಬಿದ್ದು, ಹಾಯ್, ಹರಿ,.... ಎಂದು ನೊಂದ ಮನಸ್ಸಿನಿಂದ ಅಂದನು. ಕಬೀರನು ಆತನನ್ನು ಕಂಡು ಅವನನ್ನು ಎತ್ತಿತಂದು ಚಾವಣಿಯಲ್ಲಿಳಿಸಿ ತನ್ನ ಹೆಗಲಮೇಲಿನ ಕೈವಸ್ತ್ರದಿಂದ ಆತನ ಮೈಯನ್ನು ಒರಸಿ ಮಾರಲು ವೈಯ್ದಿದ್ದ ವಸ್ತ್ರವನ್ನು ವೃದ್ಧನ ಮೈತುಂಬ ಹೊದಿಸಿದನು. ಆಗ ಆತನ ಚಳಿಯು ಕಡಿಮೆಯಾಗಿ ಸ್ವಲ್ಪ ಶಾಂತನಾದನು. ಆಗ ವೃದ್ಧನು ಕಬೀರನನ್ನು ಕುರಿತು. ಅಯ್ಯಾ ಪುಣ್ಯಾತ್ಮಾ ಇಂದು ನೀನಿರದಿದ್ದರೆ ಮಳೆಯಿಂದ ತೋಯ್ಸಿಕೊಂಡು ನಡುಗಿ ನಡುಗಿ ಪ್ರಾಣಬಿಡುತ್ತಿದ್ದೆ. ನಿನಗೆ ದೇವರು ಕಲ್ಯಾಣಮಾಡಲಿ ಎಂದು ಹೇಳಿದನು. ಅಷ್ಟರಲ್ಲಿ ಮಳೆಯೂ ನಿಂತಿತು. ಅಯ್ಯಾ ಬೃಂದಾವನಕ್ಕೆ ಹೋಗಬೇಕಾಗಿದೆ. ಇನ್ನೂ ದೂರ ಪ್ರಯಾಣ ಮಾಡಬೇಕಾಗಿದ್ದರಿಂದ ನಾನು ಹೋಗುವೆನು. ನೀಕೊಟ್ಟ ವಸ್ತ್ರವು ನನ್ನನ್ನು ಚಳಿಯಿಂದ ರಕ್ಷಿಸಿದಂತೆ ಶ್ರೀ ಹರಿಯು ನಿನ್ನನ್ನು ರಕ್ಷಿಸಲಿ ಎಂದು ಹರಿಸಿ ಹೊರಟು ಸ್ವಲ್ಪ ದೂರಹೋಗಿ ಅದೃಶ್ಯನಾದನು.

ಕಬೀರನು ತುಂಬಿದ ಕರುಣೆಯಿಂದ ಆ ವೃದ್ಧನಿಗೆ ವಸ್ತ್ರ ಕೊಟ್ಟನು. ಆದರೆ ತಾಯಿಯು ವಸ್ತ್ರವನ್ನು ವಿಕ್ರಯಿಸಿಕೊಂಡು ಬಾ, ಎಂದು ಹೇಳಿಕಳಿಸಿದ ಮಾತು ನೆನಪಿಗೆ ಬಂದಕೂಡಲೇ ಹೆದರಿದನು. ನಾನೆಂಥ ಅನರ್ಥ ಮಾಡಿದೆನಲ್ಲಾ ರೊಕ್ಕವೂ ಬರಲಿಲ್ಲ, ವಸ್ತ್ರವೂ ಉಳಿಯಲಿಲ್ಲ. ಇನ್ನು ಬರಿ

ಗ್ಯೆಯಿಂದ ಮನೆಗೆ ಹೋದರೆ ಬೈಯ್ಯದೆ ಬಿಡುವದಿಲ್ಲ. ಎಂದು ಸಮಾಧಾನ ಮಾಡಿಕೊಂಡು ಮನೆಗೆ ಹೋದನು.

ಕಬೀರನು ಬರಿಗ್ಯೆಯಿಂದ ಮನೆಗೆ ಬಂದುದನ್ನು ಕಂಡು ಅವನ ತಾಯಿಯು ವಸ್ತ್ರ ಮಾರಿರಬಹುದೆಂದೆಣಿಸಿ ಕಬೀರ ವಸ್ತ್ರವನ್ನು ಎಷ್ಟಕ್ಕೆ ಮಾರಿದಿ ? ಎಂದು ಕೇಳಿದಳು. ಕಬೀರನು ಮಾತನಾಡಲಿಲ್ಲ. ಏಕೆ ಕಬೀರ ಮಾರಿದಿಯಾ ಎಂದು ಕೇಳಿದಳು. ಆಗ ಕಬೀರನು ಇಲ್ಲವೆಂದನು. ಹಾಗಾದರೆ ವಸ್ತ್ರವನ್ನೇನು ಮಾಡಿದಿ ಎಂದು ಕೇಳಿದಳು. ಆಗ ನಡೆದ ಸಂಗತಿಯನ್ನು ಹೇಳಿದನು. ಬೀಜಾಬೀಬಿಯು ಸಿಟ್ಟುಗೊಂಡು ಕ್ಯೆಗೋಲಿನಿಂದ ಕಬೀರನಿಗೆ ಹೊಡೆದಳು. ಆದರೆ ಆ ಭಕ್ತವತ್ಸಲನು ಕಬೀರನಿಗೆ ಬೀಜಾಬೀಬಿಯು ಹೊಡೆತದ ಬಡಿತವು ಬೀಳದಂತೆ ಕ್ಯೆಯೊಡ್ಡಿದನು. ಆ ಬಡಿತವು ಕಬೀರನಿಗೆ ಬಿದ್ದಿದ್ದರೆ ಬೆನ್ನು ಮೂಳೆ ಮುರಿದುಹೋಗುತ್ತಿತ್ತು. ಅಷ್ಟೊತ್ತಿಗೆ ತಮಾಲನೂ ಬಂದು ನಡೆದ ಸಂಗತಿಯನ್ನು ಹೆಂಡತಿಯಿಂದ ಕೇಳಿ ಕೋಪಗೊಂಡು ಇಂಥ ಅವಿಧೇಯನು ಮನೆಯಲ್ಲಿರುವದಕ್ಕಿಂತಲೂ ಮನೆಬಿಟ್ಟು ಹೋಗುವದೇ ಲೇಸೆಂದು, ಕಬೀರನನ್ನು ಮನೆಯಿಂದ ಹೊರದಬ್ಬಿದನು. ಕಬೀರನು ಮನೆಯಿಂದ ಹೊರಬಿದ್ದವನಾಗಿ ಗಂಗಾತೀರಕ್ಕೆ ತೆರಳಿ ಕತ್ತಲಾಗುವವರೆಗೂ ಅಲ್ಲಿಯೇ ಕುಳಿತು ಶ್ರೀರಾಮಚಂದ್ರನ ಮೊರೆಹೊಕ್ಕು ಹೇ ರಾಮಾ ! ನನಗೀ ಪರಿಸ್ಥಿತಿಯನ್ನುಂಟು ಮಾಡಲು ನಾನು ಅದಾವ ಅಪರಾಧ ಮಾಡಿರುವೆನು ? ಚಳಿಯಿಂದ ನಡುಗುತ್ತಿದ್ದ ವೃದ್ಧನಿಗೆ ವಸ್ತ್ರ ಕೊಟ್ಟದ್ದು ತಪ್ಪೇ ? ಎಂಥ ಅನ್ಯಾಯವಿದು.

ಏನನ್ಯಾಯವಿದು ಹರೀ ! ಏನನ್ಯಾಯ ವಿದೂ || ಪ ||
ನಿನ್ನ ನಾಮವಿದಿ ಬೇಯುವದು | ಜಗಜಗವೆಲ್ಲ ಹರೀ |
ಆದರೀ ಅಳುವೇಕೆ ನಗೆ, ತೋರು | ನಿನ್ನ ಕರುಣ ಹರೀ || ೧ ||

ಈ ರೀತಿ ಅನನ್ಯ ಭಕ್ತಿಯಿಂದ ಸ್ತೋತ್ರಮಾಡಿ ಹೇ ದೇವಾ ಎಲ್ಲ ಕಷ್ಟಗಳೂ ಬರಲಿ ಆದರೆ ನಿನ್ನ ಕರುಣೆಯೊಂದಿರಲಿ ಎಂದು ತನ್ನಷ್ಟಕ್ಕೆ ತಾನೇ ಸಮಾಧಾನಪಟ್ಟುಕೊಂಡು ಮನೆಗೆ ಹಿಂತಿರುಗಿ ಬರಲು ಮನೆಯ ಬಾಗಿಲ ಮುಚ್ಚಿದ್ದಿತು. ಮಲಗಿ ನಿದ್ರಿಸುತ್ತಿರಬಹುದೆಂದೆಣಿಸಿ ತಂದೆ-ತಾಯಿಗಳನ್ನು ಎಬ್ಬಿಸದೆ ಬಾಗಿಲಲ್ಲಿಯ ಕಟ್ಟೆಯ ಮೇಲೆ ಮಲಗಿ ನಿದ್ರೆ ಹೋದನು.

ಜಗತ್ತಿನಲ್ಲಿ ಮಾತೃಪ್ರೇಮವು ಬಹು ಅಮೂಲ್ಯವಾದುದು. ಅದರ ಬೆಲೆಕಟ್ಟುವದು ತ್ರಿಮೂರ್ತಿಗಳಿಗೂ ಅಸಾಧ್ಯ. ಇಂಥ ಮಾತೃಪ್ರೇಮ ವನ್ನು ಯಾವ ಮಕ್ಕಳು ದುರುಪಯೋಗ ಮಾಡುವರೋ ಅವರಿಗೆ ಎಂದೆಂದಿಗೂ ಸುಖದೊರೆಯಲಾರದು.

ಮಧ್ಯರಾತ್ರಿಗೆ ಬೀಜಾಬೇಬಿಯು ಎಚ್ಚತ್ತು ಮಗನ ನೆನಪಾಗಿ ಕಬೀ ರನು ಎಲ್ಲಿ ಹೋದನು, ಎಲ್ಲಿ ಉಂಡನು, ಎಲ್ಲಿ ಮಲಗಿದನು, ಇನ್ನೂ ಏಕೆ ಬರಲಿಲ್ಲ, ಹೀಗೆ ಒಂದೇ ಸವನೆ ಬಡಬಡಿಸುವಂತೆ ನುಡಿಯುತ್ತಿರುವದೂ, ಕಳವಳಗೊಂಡು ಅಳುತ್ತಿರುವದೂ ಇವುಗಳನ್ನು ಕಂಡು ತಮಾಲನಿಗೆ ಸಹಿಸುವದಾಗಲಿಲ್ಲ. ಉಕ್ಕಿಬರುವ ದುಃಖವನ್ನು ತಡೆದು, ಎದ್ದುಹೋಗಿ ಬೀದಿಯ ಬಾಗಿಲು ತೆರೆದನು. ಕಬೀರನು ಮಲಗಿದ್ದಾನೆ, ಆದರೆ ಆತನ ಮೇಲೆ ದಿವ್ಯಪ್ರಕಾಶ ಒಂದು ಬಿದ್ದಿದೆ, ಆದರೆ ಆ ಪ್ರಕಾಶವೆಲ್ಲಿಂದ ಬಿದ್ದಿತೋ ಇದಾವುದೂ ತಿಳಿಯದಾಯಿತು, ಆಗಾತನು ಹೆಂಡತಿಯನ್ನು ಕರೆದನು. ಆಕೆಯು ಬಂದು ಕಬೀರನನ್ನೂ, ಅವನ ಮೇಲೆ ಬಿದ್ದಿದ್ದ ಪ್ರಕಾಶವನ್ನೂ ಕಂಡು ಅಚ್ಚರಿಗೊಂಡಳು. ತಮಾಲನು ವಿಸ್ಮಿತನಾಗಿ ಕಂಬದಂತೆ, ಕಬೀರ ನನ್ನು ನೋಡುತ್ತ ನಿಂತುಕೊಂಡನು. ಆಗಾ ಪ್ರಕಾಶವು ಕರಗಿ ದಿವ್ಯ ಮೂರ್ತಿಯೊಂದು ಕಬೀರನ ತಲೆಯ ಬಾಜುವಿಗೆ ನಿಂತುಕೊಂಡಿತು; ಆ ಮೂರ್ತಿ ರೂಪು ಸ್ವಚ್ಛವಾಗಿ ದಂಪತಿಗಳಿಗೆ ಕಾಣಲಿಲ್ಲ. ಆದರೂ ಆ ತಮಾಲ ದಂಪತಿಗಳನ್ನು ಕುರಿತು— ಎಲೈ ತಮಾಲನೇ ! ನೀನು ಧನ್ಯನು. ನೀವು ಪುಣ್ಯದಂಪತಿಗಳಾಗಿದ್ದರಿಂದಲೇ ಈ ನನ್ನ ಭಕ್ತಬಾಲಕನು ನಿಮ್ಮ ಪುತ್ರನಾಗಿ ಜನಿಸಿದ್ದಾನೆ. ಇವನು ಕುಲದೀಪಕನು, ಲೋಕವಿಖ್ಯಾತನಾಗಿ ಮೆರೆಯುವನು, ಕಾರಣ ಇವನು ಸಾಮಾನ್ಯನೆಂದು ಅಲಕ್ಷಿಸಬಾರದು; ನೆನಪಿರಲಿ ಎಂದು ಹೇಳಿ ಅದೃಶ್ಯನಾದನು. ಆಗಾ ದಂಪತಿಗಳು ಕಬೀರ ನನ್ನು ಎಬ್ಬಿಸಿ, ಪ್ರೇಮದಿಂದ ಕರೆದೊಯ್ದು, ಪ್ರೀತಿಯಿಂದ ಉಟೋಪಚಾರ ಗಳಿಂಧ ಉಪಚರಿಸಿದರು.

ಇಂತು ಕೆಲ ದಿನಗಳು ಗತಿಸಿದ ನಂತರ ಒಂದು ದಿನ ರಾಮನಾಮ ಧ್ಯಾನಾಸಕ್ತನಾಗಿ ಕುಳಿತಿರುವಾಗ್ಗೆ ಗುರುಸೇವಾ ಮಾಡದೆ ತತ್ವಾರ್ಥವು ತಿಳಿಯುವದಿಲ್ಲವೆಂದು ಹಿರಿಯರೆನ್ನುವರು. ಕಾರಣ ಸದ್ಗುಣ ಸಂಪನ್ನರಾದ

ಗುರುವನ್ನು ಹುಡುಕುವದೆಂತು ? ಈ ಕಾಶೀ ಕ್ಷೇತ್ರದಲ್ಲಿರುವ ರಾಮಾನಂದ ಸ್ವಾಮಿಗಳು ಮಹಾತ್ಮರೆಂಬುದಾಗಿ ಅನೇಕರಿಂದ ಆಗಾಗ್ಗ ಕೇಳಿದ್ದೇನೆ; ಆದರೆ ಅವರು ಸನ್ಯಾಸಿಗಳು, ಅವರ ದರ್ಶನವಾಗುವದು ಹೇಗೆ? ಎಲ್ಲವೂ ಶ್ರೀ ರಾಮಾಧೀನವು ಎಂದೆನ್ನುತ್ತ ಹಾಗೆಯೇ ವ್ಯೆಮರೆತು ನಿದ್ರೆಹೋಗು ವಂತೆ ಕಣ್ಣುಮುಚ್ಚಿದನು. ಆಗಾತನು ಧ್ಯಾನಯೋಗದಲ್ಲಿ ಪ್ರತ್ಯಕ್ಷನಾಗಿ "ಕಬೀರ! ಏಕಿಂತು ಯೋಚಿಸುವಿ? ರಾಮಾನಂದರು ಶುದ್ಧ ಸಾತ್ವಿಕರು, ಅವರನ್ನಾಶ್ರಯಿಸಿ ಗುರುಪದೇಶವನ್ನು ಹೊಂದು" ಎಂದು ಹೇಳಿ ಅಂತ ರ್ಧಾನನಾದನು. ಕಬೀರನು ಎಚ್ಚತ್ತು ಭಗವಂತನ ಕಾರುಣ್ಯಸಾಗರಕ್ಕೆ ಸಂತಸಗೊಂಡು ಗುರುದೇವನ ಸಂದರ್ಶನಕ್ಕಾಗಿ ರಾಮಾನಂದಸ್ವಾಮಿಗಳ ಮಠದ ಕಡೆಗೆ ಹೊರಟನು.

ರಾಮಾನಂದರ ಮಠವು ಊರಹೊರಗೆ ಇದ್ದಿತು; ಅನೇಕ ಶಿಷ್ಯರು ಅವರನ್ನಾಶ್ರಯಿಸಿದ್ದರು. ಕಬೀರನಲ್ಲಿಗೆ ಬಂದು ಆ ಶಿಷ್ಯಮಂಡಲಿಗೆ ನಮ ಸ್ಕರಿಸಿ— ರಾಮಾನಂದಸ್ವಾಮಿಗಳೆಲ್ಲಿರುವರು ಎಂದು ಕೇಳಿದನು. ಆಗಾ ಶಿಷ್ಯರು ಕಬೀರನನ್ನು ಕುರಿತು- ಏಕೆ, ಸ್ವಾಮಿಗಳಲ್ಲೇನು ಕೆಲಸವಿದೆಯೆಂದು ಅಪಹಾಸ್ಯ ಮಾಡಿದರು. ಕಬೀರನು ಅವರ ಮಾತುಗಳನ್ನು ಲೆಕ್ಕಿಸದೆ ಗುರುಗಳಿದ್ದಲ್ಲಿಗೆ ಹೋಗಲು ಮುಂದುವರಿದನು; ಆಗಾಶಿಷ್ಯರು ಕಬೀರನನ್ನು ಅಡ್ಡಗಟ್ಟಿ ತಡೆದರು. ಕಬೀರ ಮತ್ತು ಶಿಷ್ಯರ ನಡುವೆ ಗೊಂದಲವೇ ಎದ್ದಿತು. ಈ ಗದ್ದಲವನ್ನು ಕೇಳಿ ಸ್ವಾಮಿಗಳು ಹೊರಬಂದು ಗದ್ದಲ ವೇನೆಂದು ಕೇಳಿದರು; ಯಾರೂ ಉತ್ತರಕೊಡಲಿಲ್ಲ. ಆಗ ತಾವೇ ಸ್ವತಃ ಬಂದುನೋಡಿದರು, ಯಾವನೊಬ್ಬ ಹುಡುಗನಿಗೆ ಶಿಷ್ಯರು ಗುಂಪುಕಟ್ಟಿ ತೊಂದರೆಪಡಿಸುತ್ತಲಿದ್ದುದನ್ನು ಕಂಡರು; ಎಲ್ಲರೂ ಹಿಂದೆ ಸರಿದರು. ಆಗ ಕಬೀರನು ರಾಮಾನಂದಸ್ವಾಮಿಗಳಿಗೆ ದಂಡಪ್ರಣಾಮಗಳನ್ನು ಮಾಡಿದನು. ಆಗೊರ್ವ ಶಿಷ್ಯನು— ಇವನು ಯವನರ ಬಾಲಕನು ಸ್ವಾಮಿ, ಎಂದು ಅರುಚಿದನು. ಆಗಾ ರಾಮಾನಂದಸ್ವಾಮಿಗಳು ಆ ಶಿಷ್ಯನಿಗೆ ಬ್ಯೆದು ಸಾಕು ಸುಮ್ಮನಿರು, ಯಾರಾದರೇನು? ಈ ರೀತಿ ಇವನನ್ನು ಹಿಂಸೆಪಡಿಸುವದು ತಪ್ಪು ಎಂದು ಗದರಿಸಿ, ಕಬೀರನನ್ನು ಕುರಿತು- ಬಾಲಕಾ, ನನ್ನಿಂವೇನಾಗ ಬೇಕು ನಿನಗೆ? ಎಂದು ಕೇಳಿದರು. ಆಗ ಕಬೀರನು— ಸ್ವಾಮೀ ನಿತ್ಯಾ

ನಂದಮಯವಾದ ರಾಮಾನುಗ್ರಹವು ತಮ್ಮಿಂದಲೇ ಲಭಿಸಬೇಕು. ಎಂದು ಬಿನ್ನೈಸುತ್ತ ಅಂಜಲೀಬದ್ಧನಾಗಿ ನಿಂತುಕೊಂಡನು. ಗುರುಗಳು ಇವನ ಮನಸ್ಸನ್ನು ಪರೀಕ್ಷಿಸಬೇಕೆಂದು ಇಚ್ಛಿಸಿ ಬಾಲಕಾ, ನಾನಷ್ಟಕ್ಕೆ ಶಕ್ತನಲ್ಲ. ನೀನು ಇನ್ನಾರನ್ನಾದರೂ ಆಶ್ರಯಿಸು ನಡೆ, ನಡೆ ಎಂದು ನಿರ್ದಾಕ್ಷಿಣ್ಯವಾಗಿ ನುಡಿದು ಅವರು ಅಲ್ಲಿಂದ ಪೂಜಾಗೃಹಕ್ಕೆ ತೆರಳಿದರು.

ಕಬೀರನು ಮರುದಿನವೂ ಗುರುಗಳನ್ನು ಕಾಣಬೇಕೆಂದು ಎಷ್ಟು ಪ್ರಯತ್ನಪಟ್ಟರೂ ಆ ಶಿಷ್ಯ ಸಂಘದ ಮುಂದೆ ಅವನ ಆಟ ನಡೆಯಲಿಲ್ಲ. ಕೊನೆಗೆ ಅವರಿಂದ ಹೊರದಬ್ಬಲ್ಪಟ್ಟನು. ಕಬೀರನು ಮೇಲಕ್ಕೆದ್ದು ಮೈಯೊರಸಿಕೊಂಡು- ಏನು ಅನ್ಯಾಯವಿದು ? ಕ್ಷೀರಸಾಗರದಲ್ಲಿ ಕಾಲ ಕೂಟವು ಉದ್ಭವಿಸಿದಂತೆಯೂ, ಚ ಂ ದ ನ ಮರಕ್ಕೆ ಸರ್ಪವು ಸುತ್ತಿ ಕೊಂಡಂತೆಯೂ ದಯಾಪರರೂ ವೈರಾಗ್ಯ ಸಂಪನ್ನರೂ ಆದ ಸ್ವಾಮಿ ರಾಮಾನಂದರ ಸುತ್ತಲೂ ಕೊಬ್ಬಿದ ಕಠಿಣ ಹೃದಯಿಗಳು ಸುತ್ತಿಕೊಂಡಿ ರುವಾಗ ಬಡವರಿಗೆಲ್ಲಿ ಅವಕಾಶ ದೊರೆಯುವದು ಎಂದು ಯೋಚಿಸಿ, ಆಗಲಿ, ಇಷ್ಟಕ್ಕೇಕೆ ಹಿಂಜರಿಯಬೇಕು ? ಕೈಕೊಂಡ ಕಾರ್ಯಕ್ಕೆಷ್ಟು ವಿಘ್ನ ಬಂದರೂ ಬರಲಿ, ಆತನ ಕೃಪೆಯೊಂದಿರಲಿ. ಎಂದು ಸಮಾಧಾನಪಟ್ಟು ಕೊಂಡನು. ಮನೆಗೆ ಬಂದು ಭೋಜನಾದಿಗಳನ್ನು ಮುಗಿಸಿದನು.

ಮರುದಿನ ಸೂರ್ಯೋದಯದ ಪೂರ್ವದಲ್ಲೆದ್ದು ಗಂಗಾ ತೀರಕ್ಕೆ ಹೋಗಿ ಸ್ನಾನಘಟ್ಟದ ಸೋಪಾನದ ಮೇಲೊಂದು ಕಡೆ ಮಲಗಿದ್ದನು. ರಾಮಾನಂದ ಸ್ವಾಮಿಗಳು ಶಿಷ್ಯಸಮೇತ ಸ್ನಾನಾರ್ಥವಾಗಿ ಗಂಗಾತೀರಕ್ಕೆ ಬಂದು ರಾಮನಾಮಸ್ಮರಣೆ ಮಾಡುತ್ತ ಒಂದೊಂದೇ ಮೆಟ್ಟಲಿಳಿಯುತ್ತಾ ಬಾರಿ ಬಾರಿಗೂ ರಾಮ, ರಾಮ ಎಂದೆನ್ನುತ್ತ ನದಿಗಿಳಿಯುತ್ತಿರುವಾಗ ಅಲ್ಲಿ ಮಲಗಿದ್ದ ಕಬೀರನ ತಲೆಯಮೇಲೆ ಕಾಲಿಟ್ಟರು. ಕೂಡಲೇ ಕಬೀ ರನು- ಹಾ ! ರಾಮನಾಮ ದೊರೆಯಿತು ! ಗುರುಬೋಧನೆಯಾಯಿತು ! ಎಂದನು. ಆಗ ಆ ಸ್ವಾಮಿಗಳು "ರಾಮ, ರಾಮ, ರಾಮ, ರಾಮ" ಕತ್ತ ಲಲ್ಲಿ ತಿಳಿಯದೆ ಯಾವ ಪ್ರಾಣಿಯ ಮೇಲೆ ಕಾಲಿಟ್ಟು ತುಳಿದೆನಲ್ಲಾ ! ಪಾಪವು ಶ್ರಮಿಸಲಿ. ರಾಮನಾಮ ಎಂದೆನ್ನುತ್ತ ತಾವು ತುಳಿದ ಬಾಲಕ ನನ್ನು ಹಿಡಿದೆತ್ತಿ ತಲೆಯನ್ನು ನೇವರಿಸುತ್ತ ವತ್ಸಾ, ಅಳಬೇಡ, ನಿನಗೆ

ಶ್ರೀರಾಮಾನುಗ್ರಹದಿಂದ ಸೌಖ್ಯವಾಗಲಿ ಎಂದು ಉಚ್ಚರಿಸಿದರು. ಅಷ್ಟರಲ್ಲಿ ಬೆಳಕೂ ಚನ್ನಾಗಿ ಹರಿಯಿತು. ದೃಷ್ಟಿಸಿ ಆ ಬಾಲಕನನ್ನು ನೋಡಿದರು. ಹಿಂದಿನ ದಿನ ತಮ್ಮ ಆಶ್ರಮಕ್ಕೆ ಬಂದವನೆಂದು ತಿಳಿಯಿತು. ಆಗ ರಾಮಾನಂದರು ಕರುಣಪೂರಿತ ತುಂಬಿದ ಹೃದಯದಿಂದ ಕಬೀರನ ಶ್ರದ್ಧಾಭಕ್ತಿಗಳನ್ನು ಕಂಡು ಸಂತುಷ್ಟರಾಗಿ ಪ್ರೇಮಾನಂದಭರಿತ ದೃಷ್ಟಿಯಿಂದ ನೋಡುತ್ತ ಬಾಲಭಕ್ತಾ ! ನೀನು ವಯಸ್ಸಿನಲ್ಲಿ ಕಿರಿಯನಾದರೂ ಜ್ಞಾನ-ಭಕ್ತಿಗಳಲ್ಲಿ ಹಿರಿಯವನಾಗಿದ್ದೀ. ಇಷ್ಟು ಪ್ರಯತ್ನಪಟ್ಟು ರಾಮನಾಮೋಪದೇಶವನ್ನು ಪಡೆದವನು ನಿನ್ನೊಬ್ಬನ ಹೊರತು ಇನ್ನಾರನ್ನೂ ಕಾಣಲಾರೆ. ನಿನಗೆ ಶ್ರೀರಾಮಾನುಗ್ರಹವುಂಟಾಗಲಿ. ಇನ್ನು ಮೇಲೆ ನೀನು ಪರಮ ಭಕ್ತನಾಗಿರುವಿ. ನಿನಗಿಚ್ಛೆ ಬಂದಾಗ ನನ್ನನ್ನು ಕಂಡು ಸಂಭಾಷಿಸಬಹುದು ಎಂದು ಆಶೀರ್ವದಿಸಿ ಗಂಗೆಗಿಳಿದು ಸ್ನಾನಮಾಡತೊಡಗಿದರು. ಕಬೀರನು ಗುರುಗಳಿಗೆ ವಂದಿಸಿ ಸಂತೋಷದಿಂದ ರಾಮನಾಮವನ್ನು ಭಜಿಸುತ್ತ ಮನೆಗೆ ತೆರಳಿದನು.

ಅಂದಿನಿಂದಲೂ ಮನೆಯ ಸುತ್ತಲೂ ತುಳಸಿ ಗಿಡಗಳನ್ನೂ ವಿವಿಧ ಹೂವಿನ ಗಿಡಗಳನ್ನೂ ಬೆಳಸಿ ಸುಂದರ ತೋಟವನ್ನೇ ನಿರ್ಮಿಸಿದನು. ತುಳಸಿ ಪೂಜೆಮಾಡುವದೂ, ಶ್ರೀರಾಮ ನಾಮೋಚ್ಚಾರಣೆ ಮಾಡುವದೂ ಮುಹಮ್ಮದೀಯರಿಗೆ ಸರಿದೋರಲಿಲ್ಲ. ಆ ವಿಚಾರವನ್ನು ಖಾಜಿಗಳಿಗೆ ತಿಳಿಸಿದರು. ಖಾಜಿಗಳು ಅತ್ಯುಗ್ರ ಕೋಪಗೊಂಡು ಕಬೀರನ ಮನೆಗೆ ಬಂದು ಆತನೊಡನೆ ಧರ್ಮ ಸಂಬಂಧವಾದ ಗಹನ ವಿಚಾರವಾಗಿ ವಾದ-ವಿವಾದವನ್ನು ಬೆಳೆಸಿದರು. ಅವರ ಪ್ರಶ್ನೆಗಳಿಗೆ ತಕ್ಕ ಉತ್ತರವನ್ನು ಕೊಟ್ಟು ಸರ್ವವ್ಯಾಪಕನಾದ ಭಗವಂತನು ದುಷ್ಟನಿಗ್ರಹ ಶಿಷ್ಟಪರಿಪಾಲನಾರ್ಥವಾಗಿ ಆಗಾಗ್ಗೆ ಅವತರಿಸುವನೆಂದು ಸಾರಿ ಹೇಳಿದನು. ಆದರೂ ಕಬೀರನು ಪರಮತ ಅವಲಂಬಿಯಾದ ಕಾಫರನೆಂದು ದೂಷಿಸುತ್ತಾ ಹೋದರು.

## ಗೋರಖನಾಥನ ಆಗಮನ

ಇಂತು ಕೆಲ ದಿನಗಳು ಗತಿಸಲು ಸಿದ್ಧಶಕ್ತಿ ಸಂಪನ್ನನಾದ ಗೋರಖನಾಥನು ಇಡಿ ಭರತಖಂಡವನ್ನೆಲ್ಲ ಸುತ್ತಿ ಅನೇಕ ಪಂಡಿತರನ್ನು ವಾದ-ವಿವಾದದಲ್ಲಿ ಜಯಿಸುತ್ತಲೂ ವಾದದಲ್ಲಿ ಮಿಗಿಲಾದವರನ್ನು ಮಾಯಾ

ವಿದ್ಯೆಯಿಂದ ಮೆರೆಯುತ್ತಲೂ ಜಯಭೇರಿ ಹೊಡೆಯುತ್ತ ಕಾಶೀನಗರಕ್ಕೆ ಬಂದನು. ಇವನು ಮಂತ್ರತಂತ್ರ, ಇಂದ್ರಜಾಲಮಹೇಂದ್ರಜಾಲ ದೂರಶ್ರವಣ ಆಕಾಶಗಮನ, ರಸಘುಟಿಕಾಸಿದ್ಧಿ ಮೊದಲಾದ ಅಷ್ಟಸಿದ್ಧಿಗಳನ್ನು ಸಂಪಾದಿಸಿಯೂ, ಉದ್ದಂಡಪಂಡಿತನಾಗಿಯೂ, ತನಗೆ ಸರಿಯಾದವರು ಈ ಪ್ರಪಂಚದಲ್ಲಿಯೇ ಇಲ್ಲವೆಂದು ಗರ್ವದಿಂದ ಮೇರೆಮೀರಿ ಮೆರೆಯುತ್ತಲಿದ್ದನು. ಇವನ ಮಹಿಮೆಯನ್ನು ಅರಿತವರು ಆತನನ್ನು ಇದಿರುಗೊಂಡು ಮರ್ಯಾದೆಯಿಂದ ಕರೆತಂದು ಒಂದು ವಿಶಾಲ ಮಠದಲ್ಲಿಳಿಸಿದರು. ಈತನು ಶಿಷ್ಯಸಮೇತನಾಗಿ ಕೆಲದಿನ ವಾಸಮಾಡಿಕೊಂಡಿರಲು ಒಂದು ದಿನ ಮಾತಿನ ಲಹರಿ ಬೆಳೆದುಕೊಂಡಾಗ ಓರ್ವನು ರಾಮಾನಂದರು ಪರಮಯೋಗಿಗಳೂ, ಆತ್ಮವಿದ್ಯಾಪಾರಂಗತರೂ, ವೈರಾಗ್ಯಪುರುಷರೂ ಎಂದು ಗೋರಖನಾಥನ ಮುಂದೆ ಪ್ರಶಂಸೆ ಮಾಡಲು, ಗೋರಖನು ಅದನ್ನು ಕೇಳಿ ಅಸೂಯೆಗೊಂಡುದರಿಂದ ರಾಮಾನಂದರ ಗುಣಗಾನವು ಸರಿದೋರಲಿಲ್ಲ. ಕೂಡಲೇ ತನ್ನ ಶಿಷ್ಯರನ್ನು ಕರೆದು ರಾಮಾನಂದರಿಗೆ ಈ ರೀತಿ ಒಂದು ಸಂದೇಶವನ್ನು ಬರೆದು ಕಳಿಸಿಕೊಟ್ಟನು.

"ರಾಮಾನಂದರು ನನ್ನೊಡನೆ ಸಂವಾದಕ್ಕೆ ಸಿದ್ಧರಾಗಬೇಕು, ಇಲ್ಲವೆ ತಮ್ಮ ಅಪಜಯಕ್ಕೆ ಒಪ್ಪಬೇಕು. ಇವುಗಳನ್ನು ಅಲಕ್ಷಿಸಿದಲ್ಲಿ ತಮ್ಮ ಮಠಮಾನ್ಯಗಳು ಸುಟ್ಟು ಬೂದಿಯಾಗುವವು."

ರಾಮಾನಂದರು ಗೋರಖನು ಕಳಿಸಿದ ಸಂದೇಶವನ್ನು ಓದಿನೋಡಿ ವಿಸ್ಮಿತರಾದರು. ಸಂವಾದಕ್ಕೆ ಒಪ್ಪಿಕೊಂಡರೆ, ದ್ವೇಷಾಸೂಯೆಗಳು ಬೆಳೆದುಕೊಳ್ಳುವದಲ್ಲದೆ ಅನರ್ಥಗಳೂ ಸಂಭವಿಸುವವು ಆದ್ದರಿಂದ ಈ ವೇಳೆಯಲ್ಲಿ ಹೇಗಾದರೂ ಮಾಡಿ ಈ ಘರ್ಷಣೆಯನ್ನು ತಪ್ಪಿಸಿ ಹೊತ್ತು ನೋಡಿ ಪೆಟ್ಟು ಹಾಕಿದರೆ ಸನ್ಮಾರ್ಗಕ್ಕೆ ಸಹಾಯಕನಾಗಿ ನಿಲ್ಲುವನು ಎಂದು ಆಲೋಚಿಸಿ ಆತನ ವಿಜಯಕ್ಕೇ ಒಪ್ಪಿಕೊಳ್ಳುವದೇ ಉತ್ತಮವೆಂದು ನಿರ್ಧರಿಸಿದರು.

ರಾಮಾನಂದ ಸ್ವಾಮಿಗಳು ತಮ್ಮ ನಿಶ್ಚಯವನ್ನು ಸಿದ್ಧವರ್ಯನಿಗೆ ತಿಳಿಸಿ ಕಾಣಿಕೆಯೆಂದು ಫಲ ಪುಷ್ಪಾದಿಗಳನ್ನು ತಟ್ಟೆಯಲ್ಲಿಡಿಸಿ ಆ ತಟ್ಟೆಯನ್ನು ಶಿಷ್ಯನಿಗೆ ತೆಗೆದುಕೋ ಎಂದು ಹೇಳಿ ಶಿಷ್ಯನೊಡನೆ ಮಠದ ಮುಂಬಾಗಿಲಿಗೆ ಬಂದರು. ಅಷ್ಟೊತ್ತಿಗೆ ಕಬೀರನು ತನ್ನ ಗುರುಗಳಾದ ರಾಮಾನಂದರ

ಜಯಘೋಷ ಮಾಡುತ್ತ ಬಂದು ಸ್ವಾಮಿಗಳಿಗೆ ಅಭಿನಂದಿಸಿ, ಸ್ವಾಮಿಗಳ ಪ್ರಯಾಣದ ಸಿದ್ಧತೆ ಕಂಡು ಸ್ವಾಮೀ! ತಾವೀಗ ತೆರಳುವದೆಲ್ಲಿಗೆ?

ರಾಮಾನಂದರು:- ಗೋರಖನಾಥನಿಗೆ ಶರಣು ಹೋಗುವದಕ್ಕೆ.

ಕಬೀರ:- ಯಾವ ಕಾರಣದಿಂದ.

ರಾಮಾನಂದರು:- ಕಬೀರ ನಿನಗೆ ಆತನ ಪ್ರಭಾವ ತಿಳಿಯದು.

ಕಬೀರ:- ಗುರುಗಳೇ! ಅವನ ಪ್ರಭಾವವು ತಮಗಿಂತಲೂ ಅಧಿಕ ವೆಂದಿಗೂ ಆಗಲಾರದು; ಅವನೆಷ್ಟರಮಟ್ಟಿನವನು?

ರಾಮಾನಂದರು:- ಸುಮ್ಮನೇ ತಲೆಹರಟೆ ಹೊಡೆಯಬೇಡ. ನಿನ್ನ ಅಧಿಕಪ್ರಸಂಗ ಆತನ ಕಿವಿಗೆ ಬಿದ್ದರೆ ನಿನ್ನ ಇತಿಶ್ರೀ ಆದೀತು; ಸಾಕು ಸುಮ್ಮನಿರು.

ಕಬೀರ:- ಸ್ವಾಮೀ! ನಾನು ಸಜೀವವಾಗಿರುವವರೆಗೆ ಆ ಗೋರಖನ ಸಿದ್ಧಶಕ್ತಿಗೆ ತಾವು ಶರಣಾಗತರಾಗಲು ನಾನು ಒಪ್ಪಲಾರೆ. ತಾವು ಅಪ್ಪಣೆ ಕೊಡಿರಿ; ತಮ್ಮ ಆಶೀರ್ವಾದ ಬಲದಿಂದಲೂ, ಆ ಭಗವಂತನ ಕರುಣಕಟಾಕ್ಷದಿಂದಲೂ ಆತನೇ ನಿಮಗೆ ಶರಣಾಗತನಾಗದೆ ಇರನು ಎಂದು ಹಠ ಹಿಡಿದನು.

ರಾಮಾನಂದರಿಗೆ ಏನೂ ತೋಚದಾಗಿ, ಸಂಶಯಕ್ಕೆ ಸಿಲುಕಿ ಕಬೀರನಿಗೆ "ನಿನ್ನಿಚ್ಛೆಯಂತೆ ಮಾಡೆಂದರು." ಆಗಲೇ ಕಬೀರನು ಗುರುಗಳಿಗೆ ವಂದಿಸಿ, ಆಶೀರ್ವಾದ ಪಡೆದು, ಅಲ್ಲಿಂದ ತೆರಳಿ ಗೋರಖನು ವಾಸಮಾಡಿದ ಮಠಕ್ಕೆ ಬಂದನು; ರಾಮಾನಂದರೂ ಕಬೀರನೊಡನೆ ಬಂದರು. ಗೋರಖನು ಮಠದ ಮುಂಭಾಗದಲ್ಲಿಯೇ ಒಂದು ಉಕ್ಕಿನ ಶೂಲವನ್ನು ನೆಟ್ಟು ಅದರ ಮೇಲೆ ಪದ್ಮಾಸನರೂಢನಾಗಿ ಕುಳಿತು ಕಬೀರನೂ, ರಾಮಾನಂದರೂ ಅಲ್ಲಿಗೆ ಬರುತ್ತಲೇ ಗೋರಖನು ಎಲವೋ ರಾಮಾನಂದ ಬಂದೆಯಾ, ಬೇಗ ಬಾ ಬಾ ಎಂದು ಅರ್ಭಟಿಸಿದನು. ಆಗ ಕಬೀರನು ಕಿಸೆಯಿಂದ ಒಂದು ದಾರದ ಎಳೆಯನ್ನು ಹೊರತೆಗೆದು ಶ್ರೀರಾಮ ನಾಮವನ್ನುಚ್ಚರಿಸಿ ಅದನ್ನು ಮೇಲಕ್ಕೆ ತೂರಿ ಅದನ್ನೇ ಹಿಡಿದು ಮೇಲಕ್ಕೇರಿ ಆ ದಾರದ ತುದಿಯ ಮೇಲೆ ಪದ್ಮಾಸನಾರೂಢನಾಗಿ ಕುಳಿತು ಗೋರಖನನ್ನು ಕುರಿತು— ಎಲವೋ ದುರಭಿಮಾನಿ ಮೊದಲು

ರಾಮಾನಂದರ ಪಾದಸೇವಕನಾದ ನನ್ನನ್ನು ಜಯಸಿದಮೇಲಲ್ಲವೇ, ರಾಮಾನಂದರನ್ನು ಜಯಿಸುವದು ಎಂದು ನುಡಿದನು. ಅಲ್ಲಿಯ ವರೆಗೆ ಯಾರೂ ಈ ರೀತಿಯಾಗಿ ಗೋರನಿಗೆ ಪ್ರತಿಭಟಿಸಿರಲಿಲ್ಲ ವಾದ್ದರಿಂದ ಗೋರನಿಗೆ ಆಶ್ಚರ್ಯವಾಯಿತು. ಕೂಡಲೇ ಆತನು ರಾಮಾನಂದ ರೂಪದಿಂದ ಎದುರು ನಿಂತನು. ಕಬೀರನೂ ಗೋರಖನ ಗುರುವಾದ ಮಚ್ಛಿಂದ್ರನಾಥನ ರೂಪದಿಂದ ಎದುರಾಗಿ ನಿಂತನು. ಹೀಗೆ ಗೋರಖನು ಮಾಡಿದ ಅನೇಕ ಮಾಯಾರೂಪಕ್ಕೆ ಪ್ರತಿರೂಪವನ್ನು ಕಬೀರನು ಹೊಂದುತ್ತಲಿದ್ದನು. ಕಡೆಗೆ ಇಬ್ಬರೂ ನಿಜರೂಪವನ್ನು ಧರಿಸಿ ಶಾಸ್ತ್ರಗಳ ವಾಗ್ವಾದದಲ್ಲಿ ತೊಡಗಿದರು. ಕಬೀರನು ಗೋರಖನ ಪ್ರಶ್ನೆಗೆ ನಿರ್ಭಯವಾಗಿ ಉತ್ತರ ಕೊಡುತ್ತಲೂ ಪುನಃಪ್ರಶ್ನೆಗಳನ್ನು ಮಾಡುತ್ತಿದ್ದನು. ಅವನು ಅದಕ್ಕೆ ಉತ್ತರ ಹೇಳಿ ಪುನಃ ಪ್ರಶ್ನೆಗಳನ್ನು ಮಾಡುತ್ತಿದ್ದನು. ಹೀಗೆ ಕೆಲವೇಳೆ ನಡೆದನಂತರ ಕಬೀರನ ಪ್ರಶ್ನೆಗೆ ಗೋರಖನು ಉತ್ತರ ಹೇಳದೇ ಇಲ್ಲಿಗೆ ಬಂದದ್ದೇ ಮೂರ್ಖತನವಾಯಿತೆಂದೆಣಿಸಿ ಅದೃಶ್ಯ ಕರುಣಿ ವಿದ್ಯೆಯ ಸಹಾಯದಿಂದ ಅದೃಶ್ಯನಾಗಿ ಹೊರಟು ಹೋದನು. ಆಗಲ್ಲಿ ನೆರೆ ದವರೆಲ್ಲರೂ ಕಬೀರನ ಜಯಘೋಷ ಮಾಡಿದರು. ರಾಮಾನಂದರು ಪರಮ ಸಂತೋಷದಿಂದ ಕಬೀರನನ್ನು ಆಲಿಂಗನ ಮಾಡಿಕೊಂಡು, ಕಬೀರ ! ನೀನು ಧನ್ಯನು ! ಭಗವಂತನ ಸಹಾಯದಿಂದ ನೀನು ನನ್ನ ಮಾನ ಉಳಿಸಿದಿ ಎಂದರು. ಆಗ ಕಬೀರನು ಗುರುಗಳೇ ! ಆ ಶ್ರೀರಾಮನ ಸಹಾಯವೂ ತಮ್ಮ ಆಶೀರ್ವಾದದ ಬಲವೂ ನನಗಿರದಿದ್ದರೆ ನಾನೇನು ಮಾಡಬಲ್ಲೆ ! ಎಂದೆನ್ನುತ್ತ ಗುರುಗಳಿಗೆ ವಂದಿಸಿದನು. ಆಗೆಲ್ಲರೂ ಕಬೀರನ ಚಮತ್ಕಾರ ವನ್ನು ಕಂಡು ಆತನನ್ನು ಕೊಂಡಾಡುತ್ತ ಮನೆಗೆ ತೆರಳಿದರು.

ಕಬೀರನು ವಿವಾಹ ವಯಸ್ಕನಾದರೂ ಅವನ ತಂದೆಯಾದ ತಮಾ ಲನು ಆ ವಿಚಾರವನ್ನೇ ಮಾಡಲಿಲ್ಲ. ಕಾಯುವವನಿಗೆ ಬಿಟ್ಟರೂ ಕಟ್ಟುವ ವನಿಗೆ ಬಿಡುವದೇ ? ಎಂದಾಡುವ ಬಳಿಕೆಯ ನುಡಿಯಂತೆ, ನಿಮಿತ್ತ ಮಾತ್ರ ತಂದೆಯಾಗಿದ್ದ ತಮಾಲನು ಕಬೀರನ ವಿವಾಹ ವಿಚಾರವನ್ನು ಬಿಟ್ಟರೂ ಆ ಜಗನ್ನಿಯಾಮಕನಿಗೆ ಬಿಡುವದೇ, ಅಂತೆಯೇ ಅವನು ಆ ರಾತ್ರಿ ತಮಾಲನ ಸ್ವಪ್ನದಲ್ಲಿ ಕಾಣಿಸಿಕೊಂಡು-ತಮಾಲ ! ನೀನು ಕಬೀರನ ಲಗ್ನ ಕ್ಕಾಗಿ ಪ್ರಯತ್ನ ಮಾಡು. ಮತ್ತು ನಾಳೆ ಇದೇ ಊರಲ್ಲಿ ಸರ್ದಾರ ಸುಲೇ

ಮಾನನೆಂಬವನ ಮಗಳು ಸುಂದರಬೀ ಇರುವಳು. ಅವಳನ್ನು ಕಬೀರನೊಡನೆ ಲಗ್ನಮಾಡು. ಎಂದು ಹೇಳಿ ಅಂತರ್ಗತನಾದನು. ತಮಾಲನು ಎಚ್ಚತ್ತು ತನ್ನ ಸ್ವಪ್ನ ವಿಚಾರವನ್ನು ಹೆಂಡತಿಯೊಡನೆ ವಿಚಾರಿಸಿ ಮರುದಿನ ಕನ್ಯಾಮಣಿಗಾಗಿ ತಕ್ಕ ಜನರನ್ನು ಕೂಡಿಕೊಂಡು ಹೋಗಬೇಕೆಂದು ಪ್ರಯತ್ನಿಸುತ್ತಿರುವಾಗ ಶ್ರೀರಾಮಚಂದ್ರನು ಖಾಜೀರೂಪದಿಂದ ತಮಾಲನ ಮನೆಗೆ ಬಂದು ಲಗ್ನ ವಿಚಾರದಲ್ಲಿಯೂ, ಶ್ರೀಮಂತನಾಗಿ ಧನದ ವಿಚಾರದಲ್ಲಿಯೂ ಆಯಾ ಕೆಲಸಗಳಲ್ಲಿ ಆಯಾ ರೂಪ ಧರಿಸಿ ತಮಾಲನಿಗೆ ಸಹಾಯಕನಾಗಿ ನಿಂತು ಕಬೀರನ ಲಗ್ನವು ಸುಂದರಬೀಯೊಡನೆ ಬಹು ವಿಜೃಂಭಣೆಯಿಂದ ನೆರವೇರಿಸಿ ಆಶೀರ್ವದಿಸಿ ಅಂತರ್ಗತನಾದನು.

ಕಬೀರನು ಸತಿಯೊಡನೆ ಸಂಸಾರದಲ್ಲಿ ಕಾಲಿಟ್ಟು ಸುಖವಾಗಿದ್ದನು. ಇಂತು ಕೆಲ ದಿನಗಳು ಕಳೆದ ನಂತರ ಸುಂದರಬೀಬಿಯು ಗರ್ಭವತಿಯಾಗಿ ಗಂಡುಮಗನನ್ನು ಹೆತ್ತಳು. ಆ ಮಗನಿಗೆ ಕಮಾಲನೆಂದು ನಾಮಕರಣ ಮಾಡಿದರು. ಕಮಾಲನ ಬಾಲಲೀಲೆಗಳನ್ನು ಕಂಡು ಆನಂದಿಸುತ್ತ ಕಾಲ ಕಳೆಯುತ್ತಿದ್ದರು.

ಹೀಗಿರಲು ಒಂದು ದಿನ, ಪಂಢರಪುರಕ್ಕೆ ಯಾತ್ರೆಗಾಗಿ ಹೋಗಿದ್ದ ಒಂದು ಸಾವಿರ ಜನ ಸಾಧು ಸಂತರು ಕಾಶೀ ಕ್ಷೇತ್ರಕ್ಕೆ ಬಂದು ಕಬೀರನ ಮನೆಗೆ ಬಂದು ವಸತಿ ಮಾಡಿದರು. ಆಗ ರಾತ್ರಿ ಹತ್ತು ಗಂಟೆಯಾಗಿತ್ತು. ಬಂದವರಿಗೆ ಮರ್ಯಾದೆಯಿಂದ ಸತ್ಕರಿಸಿ, ತುಳಸಿ ತೋಟದಲ್ಲಿ ಉಳಿದುಕೊಳ್ಳುವಂತೆ ವ್ಯವಸ್ಥೆ ಮಾಡಿ, ತಾನು ಮನೆಗೆ ಬಂದು ಸುಂದರಬೀಬಿಯನ್ನು ಕಂಡು ಸಾಧುಗಳ ಊಟೋಪಚಾರದ ಬಗ್ಗೆ ವಿಚಾರಿಸಿದನು. ಆಗಾಕೆಯು ಮನೆಯಲ್ಲಿ ಏನೂ ಇಲ್ಲವೆಂದು ತಿಳಿಸಿದಳು. ಆಗಾ ಕಬೀರನು ಹಾಗಾದರೆ ಈಗೀ ಸಾಧುಗಳ ಊಟೋಪಚಾರಗಳ ವ್ಯವಸ್ಥೆಯೆಂತು? ಎಂದು ಆಲೋಚಿಸಿ ಉಸಿರ್ಗರೆದು, ಶ್ರೀರಾಮನೆಂತು ರಕ್ಷಿಸುವನೋ? ತಿಳಿಯದೆಂದು ಚಿಂತಿಸುತ್ತಿರಲು ಆಗ ಸುಂದರಬೀಬಿಯು ನಾಥಾ! ಈಗಾವ ಯತ್ನವಿಲ್ಲವಾದರೂ ಒಂದು ಪ್ರಯತ್ನವನ್ನು ಮಾಡಿದರೆ ದೇವರು ಕೃಪೆ ಮಾಡಬಹುದು. ಅದೇನಂದರೆ ಈ ನಗರದ ಅಂಗಡಿ ಸಾಲಿನಲ್ಲಿ ತುಲಸೀ ಶೇಠನೆಂಬ ವರ್ತಕನಿರುವನು. ಅವನಿಗೀ ವಿಚಾರವನ್ನು ತಿಳಿಸಿದರೆ

ಸಹಾಯ ಮಾಡಬಹುದೆಂದಳು. ಆಗ ಕಬೀರನು ತನ್ನ ಸತಿಯಾಡಿದ ಮಾತುಗಳು ಸೂಕ್ತವೆಂದು ನಿರ್ಧರಿಸಿ ಸಂತೋಷದಿಂದ ತುಲಸೀ ಶೇಠನ ಮನೆಗೆ ಹೋದನು.

ಕಬೀರದಾಸನ ಹೆಂಡತಿಯಾದ ಸುಂದರಬೀಬಿಯ ಮೇಲೆ ಮೋಹ ಗೊಂಡಿದ್ದ ತುಳಸೀಶೇಠನು, ಕಬೀರನು ರಾತ್ರಿ ಸಮಯದಲ್ಲಿ ತನ್ನ ಮನೆಗೆ ಬರಲು ಕಾರಣವೇನು ? ತನ್ನ ಗುಟ್ಟು ಗೊತ್ತಾಗಿ ದಂಡಿಸಲು ಬಂದಿರಬಹುದೆಂದು ಆಲೋಚಿಸಿ ಭೀತಿಗೊಂಡಿದ್ದನು. ಆದರೆ ಕಬೀರನು ಬಂದೊಡನೆ ನಮಸ್ಕಾರ ಮಾಡಿ–ಶೆಟ್ಟರೇ ! ಇಂದು ನಮ್ಮ ಮನೆಗೆ ಒಂದು ಸಾವಿರ ಜನ ಸಾಧುವರ್ಯರು ಬಂದಿರುವರು. ಅವರನ್ನು ಅನ್ನೋದಕ ದಿಂದ ಸಂತೈಸಬೇಕಾಗಿದೆ. ಕಾರಣ ಒಂದು ಸಾವಿರ ಜನರಿಗೆ ಬೇಕಾದಷ್ಟು ದವಸ ಧಾನ್ಯಗಳನ್ನು ಕೊಡು. ನಾನು ಹಣವನ್ನು ಕೆಲದಿನಗಳಲ್ಲಿ ತಂದು ಮುಟ್ಟಿಸುವೆನು ಎಂದನು. ಆಗಾ ಶೇಠನು ಇದರಲ್ಲಿ ಏನೋ ಮೋಸವಿದೆ ಯೆಂದು ಭಾವಿಸಿ ನಿರಾಕರಿಸಿದನು. ಆಗ ಕಬೀರನು ಹಾಗೆ ಮಾಡಬೇಡಿರಿ ಶೆಟ್ಟರೇ ! ನಿಮಗೆ ಪುಣ್ಯ ಬರುವದು, ದಯಮಾಡಿ ಕೊಡಿರಿ ಎಂದು ಅಂಗ ಲಾಚಿ ಬೇಡಿಕೊಂಡನು. ಆಗಾ ಶೇಠನು– ಹಾಗಾದರೆ ಅದರ ಪ್ರತಿಫಲ ವೇನು ? ಕಬೀರನು– ನೀವು ಏನು ಕೇಳುವಿರೋ ಅದನ್ನು ಕೊಡುವೆ ನೆಂದನು. ಹಾಗೆ ವಚನ ಕೊಡು ಎಂದು ಹೇಳಿ ಕಬೀರನಿಂದ ವಚನ ತಗೊಂಡು ಸುಂದರಬೀಬಿಯ ಮೇಲೆ ತನ್ನ ಮೋಹವಿದೆಯೆಂದು ಹೇಳಿ ದನು. ಆಗ ಕಬೀರನು ಆಗಲಿ. ಆದರೆ ಮೊದಲು ಸಾಧುವರ್ಯರ ವ್ಯವಸ್ಥೆ ಯಾದ ನಂತರ ನಿನ್ನಿಚ್ಛೆ ಪೂರೈಸುವದು ಎಂದು ಹೇಳಿ ಸಾವಿರ ಜನರಿಗೆ ಸಾಕಾಗುವಷ್ಟು ದವಸ ಧಾನ್ಯಗಳನ್ನು ಬಂಡಿಯಲ್ಲಿ ಹೇರಿಕೊಂಡು ಮನೆಗೆ ಬಂದು ಸಾಧು ಸಂತರಿಗೆ ಅನ್ನ ಸಂತರ್ಪಣೆ ಮುಗಿಸಿ ಮನೆಗೆ ಬಂದು ತನ್ನ ಸತಿಯನ್ನು ಕರೆದುಕೊಂಡು ತುಳಸೀ ಶೇಠನ ಮನೆಗೆ ತೆರಳಿದನು.

ಇತ್ತ ತುಳಸೀಶೇಠನು ಮನೆಯ ಮುಂಭಾಗದಲ್ಲಿಯ ಒಂದು ಕೋಣೆಯಲ್ಲಿ ಸುಗಂಧ ದ್ರವ್ಯಗಳನ್ನು ಸಿಂಪಡಿಸಿ ಕಾಮೋನ್ಮತ್ತನಾಗಿ ಸುಂದರಬೀಬಿಯ ಬರುವಿಕೆಯನ್ನು ಎದುರು ನೋಡುತ್ತಲಿದ್ದನು. ಕಬೀ ರನು ಸಾಧು ಸಂತರ್ಪಣೆ ಮುಗಿಸಿ ಸತಿಯನ್ನು ಕರೆಯುವದಕ್ಕೆ ತಡ

ವಾಗಲು, ತುಳಸೀಶೇಠನು ಕಬೀರನು ಸುಳ್ಳುಹೇಳಿ ದವಸ - ಧಾನ್ಯಗಳನ್ನು ಒಯ್ದನೆಂದು ಆಲೋಚಿಸುವಷ್ಟರಲ್ಲಿ ಕಬೀರ ಅಲ್ಲಿಗೆ ಬಂದು ಸತಿಗೆ ನೀನು ಇಂದು ತುಳಸೀಸೇಠರ ಸೊತ್ತು. ಅವರ ಇಚ್ಛೆಯಂತೆ ವರ್ತಿಸು. ಎಂದು ಹೇಳಿ ಒಳಗೆ ಕಳಿಸಿ ಮನೆಗೆ ಮರುಳಿದನು. ಸುಂದರಬೀಬಿಯು ಒಳಗೆ ಹೋಗಿ ಮಂಚದಹತ್ತಿರ ನಿಂತುಕೊಳ್ಳಲು ಆಕೆಯನ್ನು ಕಂಡು ಕಾಮೋದ್ರೇಕಗೊಂಡ ತುಳಸೀಶೇಠನು ಬಾ....ಸುಂದರೀ ಇತ್ತ ಬಾ ಇಲ್ಲಿ ಕುಳಿತುಕೋ ಎಂದು ಹೇಳಲು ಸುಂದರಬೀಬಿಯು ನಡೆದುಹೋಗಿ ಮಂಚದ ಮೇಲೆ ಕೂತು ವೀಳ್ಯೆಯನ್ನು ಸುತ್ತಿಕೊಡುತ್ತಿದ್ದಳು.

ಸಾಧುಸಂತರ ಅನ್ನ ಸಂತರ್ಪಣೆಗಾಗಿ ಹೆಂಡತಿಯನ್ನೇ ವಿಕ್ರಯಿಸಿದ್ದರಿಂದ ಅದಕ್ಕೆ ಹೊಣೆಗಾರ ನಾನೆಂದು ಶ್ರೀರಾಮನು ಚಿಂತಿಸಿ ತಡಮಾಡಿದರೆ ಆ ಸಾಧ್ವಿಯ ಮಾನ ಮಾರುವದೆಂದು ತಿಳಿದು, ಶ್ರೀರಾಮ ಲಕ್ಷ್ಮಣರು ಕೊತವಾಲ ಮತ್ತು ಸಿಪಾಯಿಗಳ ವೇಷವನ್ನು ಧರಿಸಿ ತುಳಸೀಶೇಠನ ಮನೆಗೆ ಬಂದು ಆತನನ್ನು ಕೂಗಿ ಬಾಗಿಲು ತೆಗೆಯೆಂದು ಹೇಳಿದರು. ಆದರೆ ಆ ಶೇಠನು ತೀವ್ರ ಕದ ತೆಗೆಯದ್ದರಿಂದ ಕದ ಮುರಿದು ಒಳಹೊಕ್ಕು ಇಷ್ಟು ರಾತ್ರಿಯಲ್ಲಿ ಏನು ಮಾಡುತ್ತಿದ್ದಿ ? ಈ ಸಾಧ್ವಿಯಾರು ? ಎಂದು ಕೇಳಲು ಆತನು ಇವಳು ಮಹಾಸಾಧ್ವಿಯು. ಪಾದಪೂಜೆಗಾಗಿ ಕರೆಸಿದ್ದೇನೆ ಎಂದು ಹೇಳಿದನು. ಹಾಗಾದರೆ ಈಗ ಪೂಜೆ ಮಾಡು. ಎಂದು ಹೇಳಿ ಆತನಿಂದ ಪೂಜೆ ಮಾಡಿಸಿ, ಸುಂದರಬೀಬಿಯನ್ನು ಕರೆದೊಯ್ದು ಆಕೆಯ ಮನೆಗೆ ಬಿಟ್ಟು ಅದೃಶ್ಯರಾದರು. ಆಗ ಕಬೀರನು ಇಷ್ಟು ತೀವ್ರ ಏಕೆ ಬಂದೆ ಎಂದು ಸುಂದರಬೀಬಿಯನ್ನು ಕೇಳಲು ಆಕೆಯು ನಡೆದ ಸಮಾಚಾರವನ್ನು ತಿಳಿಸಿದಳು. ಕಬೀರನು ತುಳಸೀಶೇಠನು ಏನು ತಿಳಿದುಕೊಳ್ಳುವನೋ ಎಂದು ಭಾವಿಸಿ ಕೊತವಾಲನ ಮೇಲೆ ಸಿಟ್ಟಾಗಿ ಮಧ್ಯರಾತ್ರಿಯಾಗಿದ್ದರೂ ಕೊತವಾಲನ ಮನೆಗೆ ತೆರಳಿ ಆತನನ್ನು ಎಬ್ಬಿಸಿ ನೀನು ತುಳಸೀಸೇಠನಿಗೇಕೆ ತ್ರಾಸುಮಾಡಿದೆ ? ಎಂದು ಕೇಳಿದನು. ಆಗ ಕೊತವಾಲನು ಏನೂ ಅರಿಯೆನೆಂದು ಹೇಳಲು ಕೊತವಾಲನನ್ನು ಕುರಿತು ನೀನು ತುಳಸೀಶೇಠನಮನೆಗೆ ಹೋಗಿಲ್ಲವೇ ? ಎಂದನು. ಆಗ ಕೊತವಾಲನು ಇಲ್ಲವೆನ್ನಲು ಹಾಗಾದರೆ ನಡೆ ತುಳಸೀಶೇಠನ ಮನೆಗೆ

ಹೋಗೋಣವೆಂದು ಆತನನ್ನು ಕರೆದುಕೊಂಡು ತುಳಸೀಶೇಠನ ಮನೆಗೆ ಬಂದನು. ತುಳಸೀಶೇಠನು ಕಬೀರ ಮತ್ತು ಕೊತವಾಲರು ಕೂಡಿಬಂದು ದನ್ನು ಕಂಡು ಮತ್ತೇನು ಅನರ್ಥ ಘಟಿಸುವದೋ ಎಂದು ಹೆದರಿದ್ದನು. ಆದರೆ ಕಬೀರನು ಬಂದು ಶೇಠರೇ ! ಇವನು ನಿಮ್ಮ ಮನೆಗೆ ಬಂದು ಕದ ತೆಗೆಯಿಸಿ ತ್ರಾಸು ಕೊಟ್ಟಿಲ್ಲವೇ ಎಂದನು. ಆಗಾ ಶೇಠನು ಹೌದೆನ್ನಲು ಸಿಟ್ಟಿಗೆದ್ದು ಅಲ್ಲೇ ಬಿದ್ದಿದ್ದ ಬಡಿಗೆಯಿಂದ ಕೋತವಾಲನನ್ನು ಹೊಡೆಯ ಹೋದನು. ಆಗ ಶ್ರೀ ರಾಮನು ಸುಪ್ರಸನ್ನನಾಗಿ ಕಬೀರ ತುಳಸೀಶೇಠ ನಿಗೆ ಕೋತವಾಲನ ರೂಪದಲ್ಲಿ ತ್ರಾಸು ಕೊಟ್ಟವನು ನಾನು. ಆ ಅಪರಾ ಧಕ್ಕೆ ಪ್ರಾಯಶ್ಚಿತ್ತವಾಗಬೇಕಾಗಿದ್ದರೆ ಅದು ನನಗೆ ಸಲ್ಲಲಿ. ಎಂದು ಹೇಳಲು ಕಬೀರನು ಕೈಯಲ್ಲಿಯ ಬಡಿಗೆಯನ್ನು ಒಗೆದು ಸಾಸ್ಟಾಂಗ ನಮ ಸ್ಕಾರ ಮಾಡಿದನು. ಆಗ ಭಕ್ತವತ್ಸಲನು ಕಬೀರ ! ನಿನ್ನ ತ್ಯಾಗವು, ಸರಳ ಸ್ವಭಾವವು ಅಪಾರವಾದುದು ಎಂದು ಆಶೀರ್ವದಿಸಿ ಅದೃಶ್ಯನಾದನು. ಆಗೆಲ್ಲರೂ ಕಬೀರ ಮಹಾತ್ಮೆಯನ್ನೂ ಆತನನ್ನು ಹೊಗಳುತ್ತ ಹೋದರು.

ಇಂತು ಕೆಲದಿನ ಸಾಧುಸಂತರ ಸೇವೆಯಲ್ಲಿ ಕಾಲಕಳೆದು ಆ ಮೇಲೆ ತೀರ್ಥಯಾತ್ರಾಟನೆಗಾಗಿ ಹೊರಟನು. ಅಲ್ಲಲ್ಲಿ ವಸತಿಗಳನ್ನು ಮಾಡು ತ್ತಲೂ, ಶ್ರೀರಾಮನ ಭಕ್ತಿಪ್ರಭಾವವನ್ನು ಜನರಿಗೆ ತಿಳಿಸಿಹೇಳುತ್ತಲೂ ಪ್ರಯಾಣಮಾಡುತ್ತಿದ್ದನು. ದಾರಿಯಲ್ಲಿ ಸತ್ತವರನ್ನು ಬದುಕಿಸಿದನು, ಭಾವಿಯಲ್ಲಿ ಸತ್ತ ಆಕಳನ್ನು ಬದುಕಿಸಿದನು, ಶಾಪದಿಂದ ಹುಲಿಯಾಗಿದ್ದ ವನನ್ನೂ, ಬ್ರಹ್ಮರಾಕ್ಷಸನಾದವನನ್ನೂ ಶಾಪವಿಮೋಚನರನ್ನಾಗಿ ಮಾಡಿ ಅಹಿಂಸಾಧರ್ಮವನ್ನು ಪ್ರಸಾರಮಾಡುತ್ತ ಅನೇಕ ಕ್ಷೇತ್ರಗಳನ್ನು ಸಂದರ್ಶಿಸಿ ಮರಳಿ ಕಾಶಿಗೆ ಬಂದನು.

ಇಂತು ಸ್ವಗ್ರಾಮದಲ್ಲಿ ಸತಿ-ಸುತರೊಡನೆ ಕಾಲಕಳೆಯುತ್ತಿರುವಾಗ ಮತ್ತೊಂದು ಸಲ ಸಾಧು-ಸಂತರನೇಕರು ಬಂದು ಕಬೀರನನ್ನು ಸಂದ ರ್ಶಿಸಿ ತೋಟದಲ್ಲಿ ಭಜನೆಗಾರಂಭಿಸಿದರು. ಆಗ ಕಬೀರನು ಅವರ ಊಟೋಪಚಾರದ ಬಗ್ಗೆ ವಿಚಾರ ಮಾಡುತ್ತಿರಲು ತಮಾಲನು ಮುಂದೆ ಬಂದು ಅಪ್ಪಾ, ಮಾತೆಯು ಹಿಂದೊಮ್ಮೆ ತನ್ನ ಸರತಿಯೆಂದು ಭಾವಿಸಿ ಆ ಸಮಯವನ್ನು ಸುಧಾರಿಸಿದ್ದಳು; ಇಂದು ನನ್ನ ಸರತಿಯಾಗಿದೆ.

ನಾನಾ ಸಾಧುಸಂತರ ಸೇವೆ ಮಾಡುವನು. ಎಂದು ಹೇಳಿ ಕಬೀರನನ್ನು ಕರೆದುಕೊಂಡು ಹೋಗಿ ಒಂದು ದೊಡ್ಡ ಅಂಗಡಿಗೆ ಕನ್ನ ಹಾಕಿ ಒಳ ಹೊಕ್ಕು ಬೇಕಾದ ಪದಾರ್ಥವನ್ನು ಕದ್ದು ಮನೆಗೆ ಸಾಗಿಸಿದರು. ಕಡೆಯ ಸಲ ಕಮಾಲನು ಅಂಗಡಿಯ ಮಾಲಕನನ್ನು ಎಬ್ಬಿಸಿ ನಾವು ನಿನ್ನ ಅಂಗಡಿ ಕಳುವು ಮಾಡಿದೆವು ಏಳು ಎಂದು ಎಬ್ಬಿಸಿ ಕನ್ನದ ಕಿಂಡಿಯಿಂದ ಹೊರಗೆ ಬರುವಷ್ಟರಲ್ಲಿ ಅಂಗಡಿ ಮಾಲಕನು ಓಡಿಬಂದು ಆತನ ಕಾಲು ಗಳನ್ನು ಘಟ್ಟಿಯಾಗಿ ಹಿಡಿದುಕೊಂಡನು. ಆಗ ಕಮಾಲನನ್ನು ಕಬೀರನು ಹೊರಕ್ಕೆಳೆಯುತ್ತಲೂ ಆ ಅಂಗಡಿಯವನು ಒಳಗೆ ಜಗ್ಗುತ್ತಲೂ ಇರು ವಾಗ ಕಮಾಲನ ಹೇಳಿಕೆಯಂತೆ ಆತನ ಶಿರವನ್ನು ಕತ್ತರಿಸಿಕೊಂಡು ಮನೆಗೆ ಬಂದು ಅದನ್ನು ಹೆಂಡತಿಯ ಕೈಯಲ್ಲಿ ಕೊಟ್ಟು ನಡೆದ ಸಮಾ ಚಾರವನ್ನು ತಿಳಿಸಿದನು. ಆಗ ಆ ಸಾಧ್ವಿಯು ಸ್ವಲ್ಪವೂ ದುಃಖಿಸದೇ ಆ ರುಂಡವನ್ನು ಒಂದು ಅರಿವೆಯಲ್ಲಿ ಸುತ್ತಿಟ್ಟು ಸಾಧುಸಂತರ್ಪಣೆಯನ್ನು ಸಾಂಗಗೊಳಿಸಿದಳು.

ಅತ್ತ ಆ ವರ್ತಕನು ಆ ಮುಂಡವನ್ನು ರಾಜನಿಗೊಪ್ಪಿಸಿ, ನಡೆದ ಸಮಾಚಾರವನ್ನರುಹಿದನು. ಆಗ ಆ ರಾಜನು ಆ ಮುಂಡವನ್ನು ಅಗಸಿಬಾಗ ಲಿಗೆ ತೂಗುಕಟ್ಟಿಸಿ ಅಲ್ಲಿ ಕಾವಲಿಗಾಗಿ ಸೇವಕರನ್ನು ನೇಮಿಸಿ ಆ ಮುಂಡ ವನ್ನು ಕಂಡು ಯಾರು ದುಃಖಿಸುವರೋ ಅವರನ್ನು ತಂದೊಪ್ಪಿಸಬೇಕೆಂದು ಆಜ್ಞೆ ಮಾಡಿದನು. ಮರುದಿನ ಕಬೀರನು ಸಾಧುಸಂತರನ್ನು ಬೀಳ್ಕೊ ಡಲು ಸಾಧು-ಸಂತರನ್ನೊಳಗೊಂಡು ಅಗಸೀ ಬಾಗಲಿಗೆ ಬರುತ್ತಲೇ ಆ ಮುಂಡವು ಕೈತಟ್ಟಿ ಕುಣಿಯಲಾರಂಭಿಸಿತು. ಈ ಆಶ್ಚರ್ಯವನ್ನು ಕಂಡು ಆ ಸಾಧುಸಂತರಲ್ಲಿಯೇ ನಿಂತು ಆ ವಿಷಯವಾಗಿ ಕಬೀರನನ್ನು ವಿಚಾರಿಸಲು ಅವನು ಎಲ್ಲ ಸಂಗತಿಯನ್ನು ತಿಳಿಸಿದನು. ಆಗ ಆ ಮುಂಡ ವನ್ನು ಕೆಳಗಿಳಿಸಿ ರುಂಡವನ್ನು ತರಿಸಿ ಎರಡನ್ನೂ ಜೋಡಿಸಿ ಎಲ್ಲರೂ ಏಕ ಕಂಠದಿಂದ ''ಜಯ್ ಜಯ್ ರಘುವೀರ ಸಮರ್ಥ'' ಎಂದುಚ್ಚರಿಸುತ್ತಲೇ ಕಮಾಲನು ನಿದ್ದೆಯಿಂದೆಚ್ಚತ್ತವನಂತೆ ಎದ್ದು ಎಲ್ಲರಿಗೂ ವಂದಿಸಿದನು. ಆಗ ಎಲ್ಲರೂ ಶ್ರೀರಾಮ ಭಕ್ತಿಯನ್ನು ಕಂಡ ಆ ಸಾಧುಗಳು ಕಬೀರನ ಮಹಾತ್ಮೆಯನ್ನು ಕೊಂಡಾಡುತ್ತ ತೆರಳಿದರು.

ಇಂತು ಕಬೀರದಾಸರು ಶ್ರೀರಾಮಭಕ್ತಿಯ ಪ್ರಭಾವವನ್ನು ವಿಸ್ತಾರ ಪಡಿಸಿ ಒಂದು ದಿನ ಯೋಗಮಾರ್ಗವನ್ನವಲಂಬಿಸಿ ಶರೀರವನ್ನು ತೊರೆದು ಪರಂಧಾಮ ಸಮಾಧಿಯನ್ನು ಸೇರಿದರು. ಆಗ ಅವರ ಶವಸಂಸ್ಕಾರಾರ್ಥ ವಾಗಿ ಹಿಂದೂಗಳೂ, ಮುಸಲ್ಮಾನರೂ ಬಡಿದಾಡತೊಡಗಿದರು. ಆಗೆರಡೂ ಪಂಗಡದವರ ಹಿರಿಯರ ಮಧ್ಯಸ್ಥಿಕೆಯಿಂದ ಎಲ್ಲರೂ ಅವರ ದರ್ಶನ ಪಡೆದ ನಂತರ ಒಟ್ಟಾಗಿ ಶವಸಂಸ್ಕಾರವನ್ನು ನಡೆಸತಕ್ಕದೆಂದು ನಿರ್ಣಯಿಸಿದರು. ಆ ಪ್ರಕಾರ ಅವರ ಅಂತ್ಯದರ್ಶನವಾಗಿ ಕಬೀರದಾಸನ ಮೈಮೇಲೆ ಹೊದಿಸಿದ ವಸ್ತ್ರವನ್ನು ತೆಗೆಯಲು ಅವರ ಶರೀರವು ಮಾಯವಾಗಿ ಮಲ್ಲಿಗೆ ಮತ್ತು ಗುಲಾಬೀ ಹೂವುಗಳ ರಾಶಿಗಳು ಮಾತ್ರ ಇದ್ದವು. ಹಿಂದುಗಳು ಮಲ್ಲಿಗೆ ಹೂವನ್ನೂ, ಮುಸಲ್ಮಾನರೂ ಗುಲಾಬೀ ಹೂವನ್ನೂ ಪ್ರೀತಿಯಿಂದ ಎತ್ತಿಕೊಂಡು ಮನೆಗೆ ತೆರಳಿದರು. ತದನಂತರ ಶ್ರೀ ರಾಮಾನುಗ್ರಹದಿಂದ ಸುಂದರಬೀಬಿಯೂ, ಕಮಾಲನೂ ಪರಂಧಾಮನ ಸಾನ್ನಿಧ್ಯವನ್ನು ಸೇರಿ ನಿತ್ಯಾನಂದವನ್ನು ಹೊಂದಿದರು.

---

## ೨೨. ಸಂತ ಮೀರಾಬಾಯಿ

ಉತ್ತರ ಹಿಂದುಸ್ಥಾನದಲ್ಲಿರುವ ರಜಪೂತಸ್ಥಾನದಲ್ಲಿ ಮೇವಾಡದ ರಾಜವಂಶದಲ್ಲೊಬ್ಬನಾದ ರಾಣಾ ಜಯಮಲ್ಲನೆಂಬಾತನು ರಾಜ್ಯಭಾರ ಮಾಡಿಕೊಂಡಿದ್ದನು. ಇವನು ಭೂಪಾಲನಾಗಿದ್ದರೂ ಇವನಲ್ಲಿ ಭಕ್ತಿರಸವು ತುಂಬಿಕೊಂಡಿತ್ತು; ಇವನ ಅರಮನೆಯಲ್ಲಿ ಆಗಾಗ್ಗೆ ಹರಿಕೀರ್ತನೆಗಳು ನಡೆಯುತ್ತಲಿದ್ದವು. ಈ ಕಾರಣದಿಂದ ಜಯಮಲ್ಲನ ಏಕೈಕಪುತ್ರಿಯಾದ ಮೀರಾಬಾಯಿಗೆ ಬಾಲ್ಯದಲ್ಲಿಯೇ ಶ್ರೀಕೃಷ್ಣನ ಗುಣಗಾನ ವರ್ಣನೆಯಲ್ಲಿ ಆಸಕ್ತಿಯುಂಟಾಯಿತು. ಒಂದು ದಿನ ಶ್ರೀಕೃಷ್ಣ ಪೂಜಾರಿಯು ಅತಿಥಿಯಾಗಿ ಬಂದನು. ಅವನು ಅಂದು ಒಂದು ಸುಂದರವಾದ ಶ್ರೀಕೃಷ್ಣನ ಮೂರ್ತಿಯನ್ನು ಪೂಜಾ ಪೆಟ್ಟಿಗೆಯಿಂದ ಹೊರತೆಗೆದು ಮಣೆಯ ಮೇಲೆ ಇಟ್ಟು ಧೂಪ-ದೀಪಗಳಿಂದ ಪೂಜಿಸಿದನು. ಅದನ್ನು ಕಣ್ಣಾರೆ ಕಂಡ

ಮೀರಾಬಾಯಿಯು ಆನಂದಪರವಶಳಾದಳು. ಪೂಜೆಗಾಗಿ ಫಲ ಪುಷ್ಪಾದಿಗಳನ್ನು ತಂದು ಕೊಡುವಲ್ಲಿ ಸಹಾಯಕಳಾದಳು. ಇಂತು ಪೂಜಾ ಸಮಾರಂಭವು ಪೂರೈಸಿದ ನಂತರ ಎಲ್ಲರೂ ಭೋಜನ ಮಾಡಿದರು. ಮೀರಾಬಾಯಿಯು ಆಗ ಸಾಧುವಿಗೆ ನಮಸ್ಕರಿಸಿ, ತನಗೆ ಈ ಕೃಷ್ಣಮೂರ್ತಿಯನ್ನು ಪೂಜಿಸಬೇಕೆಂಬ ಆಶೆಯುಂಟಾಗಿರುವದರಿಂದ, ಆ ಪ್ರತಿಮೆಯನ್ನು ದಯವಿಟ್ಟು ತನಗೆ ಕೊಡಬೇಕೆಂದು ಬೇಡಿಕೊಂಡಳು. ಆತನು ಬಹುಕಾಲದಿಂದಲೂ ಅಮೂಲ್ಯ ಆಭರಣಗಳನ್ನು ಕಾಯ್ದಿರಿಸಿಕೊಂಡಂತೆ ಬಹು ಎಚ್ಚರಿಕೆಯಿಂದ ಜೋಪಾನ ಮಾಡಿಕೊಂಡಿದ್ದರಿಂದ ಕೊಡುವದಿಲ್ಲವೆಂದು ಹೇಳಿದನು. ಮತ್ತು ಅಲ್ಲಿದ್ದರೆ ತೊಂದರೆಯುಂಟಾಗಬಹುದೆಂದೆಣಿಸಿ ಒಂದೆರಡು ಗಳಿಗೆಯಲ್ಲಿ ಅಲ್ಲಿ ನಿಲ್ಲದೇ ಹೊರಟು ಹೋದನು. ಮೀರಾಬಾಯಿಗೆ ಆ ವಿಗ್ರಹವು ದೊರೆಯದ್ದರಿಂದ ಬಹು ದುಃಖಗೊಂಡಳು. ಅದನ್ನು ತಂದುಕೊಡಲು ಯಾರಿಗೆ ಹೇಳಿದರೂ ಅವರು ಬೇರೊಂದು ವಿಗ್ರಹ ಮಾಡಿಸಿ ಕೊಡುವವೆಂದರು. ಇದರಿಂದ ವ್ಯಾಕುಲಗೊಂಡ ಮೀರಾಬಾಯಿಯು ಏಕಚಿತ್ತದಿಂದ ಮನೋವಿಗ್ರಹವನ್ನು ಧ್ಯಾನಿಸುತ್ತ ಕಾಲಕಳೆಯುತ್ತಿದ್ದಳು. ಇಂತಿರಲು ಒಂದು ದಿನ ಆ ಸಾಧವಿನ ಸ್ವಪ್ನದಲ್ಲಿ ಶ್ರೀಕೃಷ್ಣನು ಕಾಣಿಸಿಕೊಂಡು, ಎಲೈ ಸಾಧುವೇ ! ನೀನು ಪೂಜಿಸತಕ್ಕ ನನ್ನ ವಿಗ್ರಹವನ್ನು ಮೀರಾಬಾಯಿಗೆ ಒಪ್ಪಿಸು. ನಾನು ಆಕೆಯಿಂದ ಪೂಜೆ ಹೊಂದಲು ಇಚ್ಛಿಸುತ್ತೇನೆ. ಎಂದು ಹೇಳಿ ಅದೃಶ್ಯನಾದನು. ಕೂಡಲೇ ಪೂಜಾರಿಯು ಎಚ್ಚತ್ತು ಕನಸಿನ ವೃತ್ತಾಂತವನ್ನು ನೆನಸಿಕೊಂಡು ಜಯಮಲ್ಲನ ಮನೆಗೆ ಬಂದು ಶ್ರೀಕೃಷ್ಣಾಜ್ಞೆಯನ್ನು ತಿಳುಹಿಸಿ ಮೀರಾಬಾಯಿಗೆ ಆ ವಿಗ್ರಹವನ್ನು ಕೊಟ್ಟು ಮಗು ಇದನ್ನು ಭಯಭಕ್ತಿಗಳಿಂದ ಪೂಜಿಸು. ನಿನ್ನ ಇಷ್ಟಾರ್ಥ ಸಿದ್ಧಿಯುಂಟಾಗುವದೆಂದು ತಿಳಿಸಿ, ಆತನು ಬೃಂದಾವನಕ್ಕೆ ತೆರಳಿದನು ಅಂದಿನಿಂದ ಮೀರಾಬಾಯಿಯು ಆ ವಿಗ್ರಹವನ್ನು ಪ್ರಾಣಪದಕದಂತೆ ಭಾವಿಸಿ ಪೂಜಿಸುತ್ತಿದ್ದಳು. ತಮ್ಮ ತೋಟದಲ್ಲಿಯ ವಿವಿಧ ಹೂಗಳನ್ನೈತ್ತಿ ತಂದು ಷೋಡಷೋಪಚಾರಗಳಿಂದ ಯದುನಂದನನನ್ನು ಪೂಜಿಸುತ್ತಿದ್ದಳು. ಇಂತು 'ಆಕೆಯ ಜೀವನ ಸರ್ವಸ್ವವೂ ಶ್ರೀಕೃಷ್ಣ ಪೂಜೆಯಲ್ಲಿ ಲೀನವಾಗತೊಡಗಿತು. ಇಂತಿರುವಾಗ ಒಂದುದಿನ ನಗರದಲ್ಲಿ ಮದುಮಕ್ಕಳು ಮೆರವಣಿಗೆಯಿಂದ ಶೃಂಗರಿಸಿದ ಬಂಡಿಯಲ್ಲಿ ಕುಳಿತು ಹೊರಟ

ದ್ದರು. ಆಗ ರಾಜರಾಣಿಯರೂ, ಮೀರಾಬಾಯಿಯೂ ಹೊರಜಗುಲಿಯ ಮೇಲೆ ನಿಂತು ಆ ಉತ್ಸವವನ್ನು ನೋಡುತ್ತಲಿದ್ದರು. ಮೆರವಣಿಗೆ ಸಮೀಪಕ್ಕೆ ಬಂದಾಗ ಅನುರೂಪರಾಗಿದ್ದ ವಧೂವರರನ್ನು ಕಂಡು ಸಂತೋಷಪಟ್ಟರು. ಆಗ ಬಾಲೆಯಾದ ಮೀರಾಬಾಯಿಯು ಜಯಮಲ್ಲನನ್ನು ಕುರಿತು, ಅಪ್ಪಾ ಅವರಾರು ? ಎಂದು ಕೇಳಲು ಜಯಮಲ್ಲನು ಅವರು ಸತಿಪತಿಯರು ಎಂದನು. ಹಾಗಾದರೆ ನನ್ನ ಪತಿ ಯಾರು ? ಎಂದು ಆ ಬಾಲಿಕೆ ಕೇಳಿದ ಪ್ರಶ್ನೆಗೆ ಆತನು ನಸುನಕ್ಕು. ಹಾಸ್ಯವಾಗಿ ನಿನ್ನ ಪತಿ ಬೃಂದಾವನವಾಸಿ ಶ್ರೀಕೃಷ್ಣ ಎಂದು ಹೇಳಿದನು- ಆ ಬಾಲಿಕೆಯು ಅದನ್ನೆ ನಂಬಿ ಅಂದಿನಿಂದ ಶ್ರೀಕೃಷ್ಣನ ಧ್ಯಾನವನ್ನು ಅತಿಯಾಗಿ ಮಾಡಲಾರಂಭಿಸಿದಳು. ಯಾವ ಹಣ್ಣು ಹೂಗಳನ್ನು ಕಂಡರು ಅದನ್ನು ಶೇಖರಿಸಿ ತಂದು ಕೃಷ್ಣನಿಗೆ ನಿವೇದಿಸಿ ಸೇವಿಸುತ್ತಿದ್ದಳು.

ರಾಧಾರಮಣ ರಾಜೀವಲೋಚನ, ರಾಜೇಂದ್ರಾರ್ಚಿತ |
ರಾಜಗೋಪಾಲಾ ||

ಎಂದು ಹಾಡುತ್ತಿದ್ದಳು. ಒಂದೊಂದು ವೇಳೆ ಹಾಡಿನ ಆನಂದದಲ್ಲಿ ಪರವಶಳಾಗಿ ನರ್ತನ ಮಾಡುತ್ತಿದ್ದಳು. ಸಾಧುಗಳು ಮಾಡತಕ್ಕ ಸಂಕೀರ್ತನೆಯನ್ನು ಕೇಳಿ ಅವುಗಳನ್ನು ನೆನಪಿನಲ್ಲಿಟ್ಟುಕೊಂಡು ಹಾಡುತ್ತಿದ್ದಳು. ಮತ್ತು ಹೇ ಕೃಷ್ಣಾ ! ದಿನಬಂಧು, ನಿನ್ನ ನಾಮಸ್ಮರಣೆಯು ಸದಾ ಸರ್ವ ಕಾಲದಲ್ಲಿಯೂ ಅವಿಚ್ಛಿನ್ನವಾಗಿ ನೆಲೆಸಿಕೊಂಡಿರಲಿ ಎಂದು ಪ್ರಾರ್ಥಿಸುತ್ತಿದ್ದಳು. ಇಂತು ಎಡೆಬಿಡದೆ ಶ್ರದ್ಧಾ ಭಕ್ತಿಯಿಂದ ರಾಜಗೋಪಾಲ ಮೂರ್ತಿಯನ್ನು ತುಂಬಿದ ಪ್ರೇಮದಿಂದ ಪೂಜಿಸುತ್ತಿದ್ದಳು.

ಇಂತು ಶ್ರೀ ಕೃಷ್ಣ ಭಕ್ತಿಯೋಗವು ಆಕೆಯಲ್ಲಿ ಸ್ಥಿರವಾಗಿ ನೆಲೆಸಿಕೊಂಡಿತು. ಎಲ್ಲವೂ, ಆಕೆಗೆ ಶ್ರೀಕೃಷ್ಣ ಮಾಯವಾಗಿ ತೋರತೊಡಗಿತು. ನಿದ್ರಾವಸ್ಥೆಯಲ್ಲಿಯೂ ಕೂಡ ಕೃಷ್ಣನ ನಾಮಸ್ಮರಣೆಯನ್ನು ಮಾಡುತ್ತಿದ್ದಳು. ಇಂತು ಆಕೆ ಶ್ರೀ ಕೃಷ್ಣನಲ್ಲಿಟ್ಟ ಭಕ್ತಿಗಾಶ್ಚರ್ಯಪಟ್ಟು ತಮ್ಮ ಭವನದಲ್ಲಿಯೇ ಒಂದು ಕೃಷ್ಣಮಂದಿರವನ್ನು ಆಕೆಯ ತಂದೆತಾಯಿಗಳು ಕಟ್ಟಿಸಿ ಕೊಟ್ಟರು. ಅಂದಿನಿಂದ ಆ ಮಂದಿರದಲ್ಲಿಯೇ ಮೀರಾ ಕಾಲಕಳೆಯುತ್ತಲಿದ್ದಳು ಶ್ರೀಕೃಷ್ಣ ವಿಗ್ರಹಕ್ಕೆ ಅಭಿಷೇಕಮಾಡಿ ಪೀತಾಂಬರವನ್ನು

ಡಿಸಿ ತಿಲಕವನ್ನಿಟ್ಟು ಪೂಜಿಸುತ್ತಿದ್ದಳು. ಭಕ್ಷಭೋಜನಗಳನ್ನು ಮನೆಯಿಂದ ತಂದು ನಿವೇದಿಸಿಟ್ಟು ಹಾಡುತ್ತಿದ್ದಳು; ನರ್ತನ ಮಾಡುತ್ತಿದ್ದಳು. ಬರ ಬರುತ್ತ ಶ್ರೀ ಕೃಷ್ಣನೇ ತನ್ನ ಪತಿಯೆಂದು ಭಾವಿಸಿಕೊಂಡಳು. ತಾನು ತನ್ನ ಪ್ರಾಣಪ್ರಿಯನ ದಾಸಿಯೆಂದು ನಂಬಿದಳು; ಈ ಪ್ರಕಾರ ಆಕೆಯ ವಿಲಕ್ಷಣವೂ, ಅಮೂಲ್ಯವೂ ಆದ ಶ್ರೀಕೃಷ್ಣ ಸೇವೆಯನ್ನು ಕಂಡು ಆಕೆಯ ಬಂಧುಗಳು ಅದನ್ನು ಹೇಯವಾಗಿ ಕಾಣತೊಡಗಿದರು.

ಒಂದು ದಿನ ಜಯಮಲ್ಲನ ಮುಖ್ಯ ಬಂಧುಗಳು ಯಾವದೋ ಒಂದು ಉತ್ಸವ ನಿಮಿತ್ತವಾಗಿ ಮನೆಗೆ ಬಂದು ಕೂಡಿದ್ದವರು ಮೂರು-ನಾಲ್ಕು ದಿನಗಳ ವರೆಗೆ ಅವರಲ್ಲೇ ಉಳಿದುಕೊಂಡಿದ್ದರು. ಒಂದು ದಿನ ರಾತ್ರಿ ಊಟದ ನಂತರ ತಾಂಬೂಲ ಸೇವಿಸುತ್ತ ಮಾತುಕತೆಗಳು ಪ್ರಾರಂಭವಾದವು. ಆ ವೇಳೆಯಲ್ಲಿ ಮೀರಾಬಾಯಿಯ ಪ್ರಸ್ತಾಪವನ್ನು ಕುರಿತುಬಂದಿತು. ಆಕೆಗೆ ಕ್ಷಿಪ್ರದಲ್ಲೇ ವಿವಾಹ ಮಾಡಬೇಕೆಂದೂ, ಇಲ್ಲದಿದ್ದರೆ ಆಕೆಯು ಪೂರ್ತಿ ಮತಿಗೆಡುವಳೆಂದೂ, ತರುಣಿಯಾದವಳ ವಿವಾಹ ಬಹಳ ದಿನಗಳ ವರೆಗೆ ಬಿಡಕೂಡದೆಂದೂ, ಜಯಮಲ್ಲನಿಗೂ ಆತನ ಸತಿಗೂ ಒತ್ತಿಹೇಳಿದರು; ಅವರಿಗೂ ಅದೇ ಸರಿಯೆಂದು ತೋರಿತು. ವಿವಾಹ ಮಾಡಬೇಕೆಂದು ನಿಶ್ಚಯಿಸಿದರು; ಮಗಳಿಗೆ ತಕ್ಕ ವರನನ್ನು ಹುಡುಕತೊಡಗಿದರು.

ಮೀರಾಬಾಯಿಯು ಅಸಮಾನ್ಯ ಸೌಂದರ್ಯವತಿಯು, ಕಪ್ಪುಬಣ್ಣದ ಕೇಶರಾಶಿ, ಹರವಾದ ಹಣೆ, ಎಸಳುಮಲ್ಲಿಗೆ ಮೂಗು, ಬಿಲ್ಲುಕಾಮನ ಹುಬ್ಬು, ಕೆಂದುಟಿಯ ಚೆಲುವು, ಲಿಂಬಿಬಣ್ಣದ ಬೆಡಗಿನಿಂದ ಕೂಡಿದ ತಿದ್ದಿತೀಡಿದ ಮುಖಮಂಡಲದಿಂದೊಪ್ಪುವ ಸೌಂದರ್ಯಶಾಲಿನಿ, ಮೇಲಾಗಿ ಯೌವ್ವನ ಅಂದ ಮೇಲೆ ಕೇಳುವದೇನು ಇಂಥಹ ವನಿತಾರತ್ನವನ್ನು ಸತಿಯನ್ನಾಗಿ ಪಡೆಯತಕ್ಕವರ ಭಾಗ್ಯವೇ ಭಾಗ್ಯ; ಎಂದು ಎಲ್ಲೆಡೆಯಲ್ಲಿಯೂ ಹಬ್ಬಿ ಅನೇಕ ರಾಜಪುತ್ರರು ತಮ್ಮ ಸಂದೇಶಗಳನ್ನು ಕಳುಹಿಸಿ ತಮಗಾ ಕನ್ಯೆಯನ್ನು ಕೊಡಬೇಕೆಂದು ಆಗ್ರಹಪಟ್ಟಿದ್ದರು.

ಜಯಮಲ್ಲನು ರಾಜಪುತ್ರರ ಗುಣಧರ್ಮಗಳನ್ನು ಪರಿಶೀಲನೆಮಾಡಿ ಮಗಳಿಗನುರೂಪವಾದ ವರನನ್ನು ನಿಶ್ಚಯಿಸಿದನು. ಆಗಾತನು ಚಿತ್ತೂರ

ದೇಶಾಧೀಶ್ವರನಾದ ರಾಣಾಸಿಂಗನ ಮಗನು ಸುಗುಣ ಸುಲಕ್ಷಣ ಸಂಪನ್ನನೂ ವಯೋ ವಿದ್ಯಾಬುದ್ಧಿಗಳಲ್ಲಿ ಅಸಮಾನನೂ ಆದ ಭೋಜರಾಜನೆಂಬಾತನನ್ನು ಅಳಿಯನನ್ನಾಗಿ ಆರಿಸಿಕೊಂಡಿದ್ದನು. ಒಂದು ಶುಭ ಮುಹೂರ್ತದಲ್ಲಿ ಮಂಗಳವಾದ್ಯಗಳೊಡನೆ ಮಗಳ ವಿವಾಹವನ್ನು ಭೋಜರಾಜನೊಡನೆ ನೆರವೇರಿಸಿದರು. ವಿವಾಹಕ್ಕೆ ಬಂದಿದ್ದ ಬಂಧು ಮಿತ್ರರೆಲ್ಲರು ಮಾನ ಮರ್ಯಾದೆ ಸತ್ಕಾರಗಳಿಂದ ಸಂತುಷ್ಟರಾಗಿ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು.

ಮೀರಾಬಾಯಿಯು ಪತಿಯೊಂದಿಗೆ ಅತ್ತೆಯ ಮನೆಗೆ ಹೊರಡಲನುವಾದಳು. ಆಗ ತಂದೆ ತಾಯಿಗಳು ಮಗಳಿಗೆ ಕೊಡತಕ್ಕ ವಸ್ತ್ರಾಭರಣಗಳೆಲ್ಲವನ್ನೂ ಕೊಟ್ಟರು ಆದರೆ ಎಲ್ಲ ವಸ್ತುಗಳ ಮೇಲೆಯೂ ಮೀರಾಬಾಯಿಗೆ ಆಸೆಯುಂಟಾಗಲಿಲ್ಲ. ಮುಖ್ಯವಾಗಿ ತನ್ನ ಪ್ರಾಣಪದಕವಾದ ಶ್ರೀ ಕೃಷ್ಣಮೂರ್ತಿಯನ್ನು ತನ್ನೊಂದಿಗೆ ತಕ್ಕೊಂಡು ಪತಿಯೊಡನೆ ಅತ್ತೆಯ ಮನೆ ಸೇರಿದಳು.

ತನ್ನ ಸತಿಯು ಕೃಷ್ಣಪೂಜಾ ವಿಲಾಸಿನಿಯೆಂದು ತಿಳಿದವನಾದ ಭೋಜನು, ಆಕೆಯ ತವರುಮನೆಯಲ್ಲಿದ್ದಂತೆಯೇ ಒಂದು ಕೃಷ್ಣಮಂದಿರವನ್ನು ತನ್ನ ಭವನದಲ್ಲಿಯೇ ಕಟ್ಟಿಸಿಕೊಟ್ಟನು. ಮೀರಾಬಾಯಿ ಆ ಮಂದಿರದಲ್ಲಿ ಶ್ರದ್ಧಾ ಭಕ್ತಿಗಳಿಂದ ಆ ಕೃಷ್ಣಪರಮಾತ್ಮನನ್ನು ಅನನ್ಯ ಭಕ್ತಿಭಾವದಿಂದಲೂ ಪ್ರೇಮದಿಂದಲೂ ಎಡೆಬಿಡದೆ ಆರಾಧಿಸತೊಡಗಿದಳು. ನಿತ್ಯ ಮಂಗಳಪ್ರದವಾದ ಸಂಕೀರ್ತನೆಗಳನ್ನು ಮಾಡತೊಡಗಿದಳು ಇಂತು ಮೀರಾಬಾಯಿಯ ಕೃಪೆಯಿಂದ ಅಂತಃಪುರದವರಿಗೂ ಕರ್ಣಾನಂದಕರವಾದ ಭಕ್ತಿಯೋಗ ಶ್ರವಣವು ಲಭಿಸಿತು.

"ಶ್ರೀ ರಾಜಕೃಷ್ಣ, ರಾಜಗೋಪಾಲಾ, ಗಿರಿಧರ ಗೋಪಾಲಾ, ಗೋಕುಲ ಬಾಲಾ, ಆನಂದಪೂರ್ಣಾ, ಅಖಿಲಾತ್ಮರೂಪಾ, ದೀನಪರಿಪಾಲಾ, ಪ್ರಣತರಕ್ಷಣದಕ್ಷ ಪಾಂಡವಪಕ್ಷ, ಮುಕ್ತಿದಾಯಕ ದೇವಾ, ಮುನಿಜನ ವಂದ್ಯ ಎಂದು ಶ್ರೀಕೃಷ್ಣನ ವರ್ಣನೆಯನ್ನು ಭಜಿಸುತ್ತಿದ್ದಳು.

ಇಂತಿಕೆಯ ನಡೆನುಡಿಗಳನ್ನು ಕಂಡು ಅಳೆದು ನೋಡಿದ ಭೋಜರಾಜನು ತನ್ನ ಸತಿಗೆ ಪ್ರಾಕೃತ ಕಾಮೋಪಭೋಗಗಳಲ್ಲಿ ಲೇಶವೂ

ಇಲ್ಲವೆಂದೂ, ಅಪ್ರಾಕೃತ್ಯ ದಿವ್ಯ ಮಂಗಳಮೂರ್ತಿಯಾದ ಶ್ರೀಕೃಷ್ಣನಿಗೆ ಆತ್ಮಾರ್ಪಣ ಮಾಡಿರುವಳೆಂದೂ ಚನ್ನಾಗಿ ತಿಳಿದುಕೊಂಡನು.

ಮೀರಾಬಾಯಿಯು ರಾಜಭೋಗ ವಿಲಾಸಗಳನ್ನು ಅನುಭವಿಸದೆ ದಾಸಿಯಂತೆ ಮನೆಗೆಲಸಗಳನ್ನು ಲೋಪವಿಲ್ಲದೆ ಪೂರೈಸಿ, ಕೆಲಸಗಳು ಮುಗಿಯುತ್ತಲೇ ಕೃಷ್ಣಮಂದಿರವನ್ನು ಸೇರಿ ರಾಜಗೋಪಾಲನ ಪೂಜಾವಿಲಾಸಗಳಲ್ಲಿ ಮಗ್ನಳಾಗುತ್ತಿದ್ದಳು. ರಸಜ್ಞನೂ, ಪರಯಿಂಗಿತವನ್ನು ಚನ್ನಾಗಿ ಬಲ್ಲವನೂ ಆದ ಭೋಜರಾಜನು ತನ್ನ ಸಮಿತಿಯು ಆಚರಿಸತಕ್ಕ ರಾಜಗೋಪಾಲನ ಸೇವೆಗೆ ಅಡಚಣೆಪಡಿಸಲಿಲ್ಲ.

ಮೀರಾಬಾಯಿಯು ಅಣುವಿನಿಂದ ಅಹಂ ಬ್ರಹ್ಮನ ವರೆಗೆ ಎಲ್ಲವನ್ನೂ ಶ್ರೀಕೃಷ್ಣ ವಿಲಾಸವೆಂದೇ ತಿಳಿದಿದ್ದಳು. ಆಕೆಯ ಹೃದಯದಲ್ಲಿ ಹುದುಗಿಕೊಂಡಿದ್ದ ಭಕ್ತಿಯೋಗಕ್ಕೆ ಮೆಚ್ಚಿ ತನ್ನ ಪ್ರಸನ್ನ ಸ್ವರೂಪವನ್ನು ತೋರಿಸಿ ಆಕೆಯೊಂದಿಗೆ ನರ್ತನಮಾಡುತ್ತಲೂ, ಸಂಕೀರ್ತನ ಮಾಡತಕ್ಕ ದಿವ್ಯಪದಗಳನ್ನು ಹೇಳಿಕೊಡುತ್ತಲೂ, ಅಧ್ಯಾತ್ಮನಿಧಿಯಲ್ಲಾಕೆಯನ್ನು ಮುಳುಗಿಸಿ ಅಮೃತಪಾನ ಮಾಡಿಸುತ್ತಿದ್ದನು. ಆ ಮಂದಿರದಲ್ಲಿ ಜೀವಾತ್ಮನಾದ ಮೀರಾಬಾಯಿ ಮತ್ತು ಪರಮಾತ್ಮನಾದ ಶ್ರೀಕೃಷ್ಣನ ಹೊರ್ತು ಮತ್ತಾರೂ ಇರುತ್ತಿರಲಿಲ್ಲ. ಮೀರಾಬಾಯಿ ನರ್ತನಮಾಡುತ್ತಿರುವಾಗ ಮುರಲೀಧರನು ಮುರಲಿಯನ್ನು ಬಾರಿಸುತ್ತಿದ್ದನು. ಕೃಷ್ಣನು ಹಾಡುತ್ತಿದ್ದಾಗ ಮೀರಾಬಾಯಿಯು ಮುರಲಿಯನ್ನು ಬಾರಿಸುತ್ತಿದ್ದಳು. ಇಂತು ಸಂಗೀತವು ಮುಗಿದು ಗಿರಿಧರನು ಅದೃಶ್ಯನಾದ ಬಳಿಕ ಮೀರಾಬಾಯಿಯು ಮನೆಗೆಲಸಗಳಿಗೆ ತೆರಳುವಳು.

ಈ ವೃತ್ತಾಂತವು ಭೋಜರಾಜನ ತಾಯಿಗೆ ತಿಳಿಯಿತು. ಆಕೆ ಸೊಸೆಯನ್ನು ಕಂಡು— ಮೀರಾ! ಸಂಸಾರಿ ಸ್ತ್ರೀಯರು ಈ ರೀತಿ ಮಿತಿಮೀರಿದ ಭಕ್ತಿಮಾರ್ಗವನ್ನನುಸರಿಸಬಾರದು. ನೀನಿನ್ನು ಇಂಥ ಕೀರ್ತನೆಗಳನ್ನು ಸಾಕುಮಾಡಿ ಗೃಹಿಣಿಧರ್ಮವನ್ನನುಸರಿಸು ಎಂದು ಬುದ್ಧಿ ಹೇಳಿದಳು. ಆದರೆ ಮೀರಾ— ಅಮ್ಮಾ! ನಾನೇನು ಮಾಡಲಿ? ನನ್ನ ಮನವು ಚಿಕ್ಕಂದಿನಿಂದಲೂ ಶ್ರೀಕೃಷ್ಣ ಪೂಜೆಯಲ್ಲಿ ಮಗ್ನವಾಗಿದೆಯಾದ್ದರಿಂದ ಆತನನ್ನು ಬಿಟ್ಟು ಒಂದರಗಳಿಗೆಯಾದರೂ ಜೀವಿಸಲಾರೆ. ಎಂದು ಧೈರ್ಯವಾಗಿ

ಉತ್ತರ ಕೊಟ್ಟಳು. ಆಗ ಅದಕ್ಕಾಕೆಯು ತನ್ನಲ್ಲಿ ತಾನು ವಿಚಾರಿಸಿ ಸೊಸೆಯ ದೃಢ ಪ್ರತಿಜ್ಞೆಯನ್ನು ಕಂಡು, ವಾಡಿಕೆಯಂತೆ ಆಗಾಗ್ಗೆ ಎಚ್ಚರಿಕೆಯನ್ನು ಕೊಡುತ್ತಲೇ ಇದ್ದಳು. ಭೋಜರಾಜನ ಒಡಹುಟ್ಟಿದವಳೊಬ್ಬಳು ಯಾವಾಗಲೂ ತವರುಮನೆಯಲ್ಲಿಯೇ ಇರುತ್ತಿದ್ದಳು. ಆಕೆಯು ಅನ್ಯರಲ್ಲಿಯ ಯಾವುದಾದರೊಂದು ದೋಷವನ್ನು ಕಂಡುಹಿಡಿದು ಅವರನ್ನು ಹಿಂಸೆಗೆ ಗುರಿಪಡಿಸಬೇಕೆಂಬ ಮನೋಭಾವವುಳ್ಳವಳು. ಮೇಲಾಗಿ ಮೀರಾಬಾಯಿಯಮೇಲೆ ಸ್ವಭಾವಸಿದ್ಧ ಅಸೂಯೆ ಪಡುತ್ತಿದ್ದಳು. ಮೀರಾಬಾಯಿಯು ಮಾಡತಕ್ಕ ಶ್ರೀಕೃಷ್ಣ ಪೂಜಾದಿಗಳನ್ನು ದೋಷವೆಂದು ಪರಿಗಣಿಸಿದಳು. ಒಂದುದಿನ ಆಕೆಯು ಮೀರಾಬಾಯಿಯನ್ನು ಕಂಡು- ಏನಮ್ಮಾ ಈ ನಿನ್ನ ನಡುವಳಿಕೆಯನ್ನು ಇನ್ನುಮೇಲೆ ನಿಲ್ಲಿಸು; ಇಲ್ಲವಾದರೆ ಈ ನಿನ್ನ ನಡತೆಗೆ ತಕ್ಕ ಶಿಕ್ಷೆಯನ್ನನುಭವಿಸಬೇಕಾದೀತು ಎಚ್ಚರದಿಂದಿರು ಎಂದು ಗರ್ಜಿಸಿದಳು.

ಸರ್ವಾತ್ಮನಾದ ಶ್ರೀಕೃಷ್ಣನಲ್ಲಿ ಮೀರಾಬಾಯಿಯು ಅಚಲವಾದ ವಿಶ್ವಾಸವನ್ನಿಟ್ಟಿದ್ದರಿಂದ ಆಕೆಯ ಮಾತಿಗೆ ಸ್ವಲ್ಪವೂ ಅಂಜದಿರುವದರಿಂದ ಮತ್ತಷ್ಟು ಕೋಪಗೊಂಡು ಅವಳು ತನ್ನ ಅಣ್ಣನಾದ ಭೋಜನನ್ನು ಕಂಡು ಏನಣ್ಣ ನಿನ್ನ ಸತಿಯ ನಡೆನುಡಿಗಳು ಸ್ವಲ್ಪವೂ ಹಿತಕರವಾಗಿಲ್ಲ. ಅರಮನೆಯ ರಾಣಿಗೆ ಅಂಥ ಸ್ವಭಾವವಿರುವದು ಅಪಯಶಸ್ಸಿಗೆ ಮೂಲ ಕಾರಣ. ಯಾವಾಗಲೂ ಕೃಷ್ಣ ಮಂದಿರದಲ್ಲಿ ಪರಪುರುಷರೊಡನೆ ಸರಸವಾಡುತ್ತಿರುವಳು. ಬೇಕಾದರೆ ನೀನೇ ಹೋಗಿ ಪರೀಕ್ಷಿಸಿ ತಿಳಿದುಕೊಳ್ಳಬಹುದು ಎಂದು ಹೇಳಿದಳು. ಈ ನುಡಿಗಳನ್ನು ಕೇಳುತ್ತಲೇ ಶಾಂತ ಮೂರ್ತಿಯಾದ ಭೋಜರಾಜನಿಗೆ ಸಹ ಮೇರೆ ಮೀರಿದ ಕೋಪವುಂಟಾಯಿತು. ಕೈಯಲ್ಲಿ ಖಡ್ಗವನ್ನು ಹಿಡಿದು- ಆ ನೀಚಳನ್ನೀಗಲೇ ತುಂಡರಿಸುವೆನೆಂದು ಗರ್ಜಿಸುತ್ತ ಕೃಷ್ಣ ಮಂದಿರವನ್ನು ಪ್ರವೇಶಿಸಿದನು. ಧ್ಯಾನ ಪರವಶಳಾದ ಮೀರಾಬಾಯಿಯ ಕೈ ಹಿಡಿದು ಎಳೆದು- ಎಲೈ ನೀಚಳೆ, ನೀನೀಗ ಯಾರೊಂದಿಗೆ ಸರಸವಾಡುತ್ತಿದ್ದೆ ಹೇಳು ಎಂದು ಕೇಳಿದನು. ಆಗಾಕೆಯು ಇಲ್ಲಾರಿರುವರು ನೀವೇ ನೋಡಿರಿ, ಈ ಶ್ರೀಕೃಷ್ಣನ ಹೊರತು ಅನ್ಯರಾರಿರುವರು ಎಂದಳು. ಆಗ ಭೋಜನು- ಅದಿರಲಿ, ಆ ಹಾಳು ಗೊಲ್ಲನಲ್ಲೇ ಇರಲಿ. ನೀನಾರೊಂದಿಗೆ ಸರಸವಾಡಿದಿ ಹೇಳು.

ಆತನನ್ನು ಈಗಲೇ ಈ ಖಡ್ಗದಿಂದ ತುಂಡರಿಸಿಬಿಡುವೆನು. ಎಂದು ನುಡಿದನು. ಮೀರಾಬಾಯಿಯು- ನನ್ನೊಂದಿಗೆ ಸರಸವಾಡತಕ್ಕವನು ಇವನೇ ಎಂದು ಕೃಷ್ಣ ವಿಗ್ರಹವನ್ನು ತೋರಿಸಿ ಶ್ರೀಕೃಷ್ಣಾ, ಮಧುಭೂಷಣಾ.... ಎಂದು ಸ್ಮರಿಸುತ್ತ ಮೂರ್ಛಿತಳಾಗಿ ನೆಲಕ್ಕುರುಳಿದಳು, ಆಗ ಆಕೆಯ ಶಿರಸ್ಸಿನಸುತ್ತಲೂ ದಿವ್ಯಮಾನವಾದ ಪ್ರಕಾಶಒಂದು ಪಸರಿಸಿಕೊಂಡಿತು. ಅದನ್ನು ಕಾಣುತ್ತಲೇ ಭೋಜನು ವಿಸ್ಮಿತನಾಗಿ ಏನು ಮಾಡುವದಕ್ಕೂ ಬುದ್ಧಿಗೆಹೊಳೆಯದಿರಲು ಅಲ್ಲಿಂದ ಹೊರಟು ಅರಮನೆಯನ್ನು ಸೇರಿದನು. ತನ್ನಲ್ಲಿ ತಾನೇ ವಿಚಾರಿಸಿ ಆಕೆಗೆ ಅದೊಂದು ಹುಚ್ಚುಹಿಡಿದಿದೆಯೆಂದು ನಿಶ್ಚಯಿಸಿದನು. ಅಂದಿನಿಂದಾತನು ಕೃಷ್ಣಸೇವೆಗೆ ಯಾವ ಆತಂಕವನ್ನೂ ಮಾಡಲಿಲ್ಲ.

ಶ್ರೀಕೃಷ್ಣನು ಮೀರಾಬಾಯಿಯ ಭಕ್ತಿಗೆ ಮೆಚ್ಚಿ, ಆಕೆ ಸಂಕೀರ್ತನೆ ಮಾಡತೊಡಗಿದರೆ, ಶ್ರೀಕೃಷ್ಣನು ನರ್ತನ ಮಾಡುತ್ತಿರುವನೆಂಬ ವಾರ್ತೆಯು ಎಲ್ಲೆಡೆಯಲ್ಲಿಯೂ ಹಬ್ಬಿ, ಅವನ ಸಂದರ್ಶನಕ್ಕಾಗಿ ಅನೇಕ ಸಾಧುಸಂತರು ಬರತೊಡಗಿದರು. ಯಾರುಬಂದರೂ ಮೀರಾಬಾಯಿಯು ಎಲ್ಲರನ್ನೂ ಬಂಧುಗಳಂತೆಯೇ ಕಾಣುತ್ತಿದ್ದಳಲ್ಲದೇ ಶ್ರೀಕೃಷ್ಣನಲ್ಲಿಟ್ಟ ಭಕ್ತಿಭಾವವು ಎಳ್ಳಷ್ಟೂ ಚಂಚಲವಾಗುತ್ತಿರಲಿಲ್ಲ. ಸಂದರ್ಶನಕ್ಕೆ ಬಂದವರು ಆಕೆಯು ಮಧುರ ಕಂಠದಿಂದ ಮಾಡಿದ ಸಂಕೀರ್ತನೆ, ಭಜನೆಗಳಿಂದ ಆನಂದಿತರಾಗಿ ಆಕೆಯ ಭಕ್ತಿಭಾವವನ್ನು ಕೊಂಡಾಡುತ್ತ ತೆರಳುತ್ತಿದರು.

ಇಂತು ಮೀರಾಬಾಯಿಯ ಕೀರ್ತಿಯು ದೇಶ ದೇಶಕ್ಕೂ ವ್ಯಾಪಿಸುತ್ತ ನಡೆದು ದಿಲ್ಲಿ ಬಾದಶಹನಾದ ಅಕಬರನಿಗೂ ಮುಟ್ಟಿತು. ಆತನು ಮೀರಾಬಾಯಿಯ ವಿಚಾರವನ್ನು ತಿಳಿದು ಆಶ್ಚರ್ಯಮಗ್ನಮನಸ್ಸುಳ್ಳವನಾಗಿ ಸ್ವಯಂ ಹೋಗಿ ಆಕೆಯಿಂದ ನಡೆಯತಕ್ಕ ಸಂಕೀರ್ತನಾದಿಗಳನ್ನು ಪ್ರತ್ಯಕ್ಷ ಕಂಡು ಕೇಳಿ ದೃಢಪಡಿಸಿಕೊಳ್ಳಬೇಕೆಂದು ನಿಶ್ಚಯಿಸಿದನು. ಆದರೆ ಇದೇ ರೀತಿಯಿಂದ ರಾಜಪುತ್ರನ ಅಂತಃಪುರವನ್ನು ಪ್ರವೇಶಿಸಿದರೆ ಜೀವದಿಂದ ಹಿಂತಿರುಗುವದು ಕಠಿಣವೆಂದರಿತು ಸಂಗೀತ ವಿದ್ವಾಂಸನಾದ ತಾನಸೇನನ್ನು ಸಂಗಡ ಕರೆದುಕೊಂಡು ಸಾಧುಗಳ ವೇಷ ಧರಿಸಿ ಚಿತ್ತೂರಿಗೆ ಬಂದನು. ಸಾಧುಸಂತರೊಂದಿಗೆ ಮೀರಾಬಾಯಿಯ ಕೃಷ್ಣಮಂದಿರವನ್ನು ಪ್ರವೇಶಿಸಿದನು. ಆಗ ಮೀರಾಬಾಯಿಯು ಶ್ರೀಕೃಷ್ಣನ ಸಂಕೀರ್ತನೆ

ಮಾಡುತ್ತಿದ್ದಳು. ಮಧುರ ಕಂಠದಿಂದ ಹೊರಸೂಸುವ ಸಂಕೀರ್ತನೆಯ ಮಾಧುರ್ಯವನ್ನು ಕೇಳಿ ಆನಂದಿತರಾದರು. ತಾನು ದಿಲ್ಲಿಯಲ್ಲಿ ಕುಳಿತು ಕೇಳಿದ್ದಕ್ಕಿಂತಲೂ ಹೆಚ್ಚಾಗಿ ಭಕ್ತಿಭಾವ ಮೀರಾಬಾಯಿಯನ್ನು ಕಂಡು ಸಂತುಷ್ಟರಾದರು. ಆದರೆ ಆಕೆಯೊಂದಿಗೆ ಒಂದೆರಡು ಮಾತುಗಳನ್ನಾಡಿ ಹಿಂತಿರುಗಬೇಕೆಂದು ಇಚ್ಛಿಸಿದರು. ಮೀರಾಬಾಯಿಯ ಸಂಕೀರ್ತನೆ ಮುಗಿಯಿತು. ಎಲ್ಲರೂ ಆಕೆಗೆ ನಮಸ್ಕಾರ ಮಾಡಿ ಅಲ್ಲಿಂದ ತೆರಳಿದರು. ಆದರೆ ಸಾಧು ವೇಷದಲ್ಲಿದ್ದ ಅಕಬರನು ಮುಂದುವರಿದು ಆಕೆಗೆ ಕೈ ಮುಗಿದು– ದೇವಿ, ಈ ಹಾರವನ್ನು ಕಾಣಿಕೆಯಾಗಿ ಸ್ವೀಕರಿಸಬೇಕೆಂದು ಬಿನ್ನವಿಸಿ ರತ್ನ ಹಾರವನ್ನು ಕೊಡಹೋದನು. ಆಗಾಕೆಯು ಗಿರಿಧರನ ಸೇವಕರಿಗೆ ಹಾರಾದಿ ಕಾಣಿಕೆಗಳ ಮೇಲೆ ಅಪೇಕ್ಷೆಯಿರಲಾರದೆಂದು ಹೇಳಿ ನಿರಾಕರಿಸಿದಳು. ಆಗ ಅಕಬರನು– ಹಾಗಲ್ಲ ತಾಯೀ ಇದನ್ನು ಶ್ರೀ ಕೃಷ್ಣನಿಗೆ ಸಮರ್ಪಿಸಬೇಕೆಂದೇ ನನ್ನ ಕೋರಿಕೆ, ಎಂದನು, ಆಗಾಕೆ ಸುಮ್ಮನಾದಳು. ಆಕೆಯ ಸೇವಿಕಿಯೊಬ್ಬಳು ಆ ಹಾರವನ್ನು ತೆಗೆದು ಕೊಂಡು ಶ್ರೀ ಕೃಷ್ಣಮೂರ್ತಿಯ ಸನ್ನಿಧಿಯಲ್ಲಿಟ್ಟಳು. ಮೀರಾಬಾಯಿ ಅಂತಃಪುರಕ್ಕೆ ತೆರಳಿದಳು. ಬಾದಶಹ ಮುಂತಾದವರು ತಮ್ಮ ಸ್ಥಳಗಳಿಗೆ ಹೊರಟು ಹೋದರು.

ಬೆಳಗಾಗುವದರೊಳಗೆ ನಗರವೆಲ್ಲವೂ ಕೌತುಕದ ಸುದ್ದಿಯಿಂದ ಕಂಗೆಟ್ಟಿತ್ತು. ಕಳೆದ ರಾತ್ರಿ ದಿಲ್ಲೀ ಬಾದಶಹನಾದ ಅಕಬರನು ವೇಷಧಾರಿ ಯಾಗಿ ಬಂದು, ಅಂತಃಪುರದಲ್ಲಿಯ ಕೃಷ್ಣಮಂದಿರವನ್ನು ಪ್ರವೇಶಿಸಿ ಮೀರಾಬಾಯಿಗೆ ನಮಸ್ಕರಿಸಿ ಮುತ್ತಿನ ಹಾರವನ್ನು ಕೊಟ್ಟು ಹೋದ ನೆಂಬ ವಾರ್ತೆಹರಡಿ ಮುಂದೇನಾಗುವದೋ ಎಂದು ಎಲ್ಲರೂ ಭಯಗ್ರಸ್ಥ ರಾಗಿದ್ದರು. ಈ ಸುದ್ದಿಯು ಭೋಜರಾಜನಿಗೂ ಮುಟ್ಟಿತು. ಅವನು ಕಡು ಕೋಪದಿಂದ ಭರ ಭರನೆ ಮೀರಾಬಾಯಿಯಲ್ಲಿಗೆ ಬಂದು– ನಿನ್ನಿಂದ ರಾಜ ಮನೆತನದ ಮಾನ ಮಾರಿ ಹೋಯಿತು. ಇದಕ್ಕೆ ಈ ರತ್ನಹಾರವೇ ಸಾಕ್ಷಿ ಯಾಗಿದೆ. ಆ ರತ್ನ ಹಾರವನ್ನು ಕೈಯಿಂದಾಕೆಗೆ ತೋರಿಸಿ–ನೀನಿನ್ನು ಜೀವ ದಿಂದಿರುವದು ಯಾರಿಗೂ ಹಿತಕರವಾಗಿಲ್ಲ. ಆದ್ದರಿಂದ ಈಗಲೇ ಹೊರಟು ಹೋಗಿ ನದಿಯಲ್ಲಿ ಬಿದ್ದು ಪ್ರಾಣ ಕಳೆದುಕೋ ಎಂದು ಆಜ್ಞೆಮಾಡಿ ಹೊರಟು ಹೋದನು.

ಮೀರಾಬಾಯಿಯು ಪತಿಯ ಆಜ್ಞೆಗನುಸಾರವಾಗಿ, ಪ್ರಾಣ ತ್ಯಾಗ ಕ್ಕಾಗಿ ಸಜ್ಜಾದಳು. ಅಲ್ಲಿ ತನ್ನೊಂದಿಗೆ ಸದಾ ಸಂಕೀರ್ತನೆಯಲ್ಲಿ ನೆರವಾಗು ತ್ತಿದ್ದ ಸಖಿಯರಿಗೊಂದು ಸಾರಿ ನಮಸ್ಕರಿಸಿದಳು. ಹೇ ಗಿರಿಧರಗೋಪಾಲ ಈವರೆಗೂ ನಿನ್ನ ಬಹಿರಂಗ ರೂಪ ವಿಲಾಸಗಳನ್ನು ಪೂಜಿಸುತ್ತಿದ್ದೆನು. ಆದರೆ ಇನ್ನು ನಿನ್ನಂತರಂಗದ ಸದ್ಗುಣಗಳನ್ನು ಭಜಿಸುವೆನು, ಅದಕ್ಕಾಗಿ ನಿನ್ನಲ್ಲಿ ಸ್ಥಳಕೊಟ್ಟು ಅನುಗ್ರಹಿಸು. ಎಂದು ಅನನ್ಯ ಭಕ್ತಿಯಿಂದ ಆತನ ಚರಣಕಮಲಗಳಿಗೆ ವಂದಿಸಿ ಅಲ್ಲಿಂದ ತೆರಳಿದಳು. ಯಮುನಾ ತೀರದ ಎತ್ತರವಾದ ಗುಡ್ಡವನ್ನೇರಿ ನಿಂತಳು. ಹೇ ಯಮುನಾದೇವಿಯೇ ! ಚಿತ್ತೂರ ಪ್ರಭುವಿಗೆ ಬೇಡವಾದ ಈ ಜನ್ಮವನ್ನು ನಿನ್ನಲ್ಲಿ ಸಮರ್ಪಿಸುವೆನು. ಸ್ವೀಕ ರಿಸು. ಎಂದೆನ್ನುತ್ತ ಅಲ್ಲಿಂದ ನದಿಗೆ ಧುಮುಕಿದಳು. ಆಗ ತಲೆ ಕೆಳಗಾಗಿ ನದಿಗೆ ಬೀಳುತ್ತಿದ್ದ ಮೀರಾಬಾಯಿಯನ್ನು ಭಕ್ತವತ್ಸಲ ಗೋಪಾಲನು ತನ್ನ ಎರಡೂ ಕೈಗಳನ್ನೊಡ್ಡಿ ಹಿಡಿದುಕೊಂಡು ನದಿಯ ಆಚೆಯ ದಡದ ಮೇಲೆ ಕುಳ್ಳಿರಿಸಿ ಭಕ್ತಶಿರೋಮಣಿಯೇ ! ನೀನು ಭಯಪಡಬೇಡ. ನಿನ್ನ ಕೀರ್ತಿಯು ಆಚಂದ್ರಾರ್ಕವಾಗಿ ನೆಲೆಗೊಳ್ಳುವದು. ಎಂದು ಹೇಳಿ ಮಾಯವಾದನು. ಮನೋವ್ಯಾಕುಲತೆಯಿಂದ ಆಯಾಸಗೊಂಡಿದ್ದ ಮೀರಾಬಾಯಿಯು ಕೆಲ ವೇಳೆಯ ನಂತರ ಚೇತರಿಸಿಕೊಂಡು ಎದ್ದು ತನ್ನನ್ನು ಮೃತ್ಯು ಮುಖದಿಂದ ಉಳಿಸಿದ ಆ ಕೃಷ್ಣಪರಮಾತ್ಮನನ್ನು ಅನನ್ಯ ಭಕ್ತಿಯಿಂದ ಭಜಿಸಲಾರಂಭಿಸಿದಳು.

ಮೀರಾಬಾಯಿಯು ಗಿರಿಧರಗೋಪಾಲನ ದಿವ್ಯ ನಾಮ ಸಂಕೀರ್ತನೆ ಮಾಡುತ್ತ, ಅಲ್ಲಿಂದ ತೆರಳಿ, ಯಮುನಾತೀರದ ಕಗ್ಗಾಡಿನಲ್ಲಿ ಒಬ್ಬಂಟಿಗ ಳಾಗಿ ನಡೆಯುತ್ತಿದ್ದಳು. ಸಾಯಂಕಾಲ ಸಮೀಪಿಸಿತು. ಆ ವೇಳೆ ದಿನಾಲೂ ಶ್ರೀಕೃಷ್ಣ ಪೂಜಾ ಸಮಯವು. ಆಲ್ಲೊಂದುಕಡೆಗೆ ಕುಳಿತು ಧ್ಯಾನಯೋಗವ ನ್ನವಲಂಬಿಸಬೇಕೆಂದು ಆಲೋಚಿಸಿದಳು. ಆದರೆ ಎಂದಿನಂತೆ ಶ್ರೀಕೃಷ್ಣನ ಸನ್ನಿಧಿಯಲ್ಲಿಯೇ ಕುಳಿತು ಧ್ಯಾನ ಮಾಡಬೇಕೆಂದು ಆಕೆಯ ಹೃದಯ ದಲ್ಲಿ ಹೊಳೆಯಿತು. ಕೂಡಲೇ ಗಿರಿಧರಾ, ಗಿರಿಧರಾ, ಗಿರಿಧರಾ ! ಎಂದು ಗಟ್ಟಿಯಾಗಿ ಕೂಗಿದಳು. ಉಸರ್ಗರೆದು ಈ ಮಹಾರಣ್ಯದಲ್ಲಿ ನನ್ನ ಪ್ರಾರ್ಥನೆಯನ್ನು ಕೇಳುವವರಾರೆಂದು ಆಲೋಚಿಸಿ ಕ್ಷಣಕಾಲ ಮೌನವನ್ನು

ತಾಳಿದಳು. ಪುನಃ ಗಿರಿಧರಾ! ನನ್ನನ್ನು ಮರತೆಯಾ ಎಂದು ಪ್ರೇಮದಿಂದ ಕೂಗಿದಳು. ಆಗಲೇ ಮುರಲೀಧರನು ಕೊಳಲನ್ನೂದುತ್ತ ಪ್ರಸನ್ನನಾದನು. ಆಗ ಮೀರಾಬಾಯಿಗಾದ ಆನಂದವು ಅಷ್ಟಿಷ್ಟಲ್ಲ; ಮೀರಾಬಾಯಿಯು ಆತನ ಸನ್ನಿಧಿಯಲ್ಲಿ ಕುಳಿತು ಹಾಡತೊಡಗಿದಳು. ಮುರಲೀಧರನು ಮುರಲಿಯನ್ನು ನುಡಿಸಿದನು, ಆತ ಹಾಡಿದನು, ಮೀರಾಬಾಯಿ ಕೊಳಲನ್ನೂದಿದಳು, ಇಂತು ಸಂಕೀರ್ತನೆಯ ಆನಂದಸಾಗರದಲ್ಲಿ ಲೋಲಾಡಿದರು. ಶ್ರೀಕೃಷ್ಣನು ಇದ್ದಕ್ಕಿದ್ದಂತೆ ಹಾಗೆ ಮರೆಯಾದನು. ಪ್ರಭು ಗಿರಿಧರಾ, ಎಂದು ಮೀರಾಬಾಯಿಯು ಕೂಗಿದಳು. ಆಗ ಮೀರಾ! ನೀನಿನ್ನು ಗೋಕುಲ ಬೃಂದಾವನಕ್ಕೆ ತೆರಳು, ಅಲ್ಲಿ ನಿನಗೆ ನಿನ್ನಿಷ್ಟಾನುಸಾರ ಪ್ರಸನ್ನನಾಗುವೆನು ಎಂಬ ವಾಣಿಯೊಂದು ಕೇಳಬಂದಿತು; ಕೂಡಲೇ ಬೃಂದಾವನದತ್ತ ತೆರಳಿದಳು.

ಬೇಸಿಗೆಯ ಬಿಸಿಲಿನ ತಾಪವನ್ನು ಲೆಕ್ಕಿಸದೆ, ಸ್ವಲ್ಪವೂ ಆಯಾಸಗೊಳ್ಳದೆ ಗಿರಿಧರ ಗೋಪಾಲನ ನಾಮಸ್ಮರಣೆಯನ್ನು ಮಾಡುತ್ತಾ ದಾರಿ ನಡೆಯುತ್ತಿದ್ದಳು. ದಾರಿಯುದ್ದಕ್ಕೂ ಜನರು ಹಾಲು ಹಣ್ಣುಗಳನ್ನು ಕೊಟ್ಟು ಪರಿಚಿತರನ್ನು ಉಪಚರಿಸಿದಂತೆ ಸತ್ಕರಿಸುತ್ತಿದ್ದರು. ಅನೇಕರು ಆಕೆಯನ್ನು ಕುರಿತು ಅಮ್ಮಾ, ತಾವು ಬಹುದೂರದಿಂದ ನಡೆದು ಬಂದಿದ್ದೀರಿ; ಆದ ಕಾರಣ ಇನ್ನು ಮುಂದಿನ ಪ್ರಯಾಣವನ್ನು ಬಂದುಮಾಡಿ ಇಲ್ಲಿಯೇ ಇದ್ದು ಶ್ರೀಕೃಷ್ಣನ ಸಂಕೀರ್ತನೆ ನಡೆಸಬೇಕೆಂದು ಪ್ರಾರ್ಥಿಸಿದರು. ಆದರೆ ಆಕೆಯು ಅವರೆಲ್ಲರನ್ನೂ ಸಮಾಧಾನಪಡಿಸಿ ತಾನು ಬೃಂದಾವನವನ್ನು ತಲುಪದ ವಿನಃ ಮನಸ್ಸಿಗೆ ಸಮಾಧಾನವಾಗಲಾರದೆಂದು ಹೇಳಿ ಅನೇಕ ದೇಶಗಳನ್ನೂ ಹಳ್ಳ-ಹೊಳೆಗಳನ್ನೂ, ಗುಡ್ಡಗಿರಿಗಳನ್ನೂ ದಾಟಿ ಗೋಕುಲ ಬೃಂದಾವನವನ್ನು ಸೇರಿದಳು.

ಗೋಕುಲ ಬೃಂದಾವನದಲ್ಲಿ ಜೀವಗೋಸ್ವಾಮಿಯೆಂಬ ಸನ್ಯಾಸಿಯು ಕೆಲಶಿಷ್ಯರೊಂದಿಗೆ ವಾಸವಾಗಿದ್ದುಕೊಂಡಿದ್ದನು. ಆತನನ್ನು ಸಂದರ್ಶಿಸಬೇಕೆಂಬ ಇಚ್ಛೆಯನ್ನು ಹೇಳಿಕಳಿಸಲು ಆತನು ಸ್ತ್ರೀಯರನ್ನು ನೋಡುವದಿಲ್ಲವೆಂಬ ತನ್ನ ವ್ರತವನ್ನು ಹೇಳಿಕಳಿಸಿದನು. ಆಗ ಮೀರಾಬಾಯಿಯು ಮಾನವರೆಲ್ಲರೂ ನಿಮಿತ್ತ ಮಾತ್ರ ಸ್ತ್ರೀ-ಪುರುಷರೆಂತಲೂ

ಆ ಭಗವಂತನೊಬ್ಬನೇ ಏಕೈಕ ಪುರುಷನೆಂತಲೂ ಜ್ಞಾನಿಗಳ ಸಂದೇಶ ಇರುವಾಗ ನೀನೊಬ್ಬನು ಈ ರೀತಿ ಅಭಿಪ್ರಾಯಪಡುವದು ಅನುಚಿತವೆಂಬ ತನ್ನ ಸಂದೇಶವನ್ನು ಹೇಳಿಕಳಿಸಿದಳು. ಮೀರಾಬಾಯಿಯ ಸಂದೇಶವನ್ನು ಕೇಳುತ್ತಲೇ ಗೋಸ್ವಾಮಿಗೆ ಜ್ಞಾನೋದಯವುಂಟಾಯಿತು. ತನ್ನ ವ್ರತವನ್ನು ಬದಿಗಿಟ್ಟು ಮೀರಾಬಾಯಿಗೆ ದರ್ಶನವನ್ನಿತ್ತು ತನ್ನ ಅವಿಚಾರಕ್ಕೆ ತನ್ನನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿಕೊಂಡನು.

ಇಂತು ಮೀರಾಬಾಯಿಯು ಬೃಂದಾವನದಲ್ಲಿಯೇ ವಾಸಮಾಡತೊಡಗಿದಳು. ಭಕ್ತರು ತಂದುಕೊಡತಕ್ಕ ಆಹಾರವನ್ನೇ ಶ್ರೀ ಕೃಷ್ಣನಿಗೆ ನಿವೇದಿಸಿ ಅದನ್ನೇ ಭುಂಜಿಸಿ ಅಷ್ಟರಿಂದಲೇ ತೃಪ್ತಳಾಗಿರತೊಡಗಿದಳು.

ತುಂಬಿದ ಸಿರಿಯಿಂದ ಮೃಷ್ಟಾನ್ನವನ್ನುಂಡ ಮೀರಾಬಾಯಿಯು ಕೃಷ್ಣನ ಸಂಗ ಬೆಳಿಸಿ ಸಂಗಟಿಯನ್ನುಣ್ಣತೊಡಗಿದಳು.

ಇಂತು ಕಾಲ ಕಳೆಯುತ್ತಿರುವಾಗ ಒಂದು ದಿನ ಶ್ರೀಕೃಷ್ಣನನ್ನು ಹುಡುಕುತ್ತ ಗಿಡಮರಗಳ ಮಧ್ಯೆ ತಿರುಗುತ್ತಿರುವಾಗ ಒಂದೆಡೆಯಿಂದ ಮುರಲಿಯ ನಾದವು ಕೇಳತೊಡಗಿತು. ಆ ಸ್ವರದಗುಂಟೆ ಮೀರಾಬಾಯಿಯು ಹೋಗಲು ಅಲ್ಲೊಂದು ಗಿಡದ ಮೇಲೆ ಗಿರಿಧರ ಗೋಪಾಲನು ಕುಳಿತು ಕೊಳಲನ್ನೂದುತ್ತಿದ್ದನು. ಆತನನ್ನು ಕಂಡು ಮೀರಾಬಾಯಿಯು ಆನಂದ ಭರಿತಳಾಗಿ ನರ್ತನವಾರಂಭಿಸಿದಳು. ನರ್ತನವನ್ನನುಸರಿಸಿ ಮುರಲಿಯನ್ನೂದಿದನು. ಇಂತು ಸಂಗೀತಾನಂದದಲ್ಲಿ ಮೈಮರೆತ ಮೀರಾಬಾಯಿಯು ಮುಖವನ್ನೆತ್ತಿ ನೋಡಿದಳು. ಅಲ್ಲಿ ಮುರಲೀಧರನು ಕಾಣಲಿಲ್ಲ. ಆಗ ಮೀರಾಬಾಯಿಯು ಗಟ್ಟಿಯಾಗಿ ಅತ್ತಳು. ಶ್ರೀಕೃಷ್ಣನು ಪ್ರಸನ್ನನಾಗಿ ಸಂತೈಸಿದನು.

ಇಂತು ಮೀರಾಬಾಯಿಯು ಕಾಲಕಳೆಯುತ್ತಿರುವಾಗ ಆಕೆಯನ್ನು ಗುರುವಿನಂಗೆ ಕಂಡು ಆಕೆ ಮಾಡುತ್ತಿದ್ದ ಸಂಕೀರ್ತನೆಯನ್ನೂ ಆಕೆ ಸ್ವತಃ ರಚಿಸಿದ ಕೀರ್ತನೆಗಳನ್ನೂ ಕೇಳಿ ಆನಂದದಿಂದ ಭಕ್ತಿಪರವಶರಾಗುತ್ತಿದ್ದರು. ಇಂತು ಮೀರಾಬಾಯಿ ರಚಿಸಿದ ಕೀರ್ತನೆಗಳೂ, ಆಕೆಯ ವೈರಾಗ್ಯ ಪೂರ್ಣ ಭಕ್ತಿರಸವೂ ಜಗದ್ವಿಖ್ಯಾತವಾದವು- ಈ ವಾರ್ತೆಯು ಭೋಜ ರಾಜನಿಗೂ ಮುಟ್ಟಿತು. ಆತನು ಸಾಧುವೇಷ ಧರಿಸಿ ಬೃಂದಾವನಕ್ಕೆ ಬಂದು ಮೀರಾಬಾಯಿಯನ್ನು ಕಂಡು ಭಿಕ್ಷೆ ಬೇಡಿದನು. ಆಕೆಯು ನಾನೇ

ಭಿಕ್ಷುಕಳಾಗಿರುವಾಗ ನಿನಗೇನು ಭಿಕ್ಷೆ ಕೊಡಲಿ ಎಂದು ಉತ್ತರಿಸಿದಳು. ಆಗ ಆತನು ನೀನು ಏನುಬೇಕಾದರೂ ಕೊಡಬಲ್ಲೆ ಎಂದು ನುಡಿಯಲು, ಹಾಗಾದರೆ ಕೇಳೆಂದಳು. ಆಗ ಭೋಜನು ತನ್ನ ಸಾಧು ವೇಷವನ್ನು ತೆಗೆದೊಗೆಯಲು ಆತನು ತನ್ನ ಪತಿಯೆಂದು ಗುರ್ತಿಸಿ ಮೀರಾಬಾಯಿಯು ಆತನಿಗೆ ನಮಸ್ಕರಿಸಿದಳು. ಆಗ ಅವರಿಬ್ಬರೂ ಅಲ್ಲಿಂದ ತೆರಳಿ ಚಿತ್ತೂರಿಗೆ ಬಂದರು. ಭೋಜರಾಜನು ಅಂತಃಪುರದಲ್ಲಿಯ ಶ್ರೀಕೃಷ್ಣ ಸೇವೆಗೆ ಎಲ್ಲ ಅನುಕೂಲತೆಗಳನ್ನೂ ಒದಗಿಸಿಕೊಟ್ಟನು. ಅಂದಿನಿಂದ ಅಲ್ಲಿಯೇ ಶ್ರೀಕೃಷ್ಣ ಸೇವೆಯನ್ನು ಮೀರಾಬಾಯಿಯು ನಿರಾತಂಕವಾಗಿ ಕೈಕೊಂಡಳು.

ಇಂತು ಕೆಲದಿನ ಕಳೆಯುತ್ತಿರಲು ಕಾಲಗತಿ ಬದಲಾಯಿತು. ಭೋಜರಾಜನು ಮರಣಹೊಂದಿದನು. ರಾಜ್ಯಾಧಿಕಾರವನ್ನು ಆತನ ತಮ್ಮನಾದ ರತ್ನಸಿಂಹನು ವಹಿಸಿಕೊಂಡನು. ಆತನಿಗೆ ಮೀರಾಬಾಯಿಯು ಮಾಡತಕ್ಕ ಕರ್ತವ್ಯಗಳು ಸರಿಬೀಳಲಿಲ್ಲ. ರಾಜಮನೆತನದವಳೆಂದರೇನು, ಕೂಡಿ ಭಿಕಾರಿಗಳ ಮಧ್ಯ ನಾಚಿಕೆಯಿಲ್ಲದೆ ಹಾಡುವದೆಂದರೇನು; ಇದು ರಾಜಮನೆತನಕ್ಕೆ ಅಪಮಾನವಲ್ಲವೇ ? ಎಂದು ತೀವ್ರವಾಗಿ ಆಕ್ಷೇಪಿಸಿ ದ್ವೇಷಗೊಂಡು ಆಕೆಯನ್ನು ಕೊಲ್ಲಲು ನಿರ್ಧರಿಸಿದನು. ಒಂದು ಕ್ರೂರ ಸರ್ಪವನ್ನು ಹಿಡಿತರಿಸಿ ಒಂದು ಬುಟ್ಟಿಯಲ್ಲಿ ಹಾಕಿಸಿ ಹಣ್ಣಿನ ಬುಟ್ಟಿಯೆಂದು ಮೀರಾಬಾಯಿಗೆ ಕಳಿಸಿಕೊಟ್ಟನು. ಅದನ್ನು ಮೀರಾಬಾಯಿಯು ತೆರೆದು ನೋಡಲು ಹಾವು ಕೃಷ್ಣನ ವಿಗ್ರಹವಾಗಿದ್ದಿತು. ಈ ಸಂಗತಿಯನ್ನರಿತ ರತ್ನಸಿಂಹನು ಮೀರಾಬಾಯಿಯ ಮೈಯಲ್ಲಿ ಸ್ವಸ್ತವಿಲ್ಲದಿರಲು ಆ ವೇಳೆಯನ್ನು ಸಾಧಿಸಿ ಔಷಧವೆಂದು ಕಾಳಕೂಟವಿಷವನ್ನು ಒಂದು ಪಾತ್ರೆಯಲ್ಲಿ ತುಂಬಿ ಕಳಿಸಿಕೊಟ್ಟನು. ಮೀರಾಬಾಯಿಯು ಸ್ವಲ್ಪವೂ ಸಂಕೋಚಗೊಳ್ಳದೇ ಕೃಷ್ಣಾರ್ಪಣೆಯೆಂದು ಅದನ್ನು ಕುಡಿದುಬಿಟ್ಟಳು. ಅದರಿಂದಲೂ ಆಕೆಯ ಪ್ರಾಣಕ್ಕಪಾಯವಾಗದೆ ಆಕೆಯ ರೋಗ ವಾಸಿಯೂಯಿತು. ಆಗ ರತ್ನಸಿಂಹನಿಗೆ ಪರಮಾಶ್ಚರ್ಯವಾಯಿತು. ಆದರೂ ತನ್ನ ದ್ವೇಷ ಬುದ್ಧಿಯನ್ನು ಬಿಡಲಿಲ್ಲ. ಈ ಸಂಗತಿಯನ್ನರಿತು ಮೀರಾಬಾಯಿಯು ಅತೃಪ್ತಿಕರವಾದ ಸ್ಥಳದಲ್ಲಿದ್ದರೆ ಹರಿಸೇವೆಗೆ ಆತಂಕವಾಗುವದೆಂದು ತನ್ನಲ್ಲಿತಾನೇ ಆಲೋಚಿಸಿ ತನ್ನ ಆಪ್ತನೊಬ್ಬನ ಮೂಲಕ ಗೋಸ್ವಾಮಿ

ಗಳಿಗೆ ಸಂಗತಿಯನ್ನು ತಿಳಿಸಲಾಗಿ ಅವರು ಹರಿಸೇವೆಗೆ ಅಡಚಣೆ ಮಾಡತಕ್ಕವರು ಎಂತಹ ಆಪ್ತ ಬಂಧುಮಿತ್ರರೇ ಇರಲಿ ಅವರನ್ನು ಬಿಟ್ಟುಗಲುವದುಚಿತವೆಂದರು. ಅವರ ಅಪ್ಪಣೆ ಪಡೆದ ಮೀರಾಬಾಯಿಯು ಅಲ್ಲಿಂದ ತೆರಳಿ ಪುನಃ ಬೃಂದಾವನಕ್ಕೆ ಬಂದಳು. ಅಲ್ಲಿ ಗಿರಿಧರನ ಸೇವೆಯನ್ನು ಪೂರ್ಣ ಉತ್ಸಾಹದಿಂದ ಮಾಡುತ್ತಲೂ ಸಂಕೀರ್ತನೆಯನ್ನು ಹಾಡುತ್ತಲೂ ಗಿರಿಧರನನ್ನು ಪ್ರತ್ಯಕ್ಷ ಕಂಡು ಮಾತನಾಡಿಸುವಳು. ಮತ್ತೊಮ್ಮೆ ಅಂತರಂಗದಲ್ಲಿಯೇ ಆ ಭಕ್ತವತ್ಸಲನನ್ನು ಕಂಡು ಆನಂದಿಸುವಳು. ಇಂತು ಅನನ್ಯ ಭಕ್ತಿಯೋಗವನ್ನು ಸಾಧಿಸಿ ಕಡೆಗೊಂದು ದಿನ ಧ್ಯಾನಯೋಗವನ್ನು ಹೊಂದಿ ಸರ್ವಜ್ಞನೂ ಸರ್ವಾತ್ಮನೂ ಆದ ಶ್ರೀ ಗಿರಿಧರ ಗೋಪಾಲಮೂರ್ತಿಯಲ್ಲಿ ಚಿತ್ತವನ್ನು ಲೀನ ಮಾಡಿ ಪರಂಧಾಮನ ಸನ್ನಿಧಿಯನ್ನು ಹೊಂದಿದಳು.

---

## ೨೪. ಸ್ವಾಮಿ ಏಕನಾಥರು

ಪೈಠಣಪುರದಲ್ಲಿ ಚಕ್ರಪಾಣಿಯೆಂಬ ಭಗವದ್ಭಕ್ತನಿದ್ದನು. ಅವನಿಗೆ ಸೂರ್ಯನಾರಾಯಣನೆಂಬ ಮಗ ಹುಟ್ಟಿದನು. ಸೂರ್ಯನಾರಾಯಣನಿಗೆ ಧಾರ್ಮಿಕ ಚಿತ್ತವುಳ್ಳವಳೂ, ಶೀಲ ಸ್ವಭಾವವುಳ್ಳವಳೂ, ಆಗಿದ್ದ ಸತಿಯಿಂದ ಏಕನಾಥನೆಂಬ ಪುತ್ರನು ಜನ್ಮವೆತ್ತಿದನು. ಇವರೇ ನಮ್ಮ ಸ್ವಾಮಿ ಏಕನಾಥರು.

ಏಕನಾಥರು ಜನಿಸಿದ ಕೆಲವೇ ದಿನಗಳಲ್ಲಿ ಅವನ ತಂದೆ-ತಾಯಿಗಳು ಕಾಲಾಧೀನರಾದರು. ಅಂದಿನಿಂದ ಅವನ ಅಜ್ಜ ಅಜ್ಜಿಯರೇ ಪಾಲಿಸಿ ಪೋಷಿಸುತ್ತಿದ್ದರು. ಏಕನಾಥನು ಐದು ವರ್ಷದವನಾಗುತ್ತಲೇ ಅವನ ಉಪನಯನವನ್ನು ಮಾಡಿದರು. ಅಂದಿನಿಂದ ಮನಸ್ಸು ಶ್ರೀಕೃಷ್ಣನ ಸನ್ನಿಧಿಯಲ್ಲಿ ಸಮರಸಗೊಂಡಿತು. ಆಟಗಳಿಗಾಗಿ ಓರಿಗೆಯ ಹುಡುಗರು ಕರೆದರೆ ಹೋಗುತ್ತಿರಲಿಲ್ಲ. ಅದರ ಬದಲಾಗಿ ಸಣ್ಣ ಸಣ್ಣ ಕಲ್ಲುಗಳನ್ನಾರಿಸಿ ತಂದು ಅವುಗಳಿಗೆ ರಾಮಕೃಷ್ಣ ಮುಂತಾದ ದೇವರ ಹೆಸರುಗಳನ್ನು ಅಂಕಿತಮಾಡಿ

ಪೂಜಿಸುತ್ತಿದ್ದನು. ಈ ರೀತಿಯಾಗಿ ಸದಾಕಾಲದಲ್ಲೂ ದೇವನಾಮಗಳನ್ನು ಉಚ್ಚರಿಸುತ್ತಲಿದ್ದನು. ಯಾರಾದರೂ ತಿನಿಸನ್ನು ತಿನ್ನಲು ಕೊಟ್ಟರೆ ಅದನ್ನು ದೇವರಿಗೆ ನಿವೇದಿಸಿ ಅನಂತರ ಅಲ್ಲಿ ಯಾರಾದರೂ ಇದ್ದರೆ ಅವರಿಗೆ ಕೆಲಭಾಗ ಕೊಟ್ಟು ಉಳಿದದ್ದನ್ನು ತಾನು ತಿನ್ನುತ್ತಿದ್ದನು. ತಿನಸು-ತಿಂಡಿಗಳನ್ನು ಕದ್ದು ಯಾರಿಗೆ ಕೊಡದೆ ಒಬ್ಬನೇ ಎಂದೂ ತಿನ್ನುತ್ತಿದ್ದಿಲ್ಲ; ಎಲ್ಲಿಯಾದರೂ ಹರಿಕೀರ್ತನೆಗಳು ನಡೆದರೆ ಅಲ್ಲಿಗೆ ತಾನು ಹೋಗಿ ಭಕ್ತಿಯಿಂದ ಕೀರ್ತನೆ ಕೇಳುತ್ತಿದ್ದನು. ಹಿರಿಯರು ಹೇಳಿದ ಮಾತುಗಳನ್ನು ಶ್ರದ್ಧೆಯಿಂದ ಕೇಳಿ ತಿಳಿದುಕೊಳ್ಳುತ್ತಿದ್ದನು. ಈ ರೀತಿಯಲ್ಲಿ ಭಕ್ತಿಭಾವವು ಏಕನಾಥನಲ್ಲಿ ಬೆಳೆಯತೊಡಗಿತು.

ಒಂದು ದಿನ ಪೈಠಣ ಶಿವಾಲಯದಲ್ಲಿ ಕೀರ್ತನೆ ನಡೆಯಿತು. ಅದು ಮಧ್ಯರಾತ್ರಿಯ ವರೆಗೆ ನಡೆದು, ಮಂಗಳಾರತಿ ಆದ ಬಳಿಕ ಎಲ್ಲರೂ ತಮ್ಮ ತಮ್ಮ ಮನೆಗೆ ತೆರಳಿದರು; ಏಕನಾಥನು ಅಲ್ಲಿಯೇ ಮಲಗಿದನು. ಬೆಳಗಿನ ಜಾವಕ್ಕೆ ಎಚ್ಚರವಾಗಿ ಎದ್ದು ಕುಳಿತು ಶ್ರೀಕೃಷ್ಣನ ನಾಮಸ್ಮಾರಣೆ ಮಾಡುತ್ತಿರಲು ಎಲೈ ಬಾಲಕನೇ! ನೀನು ನಾಳೆ ದೇವಗಡಕ್ಕೆ ತೆರಳು, ಅಲ್ಲಿ ಬ್ರಹ್ಮವಿದ್ಯಾ ಸಂಪನ್ನರಾದ ಜನಾರ್ಧನ ಸ್ವಾಮಿಗಳಿರುವರು, ಅವರು ನಿನಗೆ ತತ್ವೋಪದೇಶ ಮಾಡುವರು ಎಂದು ಆಕಾಶವಾಣಿಯಾಯಿತು. ಏಕನಾಥನು ಭಕ್ತಿಯಿಂದ ಆಲಿಸಿ ಇದು ಶ್ರೀ ಪರಮಾತ್ಮನಿಂದ ಆದ ವಾಣಿಯು ಎಂದು ನಂಬಿ ಮರುದಿನವೇ ಅಲ್ಲಿಂದ ತೆರಳಿ ನಡೆದುಕೊಂಡು ದೇವಗಡವನ್ನು ಸೇರಿದನು. ಜನಾರ್ಧನ ಸ್ವಾಮಿಗಳ ಆಶ್ರಯ ಸೇರಿ ಅವರ ಬಳಿಗೆ ಬರಲು, ಸ್ವಾಮಿಗಳು ಧ್ಯಾನಯೋಗದಲ್ಲಿದ್ದರು. ಆಗ ಆ ಏಕನಾಥನು ಸ್ವಾಮಿಗಳಿಗೆ ಸಾಷ್ಟಾಂಗನಮಸ್ಕಾರ ಮಾಡಿ ಕೈಮುಗಿದು ನಿಂತುಕೊಂಡನು. ಕೆಲಹೊತ್ತಿನ ಮೇಲೆ ಸ್ವಾಮಿಗಳು ಸಮಾಧಿಯಿಂದೆಚ್ಚತ್ತು ಕಣ್ದೆರೆದು ನೋಡಲು— ಎದುರಿಗೆ ನಿಂತಿದ್ದ ಏಕನಾಥನನ್ನು ನೋಡಿ, ಏಕನಾಥಾ! ಶ್ರೀಹರಿಯ ಪ್ರೇರಣೆಯಿಂದಾದ ಆಕಾಶವಾಣಿಯನ್ನು ಕೇಳಿ ಇಲ್ಲಿಗೆ ಬಂದಿಯಲ್ಲವೆ ಎಂದು ಕೇಳಿದರು. ಆಗ ಏಕನಾಥನು ಪಂಡಿತರ ಮಾತಿಗೆ ವಿಸ್ಮಿತನಾಗಿ ಇವರು ಮಹಾಜ್ಞಾನ ಸಂಪನ್ನರು, ಇಂಥ ಮಹನೀಯರ ಮೊರೆ ಹೊಕ್ಕು ನನ್ನ ಜನ್ಮಸಾಫಲ್ಯ ಮಾಡಿಕೊಳ್ಳಬೇಕು ಎಂದೆನಿಸಿ ಸ್ವಾಮಿಗಳಿಗೆ ತನ್ನ ಅಭಿಪ್ರಾಯವನ್ನು ತಿಳಿಸಿದನು. ಆಗಾ ಸ್ವಾಮಿಗಳು ಏಕನಾಥಾ,

ನಿನ್ನ ಇಂಗಿತವನ್ನು ನಾನು ಬಲ್ಲೆನು, ಶ್ರೀಕೃಷ್ಣನು ನಿನ್ನಿಷ್ಟವನ್ನು ಪೂರೈಸುವನು, ನಿಶ್ಚಿಂತನಾಗಿರು, ಎಂದು ಹೇಳಲು ಏಕನಾಥನು ಗುರುಸೇವೆಯಲ್ಲಿ ನಿರತನಾಗಿ, ಅಲ್ಲಿಯೇ ಇರತೊಡಗಿದನು.

ಒಂದು ದಿನ ಅನೇಕ ಜನ ವೀರಭಟರು ಆಯುಧಪಾಣಿಗಳಾಗಿ ಸಿಂಹಗರ್ಜನೆ ಮಾಡುತ್ತ ಜನಾರ್ಧನ ಸ್ವಾಮಿಗಳ ಆಶ್ರಮಕ್ಕೆ ಮುತ್ತಿಗೆಹಾಕಿದರು. ಆಗ ಜನಾರ್ಧನಸ್ವಾಮಿಗಳು ಧ್ಯಾನಚಿತ್ತರಾಗಿದ್ದರು. ಒಂದೆಡೆ ಕೂತುಕೊಂಡಿದ್ದ ಏಕನಾಥನು ಕಿಡಿಕಿಯಿಂದ ಹೊರಗೆ ನೋಡಿ ಶಸ್ತ್ರಸಜ್ಜಿತರಾಗಿದ್ದ ಜನರನ್ನು ಕಂಡು, ಇವರು ಸ್ವಾಮಿಗಳ ವಿರೋಧಿ ಪಂಗಡದವರು. ಸ್ವಾಮಿಗಳಿಗೆ ಅಪಾಯ ಮಾಡಲು ಬಂದಿರುವರೆಂದು ತಿಳಿದುಕೂಡಲೇ ಸ್ವಾಮಿಗಳು ಧರಿಸುತ್ತಿದ್ದ ರಾಜಕೀಯ ಉಡುಪು ಧರಿಸಿ, ಅವರು ಹಿಡಿಯುವ ಖಡ್ಗವನ್ನು ಕೈಯಲ್ಲಿ ಹಿಡಿದು, ಅವರು ಹತ್ತುವ ಕುದುರೆಯನ್ನೇರಿ “ ಜೈ ಗುರುದೇವ ” ಎಂದು ವೈರಿಗಳ ಮೇಲೆ ಧುಮುಕಿ, ಅವರೊಡನೆ ಘೋರ ಕದನಮಾಡಿ, ಎಲ್ಲರನ್ನೂ ಹೊಡೆದೋಡಿಸಿ ಜಯಶೀಲನಾಗಿ ಹಿಂತಿರುಗಿದನು. ಇದನ್ನು ಮರೆಯಲ್ಲಿ ನಿಂತುನೋಡುತ್ತಿದ್ದ ಚಾಲಕರು ಓಡಿಬಂದು ಸ್ವಾಮಿಗಳಿಗೆ ಆ ಘಟನೆಯ ವಿಚಿತ್ರವನ್ನೂ, ಏಕನಾಥನ ಸಾಹಸವನ್ನೂ ಹೇಳುತ್ತಲಿದ್ದರು. ಅಷ್ಟರಲ್ಲಿ ಏಕನಾಥನು ಬಂದು ಕುದುರೆಯಿಂದಿಳಿದು ಖಡ್ಗ ವಸ್ತ್ರಗಳನ್ನು ಒಳಗಿಟ್ಟು ಸ್ವಾಮಿಗಳ ಸನ್ನಿಧಿಗೆ ಬಂದು ಕೈಮುಗಿದು ನಮಸ್ಕರಿಸಿ ನಿಂತುಕೊಂಡನು. ಆಗ ಸ್ವಾಮಿಗಳು ಏಕನಾಥನನ್ನು ಕುರಿತು— ಏಕನಾಥಾ ! ದೇವಗುರುಹಿರಿಯರಲ್ಲಿರುವ ನಿನ್ನ ಭಕ್ತಿಯು ಅಪಾರವಾದುದು; ಅದನ್ನು ವರ್ಣಿಸಲು ಅಶಕ್ಯವಾದುದು. ಭಲೆ! ಬಹಾದ್ದೂರಾ! ವೈರಿಗಳನ್ನು ಗೆದ್ದುದರಿಂದ ಜನತೆಗೆ ಒದಗತಕ್ಕ ವಿಪತ್ತುಗಳು ಅನಾಯಾಸವಾಗಿ ತೊಲಗಿದವು. ಗುರುಭಕ್ತಿಯಲ್ಲಿ ನೀನಿಟ್ಟ ಅಪಾರ ನಂಬಿಗೆಯಿಂದ ನನ್ನ ಇಷ್ಟಾರ್ಥವು ಅವಲೀಲೆಯಾಗಿ ಕೈಗೂಡುತ್ತದೆ; ಶ್ರೀಕೃಷ್ಣ ಕೃಪಾಕಟಾಕ್ಷವು ನಿನ್ನ ಮೇಲೆ ಅಮೋಘವಾಗಿದೆ ಎಂದು ಆಶೀರ್ವದಿಸಿ, ಭೋಜನಮಾಡಿ ಬರುವಂತೆ ಅಜ್ಞೆಮಾಡಿದರು.

ಜನಾರ್ಧನ ಸ್ವಾಮಿಗಳ ಯೋಗಾಶ್ರಮವು ಆಶ್ರಮದಿಂದ ಉತ್ತರಕ್ಕೆ ಸ್ವಲ್ಪ ದೂರದಲ್ಲಿದ್ದಿತು. ಅದು ಪಾಕೃತಿ ಸಾಂದರ್ಯದಿಂದ ಕೂಡಿ

ದ್ದರೂ ದುರ್ಗಮವಾಗಿದ್ದಿತು. ಕಾಡು ಮೃಗಗಳಿಗೂ, ಭೀಕರ ಸರ್ಪಗಳಿಗೂ ನೆಲೆಬೀಡಾಗಿದ್ದಿತು. ಇಂಥ ಪ್ರದೇಶಕ್ಕೆ ಸರ್ವಸಾಧಾರಣವಾಗಿ ಯಾರೂ ಬರುವಂತಿರಲಿಲ್ಲ. ಅಲ್ಲಿಗೆ ಜನಾರ್ದನ ಸ್ವಾಮಿಗಳು ಆಗಾಗ್ಗೆ ಹೋಗಿ ನಿರ್ವಿಕಲ್ಪ ಯೋಗ ಸಮಾಧಿಯನ್ನು ಹೊಂದಿ ಆನಂದಿಸುತ್ತಿದ್ದರು. ಅಲ್ಲಿಗೆ ಜನಾರ್ದನ ಸ್ವಾಮಿಗಳ ಗುರುಗಳಾದ ದತ್ತಾತ್ರಯ ಮಹಾಸ್ವಾಮಿಗಳು ಮಾತ್ರ ಬರುತ್ತಿದ್ದರು. ಅವರ ವೇಷ ಭಾಷೆಗಳು ವಿಚಿತ್ರವಾದವುಗಳು. ಅವರು ಒಮ್ಮೆ ಶುದ್ಧ ಸದ್ಬ್ರಾಹ್ಮಣರಂತೆ ವೇಷ ಧರಿಸಿಕೊಂಡು ಮಹಾ ಪಂಡಿತರಂತೆ ಸಂಭಾಷಿಸುತ್ತಿದ್ದರು. ಮತ್ತೊಮ್ಮೆ ಹರಕು ಚಿಂದಿಗಳನ್ನುಟ್ಟು ದುರ್ಗಂಧಮಯ ಶರೀರವುಳ್ಳವರಾಗಿ ಹುಚ್ಚರಂತೆ ವಿಚಿತ್ರವಾಗಿ ಮಾತಾಡುತ್ತಲಿದ್ದರು. ಅವರ ವಾಣಿಯು ದೇವರ ವಾಣಿಯಾಗಿದ್ದಿತು. ಅವರು ಉಸುರಿದ ಮಾತುಗಳು ಎಂದೂ ವ್ಯರ್ಥವಾಗುತ್ತಿರಲಿಲ್ಲ. ಇಂಥ ಮಹಾಮಹಿಮರೂ ಜ್ಞಾನಿಗಳೂ ಆದ ದತ್ತಾತ್ರಯ ಸ್ವಾಮಿಗಳು ಜನಾರ್ದನ ಸ್ವಾಮಿಗಳ ಗುರುಗಳಾಗಿದ್ದರು.

ಜನಾರ್ದನ ಸ್ವಾಮಿಗಳು ತಮ್ಮ ಪರಮಭಕ್ತನಾದ ಏಕನಾಥನಿಗೆ, ಗುರುಗಳಾದ ದತ್ತಾತ್ರಯ ಸ್ವಾಮಿಗಳ ದರ್ಶನವನ್ನು ಮಾಡಿಸಬೇಕೆಂದು ಕುತೂಹಲವುಳ್ಳವರಾಗಿದ್ದರು. ಆ ಕಾರಣದಿಂದ ಏಕನಾಥನನ್ನು ತಮ್ಮ ಯೋಗಾಶ್ರಮಕ್ಕೆ ಕರೆದೊಯ್ದರು. ಮತ್ತು ದತ್ತಾತ್ರಯ ಸ್ವಾಮಿಗಳು ಯಾವ ವೇಷದಿಂದ ಬರುವರೋ ತಿಳಿಯದು. ಆದ್ದರಿಂದ ನೀನು ಅವರ ವೇಷಭಾಷೆಗಳ ಬಗ್ಗೆ ಸಂಶಯಪಟ್ಟುಕೊಳ್ಳಬೇಡ. ಆ ಬಗ್ಗೆ ಜಾಗರೂಕನಾಗಿರಬೇಕು. ಎಂದು ಮೊದಲೇ ತಿಳಿಸಿದ್ದರು. ಸುದೈವದಿಂದ ಅಂದು ಫಕೀರನ ವೇಷದಿಂದ ಬಂದರು. ಕಾಮಧೇನುವು ಶ್ವಾನರೂಪದಿಂದ ಅವರನ್ನು ಹಿಂಬಾಲಿಸಿತ್ತು. ಗುರುದೇವರ ಆಗಮನದಿಂದ ಜನಾರ್ಧನ ಸ್ವಾಮಿಗಳು ಸಂತೋಷದಿಂದ ಎದುರುಗೊಂಡು ನಮಸ್ಕರಿಸಿ ಆಶ್ರಮಕ್ಕೆ ಕರೆತಂದು ಉಚಿತಾಸನದಲ್ಲಿ ಕುಳ್ಳಿರಿಸಿದರು. ಬಳಿಕ ಜನಾರ್ದನ ಪಂಡಿತರು ಗುರುಗಳ ಆಜ್ಞೆ ಪಡೆದು ಕಾಮಧೇನುವಿನಿಂದ ಹಾಲು ಕರೆದು ಒಂದೇ ಪಾತ್ರೆಯಲ್ಲಿ ಆ ಗುರು-ಶಿಷ್ಯರಿಬ್ಬರೂ ಕೂಡಿ ಭುಂಜಿಸಿದರು. ಗುರು-ಶಿಷ್ಯರಲ್ಲಿ ಬೇಕಾದ ಪ್ರೇಮಬಾಂಧವ್ಯವನ್ನೂ, ಪರಸ್ಪರ ಸಮಭಾವವನ್ನೂ ಏಕನಾಥರು ಕಂಡ

ರಿಯುವಂತೆ ತೋರ್ಪಡಿಸಿದರು. ಅನಂತರ ಭುಂಜಿಸಿದ ಪಾತ್ರೆಯನ್ನು ಕೊಳ್ಳದಲ್ಲಿ ತೊಳೆದುಕೊಂಡು ಬರುವಂತೆ ಏಕನಾಥನಿಗೆ ಜನಾರ್ದನ ಪಂಡಿತರು ಆಜ್ಞೆಮಾಡಿದರು. ಕೂಡಲೆ ಏಕನಾಥರು ಪಾತ್ರೆಯನ್ನೆತ್ತಿಕೊಂಡು ಕೊಳ್ಳದ ಬಳಿಗೆ ಹೋಗಿ ಗುರುಗಳೀರ್ವರು ಭುಂಜಿಸಿದ ಪಾತ್ರೆಯಲ್ಲಿಯ ಶೇಷಾನ್ನವನ್ನು ಪ್ರಸಾದವೆಂದು ಭಾವಿಸಿ ಸೇವಿಸಿದರು. ನಂತರ ಸ್ವಚ್ಛವಾಗಿ ಪಾತ್ರೆಯನ್ನು ತೊಳೆದು ಅದರಲ್ಲಿಯೇ ನೀರು ಕುಡಿದು ಪುನಃ ತೊಳೆದು ಶುದ್ಧ ಮಾಡಿಕೊಂಡು ಗುರುಗಳ ಸನ್ನಿಧಿಗೆ ಬಂದರು. ಏಕನಾಥನು ಬರುವದೊಂದೇ ತಡ ದತ್ತಗುರುಗಳು ಏಕನಾಥಾ ಪಾತ್ರೆಯಲ್ಲಿಯ ಶೇಷಾನ್ನವು ನಿನ್ನ ಹಸಿವಿಗೆ ಸಾಕಾಯಿತೇ ? ಎಂದು ಕೇಳಿದರು. ನೀರುಬೇರೆ ಕುಡಿದೆನಲ್ಲಾ ಅಂದಮೇಲೆ ನಾಕಾಗದೇನು; ಎಂದು ಜನಾರ್ಧನ ಸ್ವಾಮಿಗಳೆಂದರು. ಏಕನಾಥನು ಅವರ ಯೋಗಶಕ್ತಿಗೆ ಅಚ್ಚರಿಗೊಂಡು ಅವರಿಬ್ಬರಿಗೂ ಸಾಷ್ಟಾಂಗ ನಮಸ್ಕಾರ ಮಾಡಿದನು. ಅಗ ದತ್ತ ಗುರುಗಳು ಏಕನಾಥನನ್ನು ತಮ್ಮ ಬಳಿಗೆ ಕರೆದು ವತ್ಸಾ ಎಂದು ಮಸ್ತಕದ ಮೇಲೆ ಹಸ್ತವನ್ನಿಟ್ಟು ನೀನು ಪರಮ ಭಾಗ್ಯವಂತನು. ಪಾಂಡುರಂಗನ ಭಕ್ತರಲ್ಲಿಯೇ ನೀನು ಅಗ್ರಗಣ್ಯನು ಎಂದು ಆಶೀರ್ವದಿಸಿ ಜನಾರ್ದನ ಪಂಡಿತರನ್ನು ಕುರಿತು, ಪಂಡಿತ ! ಈತನು ಭಕ್ತಿಯೋಗ ಪ್ರಚಾರಕ್ಕಾಗಿ ಅವತರಿಸಿದ್ದಾನೆ. ಈತನ ಅನೇಕ ಮಹತ್ತರ ವಿಷಯಗಳು ಗ್ರಂಥರೂಪದಲ್ಲಿ ಪ್ರಚಾರವಾಗುವವು. ಈತನ ಕೀರ್ತನೆ ಕೇಳಿದವರು ಭಕ್ತಿ ಮಾರ್ಗವನ್ನು ಅನುಸರಿಸುವರು. ಎಂದು ಹೇಳಿ ಅಲ್ಲಿಂದ ಹೊರಟು ಅದೃಶ್ಯರಾದರು.

ಏಕನಾಥರು ಗುರುಭಕ್ತಿಯಲ್ಲಿ ನಡೆಯುತ್ತಿರಲು ಒಂದು ದಿನ ರಾತ್ರಿ ಜನಾರ್ದನ ಪಂಡಿತರು ತಮ್ಮ ಶಿಷ್ಯನ ಲಕ್ಷವನ್ನು ಪರೀಕ್ಷಿಸಬೇಕೆಂದು ನಿಶ್ಚಯಿಸಿ ಒಂದು ಲೆಕ್ಕವನ್ನು ತಾವು ಮಾಡಿ ಬೇಕೆಂತಲೇ ಅದರಲ್ಲಿ ಸ್ವಲ್ಪ ವ್ಯತ್ಯಾಸವನ್ನಿಟ್ಟು ಅದನ್ನು ಏಕನಾಥರ ಕೈಗೆ ಕೊಟ್ಟು ಇದನ್ನು ಸರಿನೋಡೆಂದು ಹೇಳಿ ತಾವು ಹೋಗಿ ಮಲಗಿಕೊಂಡರು. ಏಕನಾಥರು ಗುರುದೇವರ ಆಜ್ಞೆಯನ್ನು ಶಿರಸಾವಹಿಸಿ ಲೆಕ್ಕವನ್ನು ಪರಿಶೀಲಿಸತೊಡಗಿದರು. ಲೆಕ್ಕವನ್ನು ಪುನಃ ಪುನಃ ತಪಾಸಿಸಿದರೂ ಲೆಕ್ಕದಲ್ಲಿ ವ್ಯತ್ಯಾಸವು ಕಂಡು ಬರುತ್ತಿದ್ದಿತು. ಲೆಕ್ಕವು ಸಾಮಾನ್ಯವುಳ್ಳದ್ದಾಗಿದ್ದರೂ, ಮತ್ತು

ಆದರಲ್ಲಿ ತಪ್ಪು ಒಡೆದುಕಾಣುತ್ತಿದ್ದರೂ ಗುರುದೇವರು ಮಾಡಿದ ಲೆಕ್ಕದಲ್ಲಿ ತಪ್ಪಿರಲಾರದೆಂಬ ಭಾವನೆಯಿಂದ ಅದೆಷ್ಟೋ ಸಲ ತಪಾಸಿಸಿದರೂ, ಏನು ಮಾಡಿದರೂ ಸರಿಬರಲೊಲ್ಲದು, ಹೀಗೆ ಇಡೀ ರಾತ್ರಿಯನ್ನೇ ಕಳೆದರು. ಗುರುಗಳು ಆಗಾಗ್ಗೆ ಎದ್ದುಬಂದು ಮರೆಯಲ್ಲಿ ನಿಂತು ನೋಡುತ್ತಿದ್ದರು. ಬೆಳಿಗ್ಗೆ ಗುರುಗಳಾದ ಜನಾರ್ಧನ ಸ್ವಾಮಿಗಳು ಎದ್ದು ಬಂದು— ಏಕನಾಥ! ಏನು ಮಾಡುತ್ತಿದ್ದೀ, ಎಂದು ಕೇಳಲು ಆಗ ಆ ಏಕನಾಥರು ಲೆಕ್ಕಮಾಡುತ್ತಿದ್ದೇನೆ ಎಂದು ಉತ್ತರಕೊಟ್ಟರು. ಆಗ ಸ್ವಾಮಿಗಳು— ಏಕೆ ಸರಿಯಿಲ್ಲವೇ ? ಎನ್ನಲು ಏಕನಾಥರು— ಲೆಕ್ಕಸರಿಯಾಗಿದೆ; ಆದರೆ ತಪ್ಪು ಗುರ್ತು ಮಾಡಿದ್ದೇನೆ ಎಂದರು. ಆಗ ಆ ಜನಾರ್ಧನಸ್ವಾಮಿಗಳು ಏಕನಾಥರ ಮಾತುಗಳಿಂದ ಸಂತೋಷಗೊಂಡು ಏಕನಾಥಾ! ಲೆಕ್ಕದ ವಿಷಯದಲ್ಲಿಟ್ಟ ಏಕಚಿತ್ತ ಮನೋಭಾವವನ್ನು ಜಗದ್ರಕ್ಷಕನಾದ ಆ ಪರಮಾತ್ಮನ ವಿಷಯದಲ್ಲಿಡು; ಇದೇ ನನ್ನ ಅಭಿಪ್ರಾಯ. ಅದನ್ನು ಹೇಳುವದಕ್ಕಾಗಿಯೇ ಈ ಕೆಲಸವನ್ನು ಕೊಟ್ಟಿದ್ದೇನೆ ಹೊರ್ತು ಬೇರೇನೂ ಇಲ್ಲ. ಎಂದು ಶಿಷ್ಯನನ್ನು ಸಮಾಧಾನಗೊಳಿಸಿ ಇಬ್ಬರೂ ಕೂಡಿ ಸ್ನಾನ ಸಂಧ್ಯಾದಿಗಳನ್ನು ತೀರಿಸಿಕೊಂಡುಬಂದರು.

ಇಂತಿರಲು ಕೆಲಕಾಲದ ಮೇಲೆ ಜನಾರ್ಧನ ಪಂಡಿತರು ಏಕನಾಥರಿಗೆ ಆತ್ಮಶಕ್ತಿಯನ್ನೂ, ಭಕ್ತಿಯೋಗವನ್ನೂ, ಸಮರಸ ಭಾವಾನಂದವನ್ನೂ ಹೊಂದಿ, ಅನುಭವಕ್ಕೆ ತೆಗೆದುಕೊಳ್ಳುವ ಪದ್ಧತಿಯನ್ನೂ, ವಿಧಾನಗಳನ್ನೂ ತಿಳಿಸಿದರು. ಆಗ ಗುರೂಪದೇಶವನ್ನು ಪಡೆದು ಅಲ್ಲಿಂದ ಹೊರಟು ಪೂರ್ವದಲ್ಲಿ ಮಾರ್ಕಂಡೇಯನು ತಪವನ್ನಾಚರಿಸಿದ ರಮ್ಯಪ್ರದೇಶವನ್ನು ತನ್ನ ತಪಸ್ಸಿಗೆ ಆರಿಸಿಕೊಂಡನು. ಅಲ್ಲಿದ್ದ ಅನೇಕ ತೀರ್ಥಗಳಲ್ಲಿ ಒಂದಾದ ಸೂರ್ಯತೀರ್ಥದಲ್ಲಿ ಸ್ನಾನಮಾಡಿ ನಿರ್ಮಲವಾದ ಸ್ಥಳದಲ್ಲಿ ವಸತಿಯನ್ನೇರ್ಪಡಿಸಿಕೊಂಡು ಸಿದ್ಧಾಸನಾರೂಢನಾಗಿ ಯೋಗಿ ಯೋಗೇಶ್ವರನಾದ ಶ್ರೀಕೃಷ್ಣಪರಮಾತ್ಮನನ್ನು ಧ್ಯಾನಿಸುತ್ತ ತಪಸ್ಸನ್ನು ಪ್ರಾರಂಭಿಸಿದನು.

ಈ ರೀತಿಯಾಗಿ ತಪಸ್ಸನ್ನಾರಂಭಿಸಿದ ಏಕನಾಥರು ನಿಶ್ಚಲ ಸಮಾಧಿಯೋಗವನ್ನವಲಂಬಿಸಿ ಆನಂದಿಸುತ್ತಿರುವಾಗ ಒಂದು ದಿನ ಕ್ರೂರ ಸರ್ಪ ಒಂದು ಸರಸರನೆ ಬಂದು ಏಕನಾಥರ ಮೈಗೆ ಸುತ್ತಿಕೊಂಡಿತು. ಆ ಸರ್ಪವು ಕಚ್ಚಬೇಕೆಂದೇ ಬಂದಿದ್ದರೂ ಸರ್ವಭೂತ ಸಮದರ್ಶನ ಯೋಗವನ್ನೇ

ಅವಲಂಬಿಸಿದ್ದರಿಂದ ಕಚ್ಚಲು ಶಕ್ತಿ ಸಾಲದಾಯಿತು. ಏಕನಾಥನ ಸುತ್ತುವರಿದಿದ್ದ ಆ ಕ್ರೂರ ಸರ್ಪದ ಕಾರ್ಯವು ಏಕನಾಥರನ್ನು ಸುತ್ತಿಕೊಂಡ ನಂತರ ಉಳಿಯದೆ ಪರಮ ಶಾಂತಿಯನ್ನು ಪಡೆಯಿತು. ಮತ್ತು ತನ್ನ ವಿಶಾಲ ಹೆಡೆಯನ್ನು ಛತ್ರಿಯಂತೆ ಏಕನಾಥರ ತಲೆಯ ಮೇಲೆ ಹಿಡಿದು ಆಡುತ್ತಲಿದ್ದಿತು. ಇದಲ್ಲದೆ ಅನೇಕ ಸಣ್ಣ ಪುಟ್ಟ ಹುಳಗಳಿಂದ ಏಕನಾಥರಿಗಾಗುತ್ತಿದ್ದ ಕಿರುಕಳ ತ್ರಾಸನ್ನು ಕಡಿಮೆ ಮಾಡಿತು, ಇದರಂತೆ ಪ್ರತಿದಿನವೂ ಆ ಸರ್ಪ ಬಂದು ಅವರ ಸೇವೆಮಾಡಿ ಹೋಗುತ್ತಲಿತ್ತು. ಒಂದು ದಿನ ಬೆಟ್ಟದ ಕೆಳಭಾಗದಲ್ಲಿ ದನಕಾಯುತ್ತಿದ್ದ ಓರ್ವ ಗೊಲ್ಲ ಬಾಲಕನು ಗಿಡಗಳಲ್ಲಿಯ ಹಣ್ಣು ಹರಿಯಲೆಂದು ಗುಡ್ಡದಮೇಲೆ ಬಂದು ಏಕನಾಥರನ್ನು ನೋಡಿ ಇವರಾರೋ ಮುನೀಶ್ವರರಿರುವರೆಂದು ಭಾವಿಸಿ ದಿನಾಲು ಒಂದು ಪಾತ್ರೆ ತುಂಬ ಹಾಲು ಹಿಂಡಿ ತಂದು ಅವರಿಗೆ ಅರ್ಪಿಸುತ್ತಿದ್ದನು. ಹೀಗೆ ಕೆಲದಿನಗಳು ಕಳೆಯಲು ವಾಡಿಕೆಯಂತೆ ಹಾಲು ತರುತ್ತಿರುವಾಗ ಏಕನಾಥರ ಮೈಗೆ ಸುತ್ತಿಕೊಂಡ ಹಾವು ಹೆಡೆ ಬಿಚ್ಚಿ ಆಡುತ್ತಿರುವದನ್ನು ಕಂಡು ದೂರದಲ್ಲಿಯೇ ಪಾತ್ರೆಯನ್ನಿಟ್ಟು ಅರಚಿಕೊಂಡನು. ಆ ಶಬ್ದದಿಂದ ಏಕನಾಥರು ಬಹಿರ್ಮುಖರಾಗಿ ತಮ್ಮ ದೇಹಕ್ಕೆ ಸುತ್ತಿಕೊಂಡಿದ್ದ ಸರ್ಪವನ್ನು ಪರೀಕ್ಷಿಸಿ ಸ್ವಲ್ಪವೂ ಭಯಗೊಳ್ಳದೆ ಅದು ಏನೂ ಮಾಡುವದಿಲ್ಲ ಬಾ. ಎಂದು ಸಮಾಧಾನ ಪಡಿಸಿ ಕರೆದು ಹಾಲಿನ ಪಾತ್ರೆಯನ್ನು ತೆಗೆದುಕೊಂಡು ಅದರಲ್ಲಿಯ ಕೆಲ ಭಾಗವನ್ನು ಆ ಸರ್ಪಕ್ಕೂ ಇಡಲು ಆ ಹಾಲು ಕ.ಡಿದು, ಆ ಸರ್ಪವು ತನ್ನ ಹುತ್ತದೊಳಗೆ ಹೋಯಿತು.

ಏಕನಾಥರು ಯೋಗಾಭ್ಯಾಸವನ್ನು ಪೂರೈಸಿಕೊಂಡು ಅಲ್ಲಿಂದ ತೆರಳಿ ಜನಾರ್ದನ ಪಂಡಿತರ ಬಳಿಗೆ ಬಂದು ಅವರ ಪಾದಗಳಿಗೆ ವಂದಿಸಲು ಆಗಾ ಪಂಡಿತರು ಆಶೀರ್ವದಿಸಿ, ಏಕನಾಥರಿಂದ ಮುಂದೆ ಆಗತಕ್ಕ ಕಾರ್ಯಗಳನ್ನು ಆಲೋಚಿಸಿ— ಏಕನಾಥಾ ! ನೀನಿನ್ನು ತೀರ್ಥಯಾತ್ರೆಯನ್ನು ಮಾಡುವವನಾಗು. ನಾನು ನಿನ್ನೊಡನೆ ಗೋದಾವರಿ ತೀರದ ವರೆಗೆ ಬರುವೆನೆಂದು ಹೇಳಿದರು.

ಆ ಗುರು ಶಿಷ್ಯರಿಬ್ಬರೂ ಕೂಡಿ ತೀರ್ಥಯಾತ್ರೆಗಾಗಿ ಹೊರಟು ದಾರಿ ನಡೆಯುತ್ತ ಗೋದಾವರಿ ತೀರಕ್ಕೆ ಬಂದರು. ಅಲ್ಲಿದ್ದ ಚಂದ್ರಶರ್ಮನ ಆಶ್ರ

ಮಕ್ಕೆ ಬಂದು ಚಂದ್ರನಿಂದ ಮರ್ಯಾದಾಪೂರ್ವಕ ಸ್ವಾಗತ ಸಂತೋಷಗಳನ್ನು ಹೊಂದಿ ಆ ರಾತ್ರಿ ಅಲ್ಲಿಯೇ ಇದ್ದುಕೊಂಡು ಚಂದ್ರಶರ್ಮನು ರಚಿಸಿದ "ಭಾಗವತ ಚತುಶ್ಲೋಕ" ಎಂಬ ಗ್ರಂಥವನ್ನು ಆತನಿಂದ ಕೇಳಿ ಆನಂದಭರಿತನಾಗಿ– ಏಕನಾಥಾ ಈ ಗ್ರಂಥವನ್ನು ನೀನು ಮರಾಠಿ ಭಾಷೆಯಲ್ಲಿ ಓವಿವೃತ್ತಗಳಿಂದ ರಚಿಸು ಎಂದು ಆಜ್ಞೆ ಮಾಡಿದರು. ಏಕನಾಥಸ್ವಾಮಿಗಳು ಆ ಗುರುಗಳ ಆಜ್ಞೆಯನ್ನು ಶಿರಸಾವಹಿಸಿ ಅಲ್ಲಿಂದ ಪಂಚವಟಿಗೆ ತೆರಳಿ ಅಲ್ಲಿದ್ದು "ಚತುಶ್ಲೋಕ ಭಾಗವತ" ಗ್ರಂಥವನ್ನು ರಸವತ್ತಾಗಿ ರಚಿಸಿ ಗುರುಗಳ ಸನ್ನಿಧಿಗೆ ಬಂದು ಅದನ್ನು ಓದಿತೋರಿಸಲು ಜನಾರ್ದನ ಸ್ವಾಮಿಗಳು ಸಂತುಷ್ಟರಾಗಿ ಅವರಿಬ್ಬರನ್ನೂ ಹೊಗಳಿ ಆಶೀರ್ವದಿಸಿದರು. ಅನಂತರ ಮೂವರೂ ನಾಸಿಕಕ್ಕೆ ತೆರಳಿ ಅಲ್ಲಿ ನಿವೃತ್ತಿನಾಥರ ಸಮಾಧಿಯನ್ನು ಸಂದರ್ಶಿಸಿ, ಏಕನಾಥರಿಗೆ ಮುಂದಕ್ಕೆ ಪ್ರಯಾಣಬೆಳೆಸಲು ಹೇಳಿ ತಾವು ಚಂದ್ರಶರ್ಮರೊಡನೆ ದೇವಗಡಕ್ಕೆ ಹಿಂತಿರುಗಿದರು.

ಏಕನಾಥರು ಅಲ್ಲಿಂದ ತೆರಳಿ ಕಾಶಿ, ಗಯಾ, ಅಯೋಧ್ಯ, ಬೃಂದಾವನ ಮೊದಲಾದ ಭರತಖಂಡದ ಎಲ್ಲ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ ಸಂಚಾರವನ್ನು ಮುಗಿಸಿಕೊಂಡು ದೇವಗಡಕ್ಕೆ ಹಿಂತಿರುಗಿ ಬರುತ್ತಿರುವಾಗ ಮಾರ್ಗದಲ್ಲಿಯ ಪೈಠಣಪುರಕ್ಕೆ ಬಂದು ಶಿವಳೇಶ್ವರ ದೇವಾಲಯದಲ್ಲಿ ಕೆಲ ದಿನಗಳವರೆಗೆ ವಾಸಮಾಡಿಕೊಂಡಿದ್ದರು.

ಅತ್ತ ಚಕ್ರಪಾಣಿಯು ಮೊಮ್ಮಗನ ಅಗಲುವಿಕೆಯಿಂದ ದುಃಖಗೊಂಡು ಅನೇಕ ಜನರನ್ನು ಕಳಿಸಿ ಹುಡುಕಿಸಿದರೂ ಏಕನಾಥನ ಪತ್ತೆಯಾಗಲಿಲ್ಲ. ಆಗ ಅವನು ನಿರಾಶೆಗೊಂಡನಾದರೂ ಎಂದಿಗಾದರೂ ಮೊಮ್ಮಗನಮುಖ ದರ್ಶನವಾಗುವದೋ ಇಲ್ಲೋ ಎಂಬ ಸಂಶಯದಿಂದ ಚಿಂತಿಸುತ್ತಿದ್ದರನು. ಚಕ್ರಪಾಣಿಯ ಆಶ್ರಿತನಾದ ಪುರೋಹಿತನೊಬ್ಬನು ಏಕನಾಥರು ಮನೆಬಿಡುವ ಒಂದೆರಡು ದಿನ ಪೂರ್ವದಲ್ಲಿ ಕೆಲವೊಂದು ಕಾರಣದಿಂದ ದೂರ ದೇಶಕ್ಕೆ ಹೋಗಿದ್ದನು. ಏಕನಾಥನು ಪೈಠಣಕ್ಕೆ ಬರುವ ಪೂರ್ವದಲ್ಲಿ ಒಂದೆರಡು ದಿನಗಳ ಹಿಂದೆ ಬಂದಿದ್ದನು. ಇವನು ದೇವಗಡದಲ್ಲಿದ್ದಾಗ ಏಕನಾಥರ ಕೆಲ ಮಹತ್ವದ ವಿಷಯಗಳನ್ನು ಕೇಳಿದವನಾದ್ದರಿಂದ ಏಕನಾಥರ ಆಗಮನವು ಶೀವ್ರದಲ್ಲಾಗುವದೆಂದು ಸಮಾಧಾನ ಹೇಳುತ್ತಿದ್ದರು.

ಪುರೋಹಿತನು ತನಗಾದ ಮಾರ್ಗಾಯಾಸವನ್ನು ಲಕ್ಷಿಸದೇ ಅಲ್ಲಲ್ಲಿ ಹುಡುಕುತ್ತಿರಲು ಒಂದು ದಿನ ಪೀವಳೇಶ್ವರ ಆಲಯದಲ್ಲಿ ಏಕನಾಥರನ್ನು ಕಂಡು ಗುರ್ತಿಸಿ ಆತನೊಡನೆ ಏನೂ ಮಾತನಾಡದೇ ತೀವ್ರವಾಗಿ ದೇವ ಗಡಕ್ಕೆ ಬಂದು ಜನಾರ್ದನಸ್ವಾಮಿಗಳಿಗೆ ನಮಸ್ಕರಿಸಿ ಚಕ್ರಪಾಣಿಯ ಮನೆ ಯಲ್ಲುಂಟಾದ ಪರಿಸ್ಥಿತಿಯನ್ನು ತಿಳಿಸಲು ಆಗ ಆ ಜನಾರ್ದನಸ್ವಾಮಿಗಳು ಸ್ವಹಸ್ತದಿಂದ ಏಕನಾಥರಿಗೊಂದು ಕೆಳಗಿನಂತೆ ಪತ್ರ ಬರೆದುಕೊಟ್ಟರು.

ಏಕನಾಥಾ ! ನೀನು ನನ್ನಾಜ್ಞೆಯನ್ನು ಶಿರಸಾವಹಿಸಿ ನಡೆದುಕೊಳ್ಳ ತಕ್ಕದ್ದು. ನೀನು ಗ್ರಹಸ್ಥಾಶ್ರಮವನ್ನು ಸ್ವೀಕರಿಸಿ ಪೈಠಣದಲ್ಲಿಯೇ ಇದ್ದು ನಿನ್ನ ಅಜ್ಜ- ಅಜ್ಜಿಯರಿಗೆ ಸಂತೋಷವನ್ನುಂಟು ಮಾಡುತ್ತ ಭಕ್ತಿ ಯೋಗ ವನ್ನು ಪ್ರಕಾಶಪಡಿಸು. ಸಾಧುಸಜ್ಜನರಿಗೆ ಆಶ್ರಯಕೊಟ್ಟು ಸಲಹುತ್ತ ಸಂಕೀರ್ತನ ವೈಭವದಿಂದ ಜನರನ್ನು ಸಂತೋಷಪಡಿಸುತ್ತ ಪಾರಮಾರ್ಥ ಹೊಂದು. ಶ್ರೀಕೃಷ್ಣ ಪರಮಾತ್ಮನ ಕೃಪಾಮೃತವು ನಿನ್ನಮೇಲಿರುವದರಿಂದ ಎಲ್ಲವೂ ಆನಂದಕರವಾಗಿ ಪರಿಣಮಿಸುವದು. ಇಂತಿ ಆಶೀರ್ವಾದಗಳು.

ಪುರೋಹಿತನು ಈ ಪ್ರಕಾರದ ಪತ್ರವನ್ನು ತಕ್ಕೊಂಡು ಪೈಠಣಕ್ಕೆ ಹಿಂತಿರುಗಿ ಬಂದನು. ಚಕ್ರಪಾಣಿಗೆ ಎಲ್ಲ ಸಂಗತಿಯನ್ನು ತಿಳಿಸಿ ಜನಾರ್ದನ ಸ್ವಾಮಿಗಳ ಪತ್ರವನ್ನು ಆತನಿಗೆ ಕೊಟ್ಟು ಸಮಾಧಾನಪಡಿಸಿದನು.

ಒಂದು ದಿನ ಏಕನಾಥರು ಪೈಠಣದ ಬೀದಿಯಲ್ಲಿ ಬರುತ್ತಿದ್ದರು. ಆಗ ಪುರೋಹಿತನು ಅವರನ್ನು ನೋಡಿ ಚಕ್ರಪಾಣಿಗಾ ವಿಚಾರವನ್ನು ತಿಳಿಸಲು ಕೂಡಲೇ ಅವನು ಬೀದಿಗೆ ಬಂದು ಮೊಮ್ಮಗನನ್ನು ಗುರ್ತಿಸಿ, ಮನಮುಟ್ಟಿ ಆಲಂಗಿಸಿದನು. ಆದರೆ ಏಕನಾಥರು ವ್ಯಾಮೋಹವನ್ನು ಹರಿದುಹಾಕಿದ್ದರಿಂದ ನಿಶ್ಚಲರಾಗಿದ್ದನು. ಆಗ ಚಕ್ರಪಾಣಿಯು ತನ್ನಲ್ಲಿದ್ದ ಪತ್ರವನ್ನು ನಾಥರಿಗೆ ಕೊಟ್ಟು ನೀರುದುಂಬಿದ ಕಣ್ಣುಗಳಿಂದ ಏಕನಾಥ ರನ್ನು ದೃಷ್ಟಿಸಿ ನೋಡುತ್ತ ನಿಂತುಕೊಂಡರು. ಏಕನಾಥರು ಗುರುಪತ್ರ ವನ್ನೋದಿ ಖಿನ್ನಮನಸ್ಕನಾಗಿ "ಗುರುದೇವಾ, ನಿನ್ನ ಇಚ್ಛೆಯಿದ್ದಂತಾಗಲಿ" ಎಂದು ಗುರುಗಳನ್ನು ಸ್ಮರಿಸಿ ಅಜ್ಜನನ್ನು ಸಂತೈಸಿದರು. ಗುರು ಪತ್ರವು ಯಾವ ಸ್ಥಳದಲ್ಲಿ ತಮ್ಮ ಕೈ ಸೇರಿತೋ ಅದೇ ಸ್ಥಳದಲ್ಲಿ ಒಂದು ಪರ್ಣ ಕುಟೀರವನ್ನೇರ್ಪಡಿಸಿಕೊಂಡು ಅಲ್ಲಿಯೇ ವಾಸಮಾಡಿದರು.

ಆ ಸಣ್ಣ ಪರ್ಣಕುಟೀರವು ಪ್ರಶಾಂತ ಪೂಜಾಮಂದಿರವಾಯಿತು. ಸಾವಿರಾರು ಜನರು ಊಟ ಮಾಡುವ ಅನ್ನಛತ್ರವಾಯಿತು. ಹರಿಕೀರ್ತನೆಯ ಹಂಬಲವುಳ್ಳ ಜನರ ಸಂಗಮಸ್ಥಾನವಾಯಿತು.

ಸದ್ಗುಣ ಸಂಪನ್ನಳೂ, ಸುಶೀಲಳೂ ಆದ ಬಿಜಾಪುರದ ಗಿರಿಜಾಬಾಯಿಯನ್ನು ತಂದು ಸುಮುಹೂರ್ತದಲ್ಲಿ ಏಕನಾಥನೊಡನೆ ವಿವಾಹವನ್ನು ಮಾಡಿದರು. ಏಕನಾಥರು ಗೃಹಸ್ಥಾಶ್ರಮವನ್ನು ಪ್ರವೇಶಿಸಿದರೂ ಅತಿಥಿ ಅಭ್ಯಾಗತರಿಗೂ ಸಾಧು ಸಂತರಿಗೂ ನಿತ್ಯವೂ ಅನ್ನದಾನ ಮಾಡುತ್ತಲಿದ್ದರು. ದಿನಾಲು ಬೆಳಗಿನಜಾವದಲ್ಲೇ ಎದ್ದು ಗೋದಾವರಿಗೆ ತೆರಳಿ ಸ್ನಾನಾದಿಗಳನ್ನು ತೀರಿಸಿಕೊಂಡು ಮನೆಗೆ ಬಂದು ಪೂಜಾದಿಗಳನ್ನು ಮುಗಿಸಿ ಊಟ ಮಾಡಿ ಭಾಗವತ ಕೀರ್ತನೆ ಹೇಳುತ್ತಿದ್ದರು. ಆ ನಂತರ ಸಾಯಂಕಾಲ ಪುನಃ ಗೋದಾವರಿಗೆ ಹೋಗಿ ಸ್ನಾನಸಂಧ್ಯಾನುಷ್ಠಾನಗಳನ್ನು ತೀರಿಸಿ ಬಂದು ದೀಪಾರಾಧನೆ ದೇವಪೂಜಾದಿಗಳನ್ನು ಮುಗಿಸಿ ಸುವಿಚಾರಿ ಜನರಿಗೆ ಸದ್ಬೋಧನೆಯನ್ನು ಮಾಡುವರು. ಈ ರೀತಿಯಾಗಿ ಕಾಲಕಳೆಯುತ್ತಲೂ ಭಕ್ತಿಯೋಗವನ್ನು ಮನೋರಂಜಕವಾಗಿ ಜನರಿಗೆ ಬೋಧಿಸುತ್ತಲೂ ಇದ್ದರು. ಅವರ ಅರ್ಧಾಂಗಿಯಾದರೂ ಪತಿವ್ರತಾ ಶಿರೋಮಣಿಯಾಗಿ ಪತಿಯ ಕಾರ್ಯದಲ್ಲಿಯೂ ಸಹಾಯಕಳಾಗಿದ್ದಳು.

ಏಕನಾಥರಿಗೆ ಗೋದಾವರಿ, ಗಂಗಾ ಎಂಬ ಇಬ್ಬರು ಹೆಣ್ಣುಮಕ್ಕಳೂ ಹರಿಪಂಥ, ರಾಘವರೆಂಬ ಇಬ್ಬರು ಗಂಡುಮಕ್ಕಳೂ ಇದ್ದರು. ಹೆಣ್ಣುಮಕ್ಕಳನ್ನು ಯೋಗ್ಯವರರಿಗೆ ಕೊಟ್ಟು ಲಗ್ನಮಾಡಿದನು. ಹಿರಿಯ ಮಗನಾದ ಹರಿಪಂಥನಿಗೆ ಸುಲಕ್ಷಣ ಸಂಪನ್ನೆಯಾದ ಕನ್ಯೆಯನ್ನು ತಂದು ಲಗ್ನಮಾಡಿದನು. ಹರಿಪಂಥನು ಸಂಸ್ಕೃತದಲ್ಲಿ ಅಸಾಧಾರಣ ಪಂಡಿತಸಿದ್ಧನು. ಅವನು ಮಾತೃಭಾಷೆಯಾದ ಮರಾಠಿ ಮೊದಲಾದವುಗಳು ಅಯೋಗ್ಯವಾದವುಗಳೆಂದೂ, ಆಚಾರಶೀಲರು ಅವುಗಳನ್ನು ಉಪಯೋಗಿಸಬಾರದೆಂದೂ, ಸಂಸ್ಕೃತ ಭಾಷೆಗಳಲ್ಲಿ ಗ್ರಂಥ ರಚಿಸಿದನು. ಅನೇಕ ಮತಗಳ ಜನರು ಕೂಡಿದಲ್ಲಿ ಹರಿಕೀರ್ತನೆ ಮಾಡುವದು ಅಯೋಗ್ಯವೆಂದು ಅವನ ವಿವಾದ. ಈ ರೀತಿಯಾಗಿ ತಂದೆಮಕ್ಕಳ ಅಭಿಪ್ರಾಯಗಳು ವಿರುದ್ಧ ರೀತಿಯಲ್ಲಿ ಬೆಳೆದುಕೊಂಡು ಬಂದವು. ಹರಿಪಂಥನು ತಂದೆಯ ವಿರುದ್ಧ ಅಭಿಪ್ರಾಯ

ವೃಳ್ಳವನಾಗಿ ಇಲ್ಲಿರಬಾರದೆಂದು ನಿಶ್ಚಯಿಸಿ ಸತಿಸುತರೊಡನೆ ಕಾಶಿಗೆ ತೆರಳಿ ಅಲ್ಲಿ ವಾಸಮಾಡಿದನು. ಏಕನಾಥರು ಕಿರಿಯ ಮಗನಾದ ರಾಘವನೊಡನೆ ಪೈಠಣದಲ್ಲಿಯೇ ಉಳಿದುಕೊಂಡರು. ಪದ್ಧತಿಯಂತೆ ದಿನವೂ ಅನ್ನದಾನ ಹರಿಕೀರ್ತನೆ ಸಂಕೀರ್ತನೆ ಪೂಜಾದಿಗಳು ನಿರಾತಂಕವಾಗಿ ನಡೆದೇ ಇದ್ದವು. ಅಷ್ಟರಲ್ಲಿ ಗೋಕುಲಾಷ್ಟಮಿಯು ಸಮೀಪಿಸಿತು. ಆಗ ತಮ್ಮ ಗುರುಗಳಾದ ಜನಾರ್ಧನ ಪಂಡಿತರನ್ನು ಕರೆತಂದು ಗೋಕುಲಾಷ್ಟಮಿಯನ್ನು ಒಳ್ಳೇ ವಿಜೃಂಭಣೆಯಿಂದ ನೆರವೇರಿಸಿದರು. ಆಗ ದೂರ ದೂರದಿಂದ ಕೂಡ ಸಾಧು ಸಂತರು ಬಂದಿದ್ದರು. ಅವರು ಶ್ರೀಕೃಷ್ಣಲೀಲಾ ಕೀರ್ತನೆಯನ್ನು ಹೇಳಿದರು. ಸಂಕೀರ್ತನೆಯನ್ನು ಕರ್ಣಮಧುರವಾಗಿಯೂ ರಸವತ್ತಾಗಿಯೂ ಭಕ್ತಿಜ್ಞಾನ ವೈರಾಗ್ಯಗಳ ಬೋಧಪ್ರಾಯಕ ರೂಪದಲ್ಲಿಯೂ ಹೇಳಿದರು. ಆಗ ಆ ಜನಾರ್ಧನ ಸ್ವಾಮಿಗಳು ಸಂತುಷ್ಟರಾಗಿ ಆಶೀರ್ವದಿಸಿ ದೇವಗಡಕ್ಕೆ ತೆರಳಿದರು.

ಏಕನಾಥರು ಮಹಾ ಸಹನಶಕ್ತಿ ಸಂಪನ್ನರು. ವೈರಿಗಳನ್ನೂ ಸ್ನೇಹಿತರಂತೆ ಕಾಣುವರು. ಇಂಥವರಿಗೂ ವಿರೋಧಿಗಳು ಹುಟ್ಟಿಕೊಂಡರು. ಆ ವಿರೋಧಿಗಳು ಹೇಗಾದರೂ ಮಾಡಿ ಏಕನಾಥರನ್ನು ಸಿಟ್ಟಿಗೆಬ್ಬಿಸಿ, ದಿನಾಲು ಮೌನವ್ರತದಿಂದ ಗೋದಾವರೀ ಸ್ನಾನ ಮಾಡಿಕೊಂಡು ಬರುವ ಅವರ ವ್ರತ ಭಂಗ ಮಾಡಬೇಕೆಂದು ನಿಶ್ಚಯಿಸಿದರು.

ಒಂದು ಏಕಾದಶಿಯ ದಿನ ಏಕನಾಥರು ಪದ್ಧತಿಯಂತೆ ಗೋದಾವರಿಗೆ ತೆರಳಿ ಸ್ನಾನಾದಿಗಳನ್ನು ತೀರಿಸಿಕೊಂಡು ಬರುತ್ತಿರುವಾಗ, ವಿರೋಧಿ ಜನರ ಪ್ರಚೋದನೆಯಿಂದ ಹುರುಪುಗೊಂಡ ಯುವಕನು ಏಕನಾಥರ ಮೇಲೆ ಉಗುಳಿದನು. ಏಕನಾಥರು ಮರಳಿ ಗೋದಾವರಿಗೆ ತೆರಳಿ ಸ್ನಾನ ಮಾಡಿಕೊಂಡು ಬರಲು ಪುನಃ ಆ ಯುವಕನು ಉಗುಳಿದನು. ಏಕನಾಥರು ಮತ್ತೆ ನದಿಗೆ ತೆರಳಿ ಸ್ನಾನ ಮಾಡಿ ಬಂದರು. ಆಗಲೂ ಆ ಯುವಕನು ಉಗುಳಿದನು. ಹೀಗೆ ನದಿಗೆ ಹೋಗಿ ಸ್ನಾನಮಾಡಿಕೊಂಡು ಬರುವದೂ, ಆ ಯುವಕನು ಅವರ ಮೇಲೆ ಉಗುಳುವದು ಹೀಗೆ ನೂರೆಂಟು ಸಲ ನಡೆದ ನಂತರ ಆ ಯುವಕನೇ ಸೋತು ತನ್ನ ಕೆಟ್ಟ ಕೆಲಸಕ್ಕೆ ತಾನೆ ನಾಚಿಕೊಂಡು ಏಕನಾಥರ ಪಾದಗಳಿಗೆ ಬಿದ್ದು ಪುಣ್ಯಾತ್ಮರೇ ನನ್ನನ್ನು ಕ್ಷಮಿಸಿರಿ ಎಂದು ಬೇಡಿಕೊಂಡನು. ಆಗ ಏಕನಾಥ ಸ್ವಾಮಿಗಳು ಆತನ ಮನೋಪರಿವರ್ತನೆ

ಯನ್ನು ಕಂಡು ಸಂತಸಗೊಂಡು, ನಿನ್ನನ್ನು ಕ್ಷಮಿಸಲು ನೀನು ನನಗೇನು ಅಪಕಾರ ಮಾಡಿದ್ದೀಯಪ್ಪ. ಇಂದು ಏಕಾದಶಿ. ಹರಿದಾಸರ ಪುಣ್ಯದಿನವು. ಇಂಥ ಸುದಿನದಲ್ಲಿ ನಿಮ್ಮ ಉಪಕಾರದಿಂದ ನನಗೆ ನೂರೆಂಟು ಸಲ ಗೋದಾವರಿಯ ಸ್ನಾನದ ಲಾಭವಾಯಿತು. ನಿನ್ನ ದರ್ಶನವಾಗದಿದ್ದರೆ ನಾನು ಇಷ್ಟೊಂದು ಸಲ ಶ್ರದ್ಧೆಯಿಂದ ಸ್ನಾನ ಮಾಡುತ್ತಲೇ ಇರಲಿಲ್ಲ. ಇದೆಲ್ಲವೂ ನಿನ್ನ ಅನುಗ್ರಹವು ಎಂದು ಆತನನ್ನು ಸಂತೈಸಿ ಕಳಿಸಿಕೊಟ್ಟರು. ಸ್ವಾಮಿಗಳು ಪುನಃ ಗೋದಾವರಿಗೆ ತೆರಳಿ ಶುಚಿರ್ಭೂತರಾಗಿ ಸ್ನಾನಾದಿಗಳನ್ನು ತೀರಿಸಿಕೊಂಡು ಬಂದರು.

ಪಂಡರಪುರದ ಸಮೀಪದ ಒಂದು ಊರಲ್ಲಿದ್ದ ಒಬ್ಬ ಶ್ರೀಮಂತನು ಶ್ರೀ ರುಕ್ಮಿಣೀಕೃಷ್ಣರ ಮೂರ್ತಿಗಳನ್ನು ಸಂಗಮವರಿ ಶಿಲೆಯಲ್ಲಿ ಒಳ್ಳೇ ಸುಂದರವಾಗಿ ಮಾಡಿಸಿದ್ದನು. ಅವನು ಅವುಗಳನ್ನು ಯೋಗ್ಯವಾಗಿ ವಿಧಿಯುಕ್ತ ವಿಧಾನಗಳಿಂದ ಪೂಜಿಸತಕ್ಕ ಭಕ್ತರಿಗೆ ಕೊಡಬೇಕೆಂದು ನಿಶ್ಚಯಿಸಿದ್ದನು. ಇಂತಿರಲು ಒಂದುದಿನ ಆತನ ಸ್ವಪ್ನದಲ್ಲಿ ಶ್ರೀವಿಠ್ಠಲನು ಭಕ್ತಾ! ನಿನ್ನ ಅಭೀಷ್ಟೆಗೆ ತಕ್ಕ ಭಕ್ತನು ಪೈಠಣದಲ್ಲಿ ಏಕನಾಥನೆಂಬುವನು ಇರುವನು. ಅವನಿಗೆ ನಿನ್ನ ಮೂರ್ತಿಗಳನ್ನು ಸಲ್ಲಿಸಿ ಕೃತಾರ್ಥನಾಗು ಎಂದು ಆಜ್ಞೆ ಮಾಡಿದನು. ಕೂಡಲೇ ಶ್ರೀಮಂತನು ಎಚ್ಚತ್ತು ಕನಸಿನ ವೃತ್ತಾಂತವನ್ನು ನೆನೆಸಿಕೊಂಡು ತನ್ನ ಇಷ್ಟಬಂಧುಮಿತ್ರರಿಗೆ ಆ ವಿಚಾರವನ್ನು ತಿಳಿಸಿ ಬೇಕಾದ ಸೌಕರ್ಯಗಳನ್ನು ಸಿದ್ಧಪಡಿಸಿಕೊಂಡು ಪೈಠಣಕ್ಕೆ ತೆರಳಿ ಏಕನಾಥ ಸ್ವಾಮಿಗಳನ್ನು ಸಂದರ್ಶಿಸಿ ಕನಸಿನ ವೃತ್ತಾಂತವನ್ನು ಅವರಿಗೆ ತಿಳಿಸಿ ಮೂರ್ತಿಗಳನ್ನು ಒಪ್ಪಿಸಿದನು. ಮತ್ತು ಏಕನಾಥರ ಮನೆಯಲ್ಲಿಯ ದೇವತಾಲಯವನ್ನು ತನ್ನ ಸ್ವಂತ ಹಣದಿಂದ ವಿಸ್ತಾರವಾಗಿಯೂ ಸುಂದರವಾಗಿಯೂ ಭಜನೆ ಕೀರ್ತನೆಗಳಿಗೆ ಅನುಕೂಲವಾಗುವಂತೆ ಕಟ್ಟಿಸಿ ಅಲ್ಲಿಯೇ ಮೂರ್ತಿಗಳನ್ನು ಪ್ರತಿಷ್ಠಿಸಿ ಅಲ್ಲಿಯೇ ಕೆಲ ದಿನಗಳನ್ನು ಸ್ವಾಮಿಗಳ ಅಮೃತವಾಣಿಯಿಂದ ಸಂಕೀರ್ತನೆ ಹರಿ ಕೀರ್ತನೆಗಳನ್ನು ಕೇಳುತ್ತಲೇ ಶ್ರೀ ವಿಠ್ಠಲನಲ್ಲಿ ಮನಸ್ಸು ಲೀನಮಾಡಿ ಸ್ವಾಮಿಗಳ ಶಿಷ್ಯನಾಗಿ ಗುರುಗಳ ಅಪ್ಪಣೆ ಪಡೆದು ಸ್ವಗ್ರಾಮಕ್ಕೆ ತೆರಳಿದನು.

ಏಕನಾಥರ ಭಕ್ತಿಭಾವಗಳಿಗೆ ಮೆಚ್ಚಿದವನಾಗಿಯೂ ಆತನ ಸಂಕೀರ್ತನೆ ಹರಿಕೀರ್ತನೆಗಳನ್ನು ಆತನ ಮಧುರವಾಣಿಯಿಂದ ಕೇಳಬೇಕೆಂತಲೂ

ನಿಶ್ಚಯಿಸಿ ಪೈಠಣಕ್ಕೆ ತೆರಳಿ ಶ್ರೀಖಂಡ ಬ್ರಾಹ್ಮಣನೆಂಬ ಹೆಸರನ್ನಿಟ್ಟುಕೊಂಡು ನೀರು ಹೊರುವದು, ಬಟ್ಟೆಗಳನ್ನು ಒಗೆಯುವದು, ಹೂವು ತರುವದು, ಕಟ್ಟಿಗೆ ಒಡೆಯುವದು. ಮೊದಲಾದ ಎಲ್ಲ ಕೆಲಸವನ್ನು ಏಕನಾಥರ ಇಷ್ಟಾನುಸಾರ ಮಾಡುತ್ತ ತನ್ನ ನಿಜರೂಪವನ್ನು ತೋರ್ಪಡಿಸದೆ ಇರುತ್ತಿದ್ದನು.

ನಾಥರ ಮನೆಯಲ್ಲಿ ಪಿತೃಶ್ರಾದ್ಧದ ದಿನ ಒದಗಿ ಬಂದಿತು. ಆ ದಿನಕ್ಕೆ ಬೇಕಾದ ಸಲಕರಣೆಗಳನ್ನು ಸಿದ್ಧಪಡಿಸಿಕೊಂಡು ಊರಲ್ಲಿಯ ಬ್ರಾಹ್ಮಣರಿಗೆ ಊಟಕ್ಕೆ ಹೇಳಿ ಗಿರಿಜಾಬಾಯಿಗೆ ಅಡಿಗೆ ಮಾಡಲು ತಿಳಿಸಿದರು. ಗಿರಿಜಾಬಾಯಿಯು ಪಕ್ವಾನ್ನ ತಯಾರಿಸುತ್ತಿದ್ದಾಗ ಹೊರಟ ಸುವಾಸನೆಯನ್ನು ನಾಥನ ಮನೆಯ ಬಳಿಯಲ್ಲಿ ಹಾದು ಹೋಗುತ್ತಿದ್ದ ಕೆಲ ಜನ ಚಾಂಡಾಲರು ಆಘ್ರಾಣಿಸಿ ಅವರೆಲ್ಲರೂ ಅಲ್ಲಿಯೇ ನಿಂತು ಆಹಾ ! ಇಂಥ ಭೋಜನವನ್ನು ನಾವೆಂದಿಗೂ ಮಾಡಿಲ್ಲ. ನಮ್ಮಂಥ ಅಭ್ಯಾಗತರಿಗೆ ಇಂಥ ಮೃಷ್ಟಾನ್ನಗಳು ಸಿಗುವದಾದರು ಹೇಗೆ ? ಮತ್ತು ಎಂದಿಗೆ ? ಎಂದು ತಮ್ಮತಮ್ಮಲ್ಲಿ ಮಾತನಾಡುತ್ತಿರುವಾಗ ಅವರನ್ನು ಕಂಡು ಕೇಳಿದ ಏಕನಾಥರು ಅವರಲ್ಲಿ ಕನಿಕರಪಟ್ಟರಲ್ಲದೆ ಅವರು ಆಘ್ರಾಣಿಸಿದ ಅಡಿಗೆಯನ್ನು ಬ್ರಾಹ್ಮಣರಿಗೆ ಬಡಿಸಬಾರದೆಂದೆಣಿಸಿ ಆ ಚಾಂಡಾಲರನ್ನು ಕರೆತಂದು ಮನೆಯ ಅಂಗಳದಲ್ಲಿ ಕೂಡ್ರಿಸಿ ಗಿರಿಜಾಬಾಯಿಗೆ ನಡೆದ ಸಮಾಚಾರವನ್ನು ತಿಳಿಸಿ ಅವರೆಲ್ಲರಿಗೂ ಎಲೆಗಳನ್ನು ಹಾಕಿ ಬಡಿಸೆಂದು ಹೇಳಲು ಆ ಸಾಧ್ವಿಯು ಪತಿಯ ಆಜ್ಞೆಯಂತೆ ಮರುಮಾತನಾಡದೆ ತಯಾರಿಸಿದ ಎಲ್ಲ ಅನ್ನವನ್ನೂ ಆ ಚಾಂಡಾಲರಿಗೆ ಊಟಕ್ಕೆ ಬಡಿಸಿದಳು. ಅವರು ಊಟಮಾಡಿ ಸಂತುಷ್ಟರಾದ ನಂತರ ಅವರಿಗೆ ತಾಂಬೂಲ ಕೊಡುತ್ತ ''ಸರ್ವ ಜಗದ್ವ್ಯಾಪಕನಾದ ವಿಷ್ಣುವಿಗೆ ಅರ್ಪಿತವಾಗಲಿ'' ಎಂದು ಉಚ್ಚರಿಸಿದನು. ಇದನ್ನು ಕಂಡು ಶ್ರೀಖಂಡಬ್ರಾಹ್ಮಣನು ತನಗೆ ಬಹಳ ಸಂತೋಷವಾಯಿತೆಂದು ನಾಥರಿಗೆ ಹೇಳಿದನು.

ಬಳಿಕ ಗಿರಿಜಾಬಾಯಿಯು ಮನೆಯನ್ನು ಗೋಮಯಾದಿಗಳಿಂದ ಶುದ್ಧಪಡಿಸಿ, ಅಡಿಗೆ ಪಾತ್ರೆಗಳನ್ನೆಲ್ಲ ಗೋದಾವರಿಗೆ ಒಯ್ದು ಶುದ್ಧಪಡಿಸಿ ಸ್ನಾನಮಾಡಿ ಮನೆಗೆ ಬಂದು ಹೊಸತಾಗಿ ಎಲ್ಲ ಅಡಿಗೆಗಳನ್ನೂ ಸಿದ್ಧ

ಮಾಡಿದಳು' ಏಕನಾಥರು ಆಮಂತ್ರಿತ ಬ್ರಾಹ್ಮಣರನ್ನು ಕರೆಕಳುಹಿದರು. ಅಷ್ಟರಲ್ಲಿ ಶ್ರಾದ್ಧಾನ್ನವನ್ನು ಚಾಂಡಾಲರಿಗೆ ಸಮರ್ಪಿಸಿದರು ಎಂಬ ಸುದ್ದಿ ಊರಲ್ಲಿ ಹರಡಿ ಆಮಂತ್ರಿತ ಬ್ರಾಹ್ಮಣರು ಸಿಡಿಮಿಡಿಗೊಂಡಿದ್ದರು. ಕರೆಯಲು ಹೋದದ್ದೇ ತಡ. ಒಂದೇ ಸವನೆ ಬಯ್ಯತೊಡಗಿದರು. ಶ್ರಾದ್ಧಾನ್ನವನ್ನು ಚಾಂಡಾಲರಿಗೆ ನೀಡಿದ ನಿನ್ನಂಥ ಮಹಾ ಚಾಂಡಾಲರು ಮತ್ತಾರೂ ಇಲ್ಲ. ನಿನ್ನ ಮನೆಗೆ ಒಬ್ಬ ಬ್ರಾಹ್ಮಣನೂ ಕೂಡ ಬರಲಾರರು ಎಂದು ಖಂಡಿತವಾಗಿ ಹೇಳಿಬಿಟ್ಟರು. ಆಗ ಏಕನಾಥರು ಶಾಂತಚಿತ್ತದಿಂದ ಸ್ವಾಮಿಗಳಿರಾ ! ಕೇಳಿರಿ. ಇದರಲ್ಲಿ ನನ್ನ ದೋಷವಾದರೂ ಏನಿದೆ ? ತಯಾರಾಗುತ್ತಿದ್ದ ಅಡಿಗೆಯ ವಾಸನೆಯನ್ನು ಆ ಜನರು ಅಘ್ರಾಣಿಸಿದ್ದರಿಂದ ಅದು ಎಂಜಲವಾಯಿತೆಂದು ತಿಳಿದು ಅದನ್ನು ಅವರಿಗೆ ಬಡಿಸಿ, ಪುನಃ ಹೊಸದಾಗಿ ಪಾತ್ರೆಗಳನ್ನೂ ಮನೆಯನ್ನೂ ಶುದ್ಧಮಾಡಿ ಅಡಿಗೆ ಮಾಡಿಸಿದೆನು. ಇದು ನನ್ನ ತಪ್ಪೆ ? ಎನ್ನಲು ಬ್ರಾಹ್ಮಣರು ತುಂಬಿದ ಕೋಪದಿಂದ ಹೋಗೋ-ಹೋಗು. ದೂರಸರಿದು ಹೋಗು. ಸುಮ್ಮನೆ ಬಡಿಸಿಕೊಂಡೀಯೆಂದು ಗದ್ದರಿಸಿಯೇ ಬಿಟ್ಟರು. ಆಗ ಶ್ರೀಖಂಡ ಬ್ರಾಹ್ಮಣನು ಸ್ವಾಮಿ ! ಇವರೊಂದಿಗೆ ಮಾತನಾಡಿ ಪ್ರಯೋಜನವಿಲ್ಲವೆಂದ ಮೇಲೆ ವ್ಯರ್ಥಕಾಲಹರಣವನ್ನೇಕೆ ಇಲ್ಲಿ ಮಾಡಬೇಕು? ಸತ್ಯಕ್ಕಂತೂ ಸಾವಿಲ್ಲ. ಬನ್ನಿರಿ ಹೋಗೋಣವೆಂದು ಏಕನಾಥರನ್ನು ಕರೆದೊಯ್ದನು. ಆಗ ಏಕನಾಥರು ಮುಂದೇನು ಮಾಡಬೇಕೆಂದು ಯೋಚಿಸುತ್ತಿರಲು ಶ್ರೀಖಂಡ ಬ್ರಾಹ್ಮಣನು ಏನು ಯೋಚಿಸುತ್ತಿರುವಿರಿ ? ಪಿತೃಸ್ಥಾನದಲ್ಲಿಯೂ ವಿಷ್ಣುಸ್ಥಾನದಲ್ಲಿಯೂ ಎಲೆಗಳನ್ನು ಹಾಕಿಸಿ ಪದಾರ್ಥಗಳನ್ನು ಬಡಿಸಿದರೆ ನಿಮ್ಮ ಪಿತೃ, ಪಿತಾಮಹ ಪ್ರಪಿತಾಮಹರೇ ಸ್ವಯಂವಾಗಿ ಬಂದು ಶ್ರಾದ್ಧಾನ್ನವನ್ನು ಸೇವಿಸುವರು. ಇದರಲ್ಲಿ ಸಂಶಯವಿಲ್ಲೆನ್ನಲು ಸ್ವತಃ ಪ್ರಜ್ಞಾನಿಧಿಗಳಾಗಿದ್ದ ಏಕನಾಥರು ಆತನ ಮಾತಿಗೆ ಒಪ್ಪಿ ಶ್ರಾದ್ಧಕ್ಕಾರಂಭಿಸಲು ಶ್ರೀಖಂಡ ಬ್ರಾಹ್ಮಣನು ಶ್ರಾದ್ಧವನ್ನು ಮಾಡಿಸತಕ್ಕ ಪುರೋಹಿತನಾಗಿಯೂ ಪರಿಚಾರಕನಾಗಿಯೂ ಕೆಲಸ ಮಾಡಿದನಲ್ಲದೆ ಪಿತೃಗಳ ಎಲೆಯಲ್ಲಿ ಪದಾರ್ಥಗಳನ್ನು ಬಡಿಸಲು ಸಿದ್ಧಪಡಿಸಿ ಕೈಯಲ್ಲಿ ದರ್ಭೆಗಳನ್ನು ಹಿಡಿದು ಪಿತೃಗಳನ್ನು ಆಹ್ವಾನಿಸಿರೆಂದು ಏಕನಾಥರಿಗೆ ಹೇಳುತ್ತಲೆ, ಏಕನಾಥರು ಪಿತೃಗಳನ್ನು ಆಹ್ವಾನಿಸಿ ದರ್ಭೆಗಳನ್ನು ಮೇಲಕ್ಕೆರಚುತ್ತಲೆ

ತಂದೆಯ ಅಜ್ಜರು ದಿವ್ಯ ವಿಮಾನದಲ್ಲಿ ಕುಳಿತು ಆಕಾಶದಿಂದಿಳಿದು ನಾಥರ ಮನೆಗೆ ಬಂದು ತಮ್ಮ ತಮ್ಮ ಸ್ಥಳದಲ್ಲಿ ಕುಳಿತು ಪ್ರತ್ಯಕ್ಷವಾಗಿ ಊಟ ಮಾಡಿದರು. ಏಕನಾಥರು ಆ ಮೂವರಿಗೂ ತಾಂಬೂಲವನ್ನು ಕೊಟ್ಟು ನಮಸ್ಕರಿಸಿದರು. ಏಕನಾಥ ನೀನು ಧನ್ಯನು. ನಾವು ಸಂತುಷ್ಟರಾದೆವು. ಶ್ರೀಖಂಡನು ನಿನಗೆ ನಿರುಪಾಧಿಕನಾದ ಸಾರ್ವಕಾಲಿಕ ಬಂಧುವು ಎಂದು ಹೇಳಿ ವಿಮಾನಾರೂಢರಾಗಿ ಆಕಾಶ ಮಾರ್ಗವಾಗಿ ತೆರಳಿದರು. ಬಳಿಕ ಏಕ ನಾಥ ಶ್ರೀಖಂಡ ಬ್ರಾಹ್ಮಣರಿಗೆ ಎಲೆಗಳನ್ನು ಹಾಕಿ ಗಿರಿಜಾಬಾಯಿ ಬಡಿಸಿ ದಳು. ಅವರಿಬ್ಬರೂ ಭುಂಜಿಸಿ ಸಂತುಷ್ಟರಾದರು.

ಆ ಸಮಯದಲ್ಲಿ ಕೆಲವು ಜನ ಬ್ರಾಹ್ಮಣರು ಆಕಾಶ ಮಾರ್ಗವಾಗಿ ವಿಮಾನದಲ್ಲಿ ಕುಳಿತು, ಏಕನಾಥರ ಪಿತೃದೇವತೆಗಳು ಬಂದುದನ್ನು ಪ್ರತ್ಯಕ್ಷ ವಾಗಿ ಕಂಡು ಪುರೋಹಿತರಿಗೂ ಊರ ಬ್ರಾಹ್ಮಣರಿಗೂ ಹೇಳಲು ಅವರು ಏಕ ನಾಥರ ಮನೆಯ ಸುತ್ತಲೂ ಮರೆಗೆ ನಿಂತು ಪುನಃ ಏಕನಾಥರ ಪಿತೃಗಳು ಅವರ ವಿಮಾನದಲ್ಲಿ ಕುಳಿತುಹೋದುದನ್ನು ಪ್ರತ್ಯಕ್ಷವಾಗಿ ಕಂಡು ಏಕನಾಥ ರಲ್ಲಿ ಭಯಭಕ್ತಿಯುಳ್ಳವರಾಗಿ ಏಕನಾಥರ ಬಳಿಗೆ ಬಂದು ಸ್ವಾಮೀ ! ತಾವು ಅಸಾಧಾರಣಪುರುಷರು. ತಮ್ಮ ಹಿರಿಮೆಯನ್ನರಿಯದೇ ನಾವು ಮಾಡಿದ ತಪ್ಪನ್ನು ಕ್ಷಮಿಸಿರಿ ಎಂದು ಬೇಡಿಕೊಂಡರು. ಆಗ ನಾಥರು ಮಹನೀಯರೇ, ತಾವು ಅದಾವ ತಪ್ಪು ಮಾಡಿರುವಿರಿ? ತಮ್ಮ ಕೃಪೆಯಿಂದ ಪಿತೃದೇವತೆಗಳನ್ನು ಪ್ರತ್ಯಕ್ಷವಾಗಿ ಕಂಡುದುದಲ್ಲದೆ ತಮ್ಮ ಶ್ರಾದ್ಧಾನ್ನವನ್ನು ಅವರೇ ಸ್ವತಃ ಊಟ ಮಾಡುವ ಸೌಭಾಗ್ಯವು ಶ್ರೀಖಂಡನ ಸಹಾಯದಿಂದ ದೊರೆಯಿತು. ಎಂದು ಹೇಳಲು, ಆ ಬ್ರಾಹ್ಮಣರು ತಾವು ಅದೆಷ್ಟೋ ಬೈಗಳನ್ನು ಆಡಿದರೂ ದೂಷಿಸಿ ದರೂ ನೀವು ಯಾವ ತಪ್ಪು ಮಾಡಿಲ್ಲವೆಂದೂ ನಿಮ್ಮ ಕೃಪೆಯಿಂದ ನನ್ನ ಪಿತೃ ದೇವತೆಗಳ ಆಗಮನವನ್ನು ಕಂಡೆನೆಂದೂ ಅನ್ನುವಿರಲ್ಲ ಎಂತಹ ಸಹನಶೀಲ ನಪ್ಪ ಎಂಥ ಮಹನೀಯನಪ್ಪ! ಅಪಕಾರ ಮಾಡಿದವರಿಗೂ ಉಪಕಾರವನ್ನೇ ಮಾಡುವನಲ್ಲಾ ! ಎಂದು ತಮ್ಮತಮ್ಮಲ್ಲೇ ಮಾತನಾಡುತ್ತಲೂ ಇವನೊಬ್ಬ ಅವತಾರಿ ಪುರುಷನೆಂತಲೂ ಭಾವಿಸಿ ಹೊಗಳುತ್ತ ಹೋದರು.

ಏಕನಾಥರು ಪಂಡರೀಪುರ ಯಾತ್ರೆಗಾಗಿ ಹೊರಡಲು ತಯಾರಾದರು. ಈ ಸಮಾಚಾರವನ್ನು ಕೇಳಿ ಅನೇಕ ಜನ ಅವರನ್ನು ಹಿಂಬಾಲಿಸಿದರು.

ಆಗಿನ ಅವರ ದೇಶಾಟನವು ಅತೀ ವೈಭವಪೂರಿತವಾಗಿದ್ದಿತು. ಈ ರೀತಿಯಲ್ಲಿ ಅವರು ಪ್ರಯಾಣಮಾಡುತ್ತ ಚಂದ್ರಭಾಗಾ ನದಿತೀರಕ್ಕೆ ಬಂದು ಅಲ್ಲಿ ಸ್ನಾನಾದಿಗಳನ್ನು ತೀರಿಸಿಕೊಂಡು ಪಂಢರಪುರಕ್ಕೆ ತೆರಳಿ ಪಾಂಡುರಂಗನನ್ನು ಸೇವಿಸಿ ಅಲ್ಲಿ ಕೆಲದಿನಗಳಿದ್ದು ಸಂಕೀರ್ತನಾದಿಗಳನ್ನು ನಡೆಸಿದರು. ಇವರ ಸಂಕೀರ್ತನೆಯನ್ನು ಸುತ್ತಮುತ್ತಲಿನ ಹಳ್ಳಿಗರು ಕೂಡ ಬಂದುಕೇಳಿ ಸಂತೋಷಗೊಂಡು ಹೋಗುತ್ತಿದ್ದರು. ಇಂತು ವಿಠ್ಠಲನನ್ನು ಸೇವಿಸಿಕೊಂಡು ಅಲ್ಲಿಂದ ತೆರಳಿದರು.

ಏಕನಾಥರು ಪ್ರಯಾಣ ಮಾಡುತ್ತ ಆಳಂದಿಗೆ ಬಂದು ಅಲ್ಲಿ ವಸ್ತಿ ಮಾಡಿದರು. ಅಂದು ಏಕನಾಥರ ಸ್ವಪ್ನದಲ್ಲಿ ಜ್ಞಾನೇಶ್ವರ ಕಾಣಿಸಿಕೊಂಡು ತಮ್ಮ ಸಮಾಧಿಯ ಮೇಲೆ ಬೆಳೆದಿದ್ದ ಗಿಡಗಳನ್ನು ಕಿತ್ತುಹಾಕಿ ಸಮಾಧಿಯೊಳಕ್ಕೆ ಬರಬೇಕೆಂದು ಆಜ್ಞೆಯಾದ ಕಾರಣ ಏಕನಾಥರು ಆಳಂದಿಯಲ್ಲಿ ಕೆಲದಿನಗಳ ವರೆಗೆ ಸಮಾಧಿಯ ಮೇಲಿನ ಗಿಡಗಳನ್ನು ಕಿಳಿಸಿ ತಾವೊಬ್ಬರೇ ಸಮಾಧಿಯ ಒಳಕ್ಕೆ ಹೋದರು. ಅಲ್ಲಿ ಪದ್ಮಾಸನಾರೂಢರಾಗಿ ಕುಳಿತಿದ್ದ ಜ್ಞಾನೇಶ್ವರರ ದರ್ಶನಪಡೆದರು. ಮತ್ತು ಅವರಿಂದ ಭಕ್ತಿಜ್ಞಾನ ಯೋಗಗಳ ಬಗ್ಗೆ ಹಲವು ರಹಸ್ಯಗಳನ್ನು ಸಂಪಾದಿಸಿಕೊಂಡು ಬಳಿಕ ಅವರಿಂದ ಆಶೀರ್ವಾದ ಪಡೆದು ಹೊರಬಂದು ಸಮಾಧಿಯನ್ನು ಪೂಜಿಸಿ ಅನ್ನಸಂತರ್ಪಣೆ ಸಂಕೀರ್ತನೆಗಳನ್ನು ನಡೆಸಿದರು. ಆ ಪದ್ಧತಿಯು ಪ್ರತಿವರ್ಷವೂ ಅಂದಿನಿಂದ ನಡೆಯುತ್ತ ಬಂದಿದೆ.

ಏಕನಾಥರು ಅಲ್ಲಿಂದ ತೆರಳಿ ಅನೇಕ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ ಮರಳಿ ಪೈಠಣಕ್ಕೆ ಬಂದು ತೀರ್ಥಯಾತ್ರೆಯನ್ನು ಮಾಡಿ ಬಂದನಿಮಿತ್ತವಾಗಿ ಅನ್ನಸಂತರ್ಪಣೆಯನ್ನು ಮಾಡಿ ಬಳಿಕ ಗ್ರಂಥರಚನೆಗೆ ಆರಂಭ ಮಾಡಿ ತಮ್ಮ ಮಹೋನ್ನತ ಶೈಲಿಯಿಂದ ಅನೇಕ ಗ್ರಂಥಗಳನ್ನು ರಚಿಸಿದರು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಜ್ಞಾನೇಶ್ವರೀ ತಾತ್ಪರ್ಯ ಚತುಶ್ಲೋಕ ಭಾಗವತಗಳು. ಇವುಗಳನ್ನು ಇಂದಿಗೂ ಅನೇಕ ಜನರು ಪಾಠ ಪಠಣೆಗಳಿಗಿಟ್ಟುಕೊಂಡು ಭಕ್ತಿಯೋಗವನ್ನು ಬಿಡದೆ ಪರಂಧಾಮನ ಕೃಪೆಗೆ ಪಾತ್ರರಾಗಿ ಪರಮಾರ್ಥವನ್ನು ಪಡೆಯುವರು. ಈ ಪ್ರಕಾರ ಏಕನಾಥರು ಮಹಾ ಸದ್ಭಕ್ತ ಸಂಪನ್ನರಾಗಿ ಪರಂಧಾಮನ ಸನ್ನಿಧಿಯನ್ನು ಸೇರಿದರು.

# ೨೪. ಸಂತ ಜಯದೇವ

ಜಗನ್ನಾಥ ಕ್ಷೇತ್ರಕ್ಕೆ ಸಮೀಪದಲ್ಲಿದ್ದ ಒಂದು ಹಳ್ಳಿಯಲ್ಲಿ ಜನಿಸಿದ ಜಯದೇವನು ಬಾಲ್ಯದಲ್ಲಿ ಸರ್ವವಿದ್ಯಾಭ್ಯಾಸಂಗ ಮಾಡಿ ತಾರುಣ್ಯಾವಸ್ಥೆಗೆ ಬರುವದರೊಳಗಾಗಿ ಅವನ ತಂದೆ ತಾಯಿಗಳು ವೈಕುಂಠವಾಸಿಗಳಾದರು. ಅಂದಿನಿಂದ ಜಯದೇವನು ಏಕಾಂಗಿಯಾಗಿ ಈ ಭವಪ್ರಪಂಚದಲ್ಲಿ ಕಾಲಿಡ ಬೇಕಾಯಿತು. ಚಿಕ್ಕಂದಿನಿಂದಲೂ ಸಂಗೀತದ ಕಡೆಗೆ ಹೆಚ್ಚು ಒಲವಿದ್ದುದ ರಿಂದ ಜಗನ್ನಾಥ ಕ್ಷೇತ್ರಕ್ಕೆ ಬರುತ್ತಿದ್ದ ಭಕ್ತರ ಭಕ್ತಿಸೂತ್ರಗಳನ್ನು ಕೇಳಿ, ಮನನ ಮಾಡಿಕೊಂಡು ತನ್ನ ಮನೋಹರ ಕಂಠದಿಂದ ರಾಗರಸಭರಿತವಾಗಿ ಅನ್ನತೊಡಗಿದನು. ಇವನ ಪದ್ಯಗಳನ್ನು ಕೇಳಿದ ಅನೇಕ ಪಂಡಿತರು ಇವ ನೊಬ್ಬ ಮಹಾಪುರುಷನಾಗುವನೆಂದನ್ನತೊಡಗಿದರು. ಹೀಗೆ ಭಕ್ತಿ ಸ್ತೋತ್ರ ಗಳನ್ನು ಹಾಡುತ್ತಿದ್ದ ಹಾಗೆ ಅವನಲ್ಲಿ ಭಕ್ತಿಭಾವನೆ ಬೆಳೆದು ಮರವಾಯಿತು. ಈ ಭಕ್ತಿಭಾವನೆಯ ಪ್ರಭಾವದಿಂದ ಶ್ರೀಕೃಷ್ಣ ಗುಣಗಾನದಲ್ಲಾಸಕ್ತನಾಗಿ, ಅತೀ ರಮಣೀಯವಾದ " ಗೀತ ಗೋವಿಂದ "ವೆಂಬ ಗೀತಾ ಪ್ರಬಂಧವನ್ನು ರಚಿಸಿ ತನ್ನ ಮಧುರಕಂಠದಿಂದ ರಾಗರಸಭರಿತವಾದ ಸಂಕೀರ್ತನ ರೂಪ ದಿಂದ ಶ್ರೀ ಜಗನ್ನಾಥಸ್ವಾಮಿಯ ಸ್ತೋತ್ರ ಮಾಡತೊಡಗಿದನು.

ಆ ದೇಶದ ರಾಜನಾದ ಸಾತ್ವಿಕನು ಜಯದೇವರ "ಗೀತಗೋವಿಂದ" ವನ್ನು ಕೇಳಿ ಅದರಂತೆ ತಾನೂ ಒಂದು ಗ್ರಂಥ ರಚಿಸಿ ಅದರ ಮಹಿಮೆ ಯನ್ನೇ ಎಲ್ಲರೂ ಒಪ್ಪಿಕೊಂಡು ಅದನ್ನೇ ಪಠಿಸಬೇಕೆಂದು ಪ್ರಜೆಗಳಿಗೆ ಕಟ್ಟಾಜ್ಞೆ ಮಾಡಿದನಲ್ಲದೆ ಹಲವು ಬಗೆಯಿಂದ ಜಯದೇವರನ್ನು ನಿಂದಿಸ ತೊಡಗಿದನು. ಮಹಾನುಭಾವನೂ, ಸಾತ್ವಿಕನೂ ಆದ ಜಯದೇವನು ನಿಂದೆಗಳಿಗೆ ಮನಗೊಡದೆ ತನ್ನ ಸಂಕೀರ್ತನೆಯನ್ನು ಮುಂದುವರಿಸಿದನು. ಪ್ರಜೆಗಳಾದರೂ ರಾಜನ ಪ್ರಬಂಧವನ್ನು ಕೇಳುವವರೇ ಇಲ್ಲವಾದರು. ಇದರಿಂದ ರಾಜ್ಯದಲ್ಲಿ ಕ್ಷೋಭೆ ಏಳುವದೆಂದು ಮನಗಂಡ ಅನೇಕ ಜನ ಪಂಡಿತರು ಒಂದು ಸಭೆಗೂಡಿ ಜಯದೇವರ " ಗೀತಗೋವಿಂದ "ವೆಂಬ ಪ್ರಬಂಧದಿಂದ ರಾಜಪ್ರಜರಲ್ಲಿ ಬೆಳೆಯುತ್ತಿರುವ ವೈಮನಸ್ಸು ವಿರೋಧ

ಭಾವಗಳೆಂಬ ವಿಷ ಬೀಜಗಳನ್ನು ಹೇಗಾದರೂ ಮಾಡಿ ಕಿತ್ತೊಗೆಯ ಬೇಕೆಂದು ನಿರ್ಧರಿಸಿ ರಾಜನನ್ನು ಕಂಡು- ರಾಜೇಂದ್ರಾ, ಜಯದೇವರ ಗ್ರಂಥವು ಸರಳ ಶೈಲಿಯ ವಚನ ರಚನೆಯಲ್ಲಿರುವದರಿಂದ ಪ್ರಜೆಗಳದನ್ನೇ ಪ್ರೀತಿಯಿಂದೋದುತ್ತಿರುವರು. ತಮ್ಮ ಗ್ರಂಥದ ಶೈಲಿಯು ಕಠಿಣವಿದ್ದು ರಸಭರಿತವಿಲ್ಲದ್ದರಿಂದ ಜನಾನುರಾಗವನ್ನು ಪಡೆಯಲಾರದೆಂದು ಸ್ಪಷ್ಟವಾಗಿ ಹೇಳಿದರು. ರಾಜೇಂದ್ರನು ಪಂಡಿತರ ಮಾತುಗಳನ್ನು ಕೇಳಿ ಕೋಪಗೊಂಡು ಪಂಡಿತರೇ ನೀವನ್ನುವದನ್ನು ಹೇಗೆ ನಂಬಲಿ. ಯಾವ ಗ್ರಂಥ ಉತ್ತಮ ಎಂಬ ನಿರ್ಣಯವಾಗಬೇಕು. ಅಲ್ಲಿಯವರೆಗೆ ನನ್ನ ಮನಸ್ಸು ಸಮಾಧಾನವಾಗಲಾರದು. ಇದರ ಬಗ್ಗೆ ಉಪಾಯವನ್ನು ನೀವೇ ಹುಡುಕಿರೆಂದು ಹೇಳಿ ಸುಮ್ಮನಾದನು. ಆಗೋರ್ವ ಪಂಡಿತನು ಎದ್ದು ನಿಂತು- ರಾಜೇಂದ್ರನೇ ಎರಡೂ ಗ್ರಂಥಗಳನ್ನೂ ಜಗನ್ನಾಥನ ಸನ್ನಿಧಿಯಲ್ಲಿಟ್ಟು ಬಿಡೋಣ. ಆ ಭಗವಂತನಿಗೆ ಯಾವುದು ಸ್ವೀಕೃತವಾಗುವದೋ ಅದನ್ನೇ ಎಲ್ಲರೂ ಪಠಿಸತಕ್ಕದ್ದೆಂದು ಹೇಳಲು ಎಲ್ಲ ಪಂಡಿತರೂ ರಾಜೇಂದ್ರನೂ ಸಹ ಅದಕ್ಕೆ ಒಪ್ಪಿಕೊಂಡರು. ಅಂದೇ ರಾತ್ರಿ ಪೂಜಾ ನಂತರ ಜಗನ್ನಾಥನ ಸನ್ನಿಧಿಯಲ್ಲಿಟ್ಟು ಬಾಗಿಲುಗಳನ್ನು ಹಾಕಿ ಬೀಗ ಮುದ್ರೆಗಳಿಂದ ಭದ್ರಪಡಿಸಿ ಬಂದರು. ಮರುದಿನ ಬೆಳಗಿನ ಜಾವಕ್ಕೆ ರಾಜಸಹಿತ ಪಂಡಿತರೆಲ್ಲರೂ ಕೂಡಿಕೊಂಡು ದೇವಾಲಯಕ್ಕೆ ಹೋಗಿ ನೋಡಲಾಗಿ, ರಾಜನ ಗ್ರಂಥವು ಭಗವಂತನಿಂದ ತಿರಸ್ಕೃತವಾಗಿ ಬಾಗಿಲ ಬಳಿ ಬಂದು ಬಿದ್ದಿದ್ದಿತು. ಜಯದೇವರ ಗ್ರಂಥವು ಭಗವಂತನಿಂದ ಸ್ವೀಕೃತವಾಗಿ ಅವನ ದಿವ್ಯ ಸನ್ನಿಧಿಯಲ್ಲಿ ವಿರಾಜಿಸುತ್ತಿದ್ದಿತು. ಆಗ ರಾಜನು ದುರಭಿಮಾನವನ್ನು ಬಿಟ್ಟು ಜಯದೇವನಲ್ಲಿಗೆ ಧಾವಿಸಿ ಬಂದು— ಜಯದೇವ ನೀನು ಅಸಾಮಾನ್ಯ ವ್ಯಕ್ತಿಯಪ್ಪ. ನಿನ್ನೊಡನೆ ದ್ವೇಷಕಟ್ಟಿಕೊಂಡ ನನ್ನನ್ನು ಕ್ಷಮಿಸು ಎಂದು ಕೈ ಮುಗಿದು ಬೇಡಿಕೊಂಡನು. ರಾಜೇಂದ್ರನಲ್ಲಾದ ಪರಿವರ್ತನೆ ಕಂಡು ಸಂತೋಷದಿಂದ ಜಯದೇವನು —

ರಾಜೇಂದ್ರಾ! ನೀನದಾವ ದ್ವೇಷಭಾವನೆಯನ್ನು ನನ್ನೊಡನೆ ಬೆಳೆಸಿದ್ದೀ ! ಅಂಥ ಕಾರಣವಾದರೂ ಏನಿರುವದು ? ನೀನು ಬರೆದ ಗ್ರಂಥವೆಂದು ನಿನ್ನ ಭಾವನೆಯೇ ? ಅದು ಮಹತ್ಕಾರ್ಯ ಸಾಧನ ಶಕ್ತಿಯ ಸಂಗ್ರಹವೇ

ಹೊರತು ಅನ್ಯವಲ್ಲ. ನನ್ನ ಉದ್ಧಾರಕ್ಕಾಗಿಯೇ ನೀನು ಗ್ರಂಥ ರಚಿಸುವ ಶ್ರಮ ವಹಿಸಿಕೊಂಡಿ. ನಿನು ಆ ಗ್ರಂಥ ರಚಿಸಿರದಿದ್ದರೆ ನನ್ನ ಗ್ರಂಥದ ಹಿರಿಮೆ ಗೊತ್ತಾಗುವ ಬಗೆ ಹೇಗೆ ?

"ರಾಜೇಂದ್ರಾ ಅದಕ್ಕಾಗಿ ನೀನು ವ್ಯಥೆಪಡಬೇಡ. ಆ ನಿನ್ನ ಗ್ರಂಥ ದಲ್ಲಿಯೇ ನಾನು ಬರೆದ ಗ್ರಂಥದಲ್ಲಿಯ ಮುಖ್ಯವಾದ ಶ್ಲೋಕಗಳನ್ನು ಸೇರಿಸಿ ಅದನ್ನೇ ನಾನು ಇಂದಿನಿಂದ ಪಠಣ ಮಾಡುವೆನೆಂದು ಭಗವಂತನ ಸನ್ನಿಧಿಯಲ್ಲಿಯೂ, ಪಂಡಿತ ಮಂಡಳಿಯ ಸಮ್ಮುಖದಲ್ಲಿಯೂ ಪ್ರತಿಜ್ಞೆ ಮಾಡುವೆನೆಂದು ಹೇಳಿ ಪ್ರತಿಜ್ಞೆ ಮಾಡಿದೊಡನೆ ಅಲ್ಲಿ ನೆರೆದಿದ್ದ ಜನ ಸಮೂಹದ ಹಾಗೂ ಪಂಡಿತವರ್ಗದ "ಜಯದೇವ ಮಹಾರಾಜಕೀ ಜೈ" ಎಂಬ ಜಯಘೋಷವು ಆಕಾಶವನ್ನು ಮುಟ್ಟಿತು.

ಅಂದಿನಿಂದ ರಾಜನು ಜಯದೇವರ ನಿಷ್ಠಾವಂತ ಶಿಷ್ಯನಾಗಿ ಶ್ರದ್ಧೆ ಯಿಂದ ಸತ್ಕರಿಸತೊಡಗಿದನು.

ಜಗನ್ನಾಥದಲ್ಲಿ ವಾಸವಾಗಿದ್ದ ಭಗವದ್ಭಕ್ತ ಬ್ರಾಹ್ಮಣನಿಗೆ ಪದ್ಮಾ ವತಿಯೆಂಬ ಓರ್ವ ಮಗಳಿದ್ದಳು. ಆ ಬ್ರಾಹ್ಮಣನಿಗೆ ಪದ್ಮಾವತಿಯು ಒಬ್ಬಳೇ ಒಬ್ಬ ಮಗಳು. ಮೇಲಾಗಿ ಚಲುವೆ; ಅವಳ ಆ ಕಪ್ಪುಬಣ್ಣದ ಕೇಶರಾಶಿ, ಮುಂಗುರುಳು, ವಿಶಾಲ ಹಣೆ, ಲಿಂಬಿ ಬಣ್ಣದ ಬೆಡಗು, ಎಸಳು ಮಲ್ಲಿಗೆ ಮೂಗು, ಹುಬ್ಬು ಕಾಮನಬಿಲ್ಲು, ರತ್ನದಂತೆ ಹೆನಳೆವ ನೀಲ ವರ್ಣದ ನಯನಗಳು, ಕೆಂದುಟಿಯಿಂದೊಪ್ಪುವ ಮನೋಹರ ಮುಖ ಕೇಳುವದೇನು ! ಯೌವನದಲ್ಲಿ ಕುರೂಪಿ ಕೂಡಾ ಸುರೂಪಿಯಾಗಿ ಕಾಣು ತ್ತಿರುವಾಗ ಸುರೂಪಿ ಸೇವರ್ಣ ರನಪಿಯಾಗಿ ಕಾಣುವಳೆಂದರೆ ತಪ್ಪಾಗಲಾ ರದು. ಇಂಥ ಸೌಂದರ್ಯವತಿಯನ್ನು ಯಾರು ತಾನೆ ತನ್ನ ಗ್ರಹಲಕ್ಷ್ಮಿ ಯನ್ನಾಗಿ ಮಾಡಿಕೊಳ್ಳಲು ಪ್ರಯತ್ನಿಸದಿರುವರು ? ಯಾರು ಕೇಳಲು ಬಂದರೂ ಭಗವಂತನ ಇಚ್ಛೆ ಎಲ್ಲಿರುವದೋ ಅಲ್ಲಿ ಆಗುವದೆಂದು ಆಕೆಯ ತಂದೆ ಹೇಳುತ್ತ ಬರುತ್ತಿದ್ದರೂ ತನ್ನ ಇಚ್ಛೆಯಂತೆ ವರನು ಸುಂದರನೂ, ಶ್ರೀಮಂತನೂ, ಸುಸಂಪನ್ನನೂ, ಪಂಡಿತನೂ ಇದ್ದು ತನ್ನ ಮನೆಯಲ್ಲಿಯೇ ಬಂದಿರಬೇಕೆಂದು ಭಗವಂತನಾದ ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತಿದ್ದನು. ಮಂಡಲದಿಂದ ಕೂಡಿದ ಚೆಲ್ವಿಕೆ, ಮೇಲಾಗಿ ಯೌವನ. ಅಂಪವೇಲಿ

ಆದರೆ ಈ ಎಲ್ಲ ಗುಣಗಳಿಂದೊಡಗೂಡಿದ ವ್ಯಕ್ತಿಗಳೇ ಸಿಗುವದು ಕಠಿಣವಾಗಿರುವಾಗ, ವರನು ಹೇಗೆ ದೊರೆಯಬೇಕು. ಹೀಗಾಗಿ ಪದ್ಮಾವತಿಯು ರುತುಮತಿಯಾಗಿ ಐದಾರು ವರ್ಷಗಳುರುಳಿದರೂ ವರನು ಸಿಗದ್ದರಿಂದ ಖಿನ್ನ ಮನಸ್ಕನಾದ ಪದ್ಮಾವತಿಯ ತಂದೆಯು ಒಂದು ದಿನ ರಾತ್ರಿ ಶ್ರೀಕೃಷ್ಣನನ್ನು ಅನನ್ಯ ಭಕ್ತಿಯಿಂದ ಸ್ತೋತ್ರಮಾಡಿ ಮಲಗಿಕೊಳ್ಳಲು ಅಂದು ಶ್ರೀಕೃಷ್ಣನು ಅವನ ಸ್ವಪ್ನದಲ್ಲಿ ಬಂದು ಎಲೋ ಭಕ್ತಾ, ಅಸ್ಥಿರವಾದ ಆಶೆಗಳಿಗಾಸೆಪಟ್ಟು ವ್ಯರ್ಥ ಕೆಡಬೇಡ. ಸ್ಥಿರವಾದದ್ದು ಸಿರಿಸಂಪತ್ತಲ್ಲ. ವಿದ್ಯಾ ಸಂಪತ್ತು. ಸ್ಥಿರವಾದ ಸೌಂದರ್ಯವು ದೇಹಸೌಂದರ್ಯವಲ್ಲ, ಭಕ್ತಿ ಭಾವವೇ ಸೌಂದರ್ಯವು ತಿಳಿಯಿತೆ. ನೀನು ನನ್ನಾಜ್ಞೆಯಂತೆ ಮಹಾ ಭಕ್ತನಾದ ಜಯದೇವನಿಗೆ ಕೊಟ್ಟು ವಿವಾಹ ಮಾಡು. ನಿನ್ನ ಇಚ್ಛೆ ಪೂರೈಸುವದಲ್ಲದೆ ನಿನ್ನ ಮಗಳಿಗೂ ಕಲ್ಯಾಣವಾಗುವದೆಂದು ಆಜ್ಞೆ ಮಾಡಿದನು.

ಭಗವಾನ್ ಶ್ರೀಕೃಷ್ಣನ ಆಜ್ಞೆಯನ್ನು ಮರುದಿನ ಬೆಳಿಗ್ಗೆ ತನ್ನ ಮಡದಿಗರುಹಿ ಆಕೆಯ ಸಮ್ಮತಿ ಪಡೆದು ಸಮೀಪದ ಹಳ್ಳಿಯಲ್ಲಿ ವಾಸವಾಗಿದ್ದ ಜಯದೇವನನ್ನು ಕಂಡು ತನ್ನ ಮಗಳನ್ನು ಭಗವಂತನ ಇಚ್ಛೆಯಂತೆ ವಿವಾಹ ಮಾಡಿಕೊಂಡು ತನ್ನ ಸಂಕಟವನ್ನು ಪರಿಹರಿಸೆಂದು ಪ್ರಾರ್ಥಿಸಲು ಆಗ ಜಯದೇವನಿಗೆ ಅಂದು ಬೆಳಗಿನಜಾವಕ್ಕೆ ಸ್ವಪ್ನದಲ್ಲಿ ಓರ್ವ ವೃದ್ಧ ಬ್ರಾಹ್ಮಣನು ತನ್ನ ಮಗಳನ್ನು ನಿನಗೆ ಕೊಟ್ಟು ವಿವಾಹಮಾಡಬೇಕೆಂದು ಸಂಕಲ್ಪಮಾಡಿಕೊಂಡು ಬರುವನು, ಅದಕ್ಕೆ ಒಪ್ಪಿಕೊಂಡು ಆತನ ಮಗಳನ್ನು ಲಗ್ನವಾಗಿ ಗ್ರಹಸ್ಥಾಶ್ರಮವನ್ನು ಆರಂಭಿಸು. ಇದು ಭಗವಂತನ ಆಜ್ಞೆ ಲಕ್ಷದಲ್ಲಿರಲಿ. ಎಂದು ಹೇಳಿದ್ದು ನೆನಪಿಗೆ ಬಂದು ಉಸುರ್ಗರೆದು "ನಿನ್ನಿಚ್ಛೆಯಂತಾಗಲಿ" ಎಂದು ಗಟ್ಟಿಯಾಗಿ ಅಂದು ಆ ಬ್ರಾಹ್ಮಣನನ್ನು ಕುರಿತು ಮಹನೀಯರೇ ಆ ಭಗವಂತನ ಇಚ್ಛೆಯೇ ಹಾಗಿದ್ದರೆ ಹಾಗೆಯಾಗಲಿ. ನೀವು ಮುಂದಿನ ಕಾರ್ಯ ಪೂರೈಸಿರೆನ್ನಲು ಆ ಬ್ರಾಹ್ಮಣನು ಸಂತೋಷಭರಿತನಾಗಿ ಸ್ವಗ್ರಾಮಕ್ಕೆ ತೆರಳಿ ವಿವಾಹಕ್ಕೆ ಬೇಕಾದ ಸರ್ವಸನ್ನಾಹಗಳನ್ನು ಸಜ್ಜುಗೊಳಿಸಿ ಸುಮುಹೂರ್ತದಲ್ಲಿ ಜಯದೇವರನ್ನು ಕರೆದೊಯ್ದು ವಿಜೃಂಭಣೆಯಿಂದ ವಿವಾಹ ಕಾರ್ಯವನ್ನು ಪೂರೈಸಿದನು. ಅಂದಿ

ನಿಂದ ಜಯದೇವರು ಗ್ರಹಸ್ಥಾಶ್ರಮಿಯಾಗಿ ಮಾವನ ಮನೆಯಲ್ಲಿದ್ದು "ಸಂಸಾರವೆಂಬ ಚಿನ್ನದುಂಗುರದಲ್ಲಿ ನವದಂಪತಿಗಳೆಂಬ ರತ್ನಗಳನ್ನು ಜೋಡಿಸಿ, ಭಕ್ತಿಭಾವವೆಂಬ ಕುಂದಣ ಹಾಕಿ" ದುಂಗುರವನ್ನು ಭಕ್ತಿಯಿಂದ ಭಗವಂತನಿಗರ್ಪಿಸಿದರೆ ಸ್ವೀಕರಿಸದಿರುವನೇ !

ಜಯದೇವನು ಭಕ್ತಿಸಂಗದ ಸುಂದರ ಸಂಸಾರವನ್ನು ಸಾಗಿಸುತ್ತಿರಲು ಒಂದು ದಿನ ಜಗನ್ನಾಥಕ್ಕೆ ಸಮೀಪದಲ್ಲಿರುವ ಒಂದು ಗ್ರಾಮದ ವರ್ತಕನು ಭಕ್ತಿಯೋಗದಲ್ಲಿ ಶ್ರದ್ಧೆವುಳ್ಳವನಾಗಿ ಜಯದೇವರಲ್ಲಿಗೆ ಬಂದು ತನ್ನ ಅಭಿಪ್ರಾಯವನ್ನು ತಿಳಿಸಿ ಅವರ ಅನುಮತಿಯಿಂದ ಅವರಲ್ಲಿದ್ದು ಅವರಿಂದ ಅನೇಕ ಗುರುಪದೇಶಗಳನ್ನು ಪಡೆಯುತ್ತ ಕೆಲದಿನಗಳಿದ್ದು ಮರಳಿ ಸ್ವಗ್ರಾಮಕ್ಕೆ ಹೋಗುವಾಗ್ಗ ಜಯದೇವರನ್ನು ಕುರಿತು ಭಕ್ತರಾಜ ನೀನು ನನ್ನೂರಿಗೆ ಬಂದು ನನ್ನ ಮನೋಭಿಲಾಷೆಯನ್ನು ಪೂರ್ತಿಗೊಳಿಸಬೇಕೆಂದು ಆಗ್ರಹಪಡಿಸಿ ಜಯದೇವನನ್ನು ಕರೆದೊಯ್ದನು. ಜಯದೇವನು ಆ ವರ್ತಕನ ಅತಿಥಿಯಾಗಿ ಕೆಲವು ದಿನಗಳಿದ್ದು ಸಂಕೀರ್ತನೆ ಭಜನಾದಿಗಳಿಂದ ಆತನ ಮನಸ್ಸು ತೃಪ್ತಿಪಡಿಸಿ ಅವನ ಅನಮತಿ ಪಡೆದು ಹೊರಡಲು ಆಗ ವರ್ತಕನು ಗುರುಕಾಣಿಕೆಯೆಂದು ಒಂದು ಸಹಸ್ರ ವರಹಗಳನ್ನು ಕೊಡಹೋಗಲು ಜಯದೇವನು ನಿರಾಕರಿಸಿದನು. ವರ್ತಕನು ಎಷ್ಟು ಬಗೆಯಿಂದ ಒತ್ತಾಯಪಡಿಸಿದರೂ ಜಯದೇವನು ಕಾಣಿಕೆಯನ್ನು ತಗೊಳ್ಳಲಿಲ್ಲ. ಆಗ ವರ್ತಕನು ಆ ಸಹಸ್ರ ವರಹಗಳನ್ನು ಒಂದುಚೀಲದಲ್ಲಿ ಹಾಕಿ ಜಯದೇವನಿಗೆ ಗೊತ್ತಿಲ್ಲದಂತೆ ಅವನಿಗಾಗಿ ಗೊತ್ತುಪಡಿಸಿದ ಪಲ್ಲಕ್ಕಿಯಲ್ಲಿ ಒಂದು ಬದಿಗೆ ಗಾದಿಯ ಬುಡದಲ್ಲಿಟ್ಟು ಸೇವಕರನ್ನು ಕರೆದು ಈ ಹಣವನ್ನು ಇವರ ಪತ್ನಿಯಾದ ಪದ್ಮಮ್ಮನವರಿಗೆ ನನ್ನ ನಮಸ್ಕಾರ ಸಹಿತ ಕಾಣಿಕೆಎಂದು ತಿಳಿಸಿ ಅವರಿಗೆ ಅರ್ಪಿಸತಕ್ಕದೆಂದು ಹೇಳಿದನು ಜಯದೇವರನ್ನು ಕರೆತಂದು ಪಲ್ಲಕ್ಕಿಯಲ್ಲಿ ಕೂಡ್ರಿಸಿ ನಮಸ್ಕಾರ ಮಾಡಿ ಬೀಳ್ಕೊಟ್ಟನು.

ಇತ್ತ ಬೋಯಿಗಳು ಪಲ್ಲಕ್ಕಿಯನ್ನು ಹೊತ್ತು ತೀವ್ರವಾಗಿ ಮಾರ್ಗಕ್ರಮಿಸುತ್ತ ಅರಣ್ಯದ ಮಧ್ಯದಾರಿಗೆ ಬಂದು ಪಲ್ಲಕ್ಕಿಯನ್ನು ಕೆಳಗಿಟ್ಟು ಆ ಹಣವನ್ನು ದೋಚಿಕೊಂಡು ಜಯದೇವನ ಕೈಕಾಲುಗಳನ್ನು ಕತ್ತರಿಸಿ

ಅಲ್ಲಿಯೇ ಸಮೀಪದಲ್ಲಿದ್ದ ಹಾಳುಭಾವಿಯಲ್ಲಿ ಹಾಕಿ ಪಲಾಯನವನ್ನು ಮಾಡಿದರು.

ಅಬ್ಬಾ! ವಿಧಿಯು ನಿರಪರಾಧಿಯಾದ ಪರಮ ಸದ್ಭಕ್ತನನ್ನು ಬಿಡಲಿಲ್ಲ. ಬೇಡೆಂದ ಹಣ ತಾನಾಗಿ ಬಂದು ಇಷ್ಟು ಅನಾಹುತವನ್ನುಂಟುಮಾಡಿತು. ಆ ನೀಚರು ಕೇವಲ ಹಣವನ್ನು ದೋಚಿಕೊಂಡು ಸುಮ್ಮನೆ ಬಿಡಬಾರದೆ ? ಏನೂ ಅರಿಯದ ಹಸುಳೆಯಂತಿದ್ದ ಪರಮ ಸದ್ಭಕ್ತನ ಕೈ-ಕಾಲುಗಳನ್ನು ಕತ್ತರಿಸಿ ಒಂದೇಸವನೆ ದೇಹದಿಂದ ರಕ್ತ ಪುಟಿಯುತ್ತಿದ್ದರೂ ಆ ನೀಚರು ಅಷ್ಟಕ್ಕೆ ಬಿಡಲಿಲ್ಲ. ಜಯದೇವನ ಸಜೀವ ದೇಹವನ್ನು ಎತ್ತಿಕೊಂಡು ಒಯ್ದು ಭಾವಿಯಲ್ಲಿ ಒಗೆದುಬಿಟ್ಟರು.

ಭಾವಿಯ ಸುತ್ತಲೂ ಗಿಡಗಂಟಿಗಳು ಬೆಳೆದುಕೊಂಡಿವೆ, ಭಾವಿಯ ಒಳಗೆ ತಳದಲ್ಲಿ ಹುಲ್ಲು ಬೆಳೆದಿದೆ, ಅದರ ಮೇಲೆ ಗಿಡಗಳ ಎಲೆಗಳು ಉದುರಿ ಬಿದ್ದಿವೆ, ಅದರ ಮೇಲೆ ಕೈಕಾಲುಗಳು ಕತ್ತರಿಸಿದ ಜಯದೇವನು ಅಂಗಾತ ಮಲಗಿದ್ದಾನೆ, ರಕ್ತಸ್ರಾವದಿಂದ ದೇಹ ಶವವಾಗಿದೆ, ಹೊಟ್ಟೆಯಲ್ಲಿ ಕೂಳಿಲ್ಲ ದ್ದರಿಂದ ಕಂಠ ಕುಂದಿದೆ. ಆದರೂ ಜಯದೇವನು ಎಲ್ಲವನ್ನೂ ಸಹಿಸಿ ಕೊಂಡು ಭಕ್ತಿಯೋಗ ಶಕ್ತಿಯನ್ನು ಹೊಂದಿ ಪರಮಾತ್ಮನಲ್ಲಿ ಚಿತ್ತವನ್ನು ಸೇರಿಸಿ ಶ್ರೀಕೃಷ್ಣ ನಾಮ ಸಂಕೀರ್ತನೆಯಲ್ಲಿ ಆನಂದಪರವಶನಾದ.

ರಾಗರಸಭರಿತವಾದ ಸಂಕೀರ್ತನೆಯ ಮಧುರ ಸ್ವರವು ಅರಣ್ಯವನ್ನಾ ವರಿಸಿತು. ದಶದಿಕ್ಕುಗಳು ದಿಗ್ಬಂಧನಗೊಂಡವು, ಮರಗಳು ಮೈದಡವಿ ಮೈಮರೆತವು, ಹಕ್ಕಿಗಳು ಹರ್ಷದಿಂದ ಹಾರಾಡಿದವು, ಹರಿಣಗಳು ಭಾವಿಯ ದಡದಲ್ಲಿ ಒಟ್ಟುಗೂಡಿ ನೀಲವರ್ಣದ ನೇತ್ರಗಳಿಂದ ಆನಂದಾ ಶ್ರುಗಳನ್ನು ಉದುರಿಸಿದವು. ಬೇಟೆಗಾಗಿ ಬಂದಿದ್ದ ಅದೇ ದೇಶದ ರಾಜ ನಾದ ಸಾತ್ವಿಕ ರಾಜನು ಬೇಟೆ ಸಿಗದ್ದರಿಂದ ನಿರಾಶನಾಗಿ ಮರದಡಿ ಕುಳಿ ತಾಗ ಮಂಜುಳ ಸ್ವರ ಕೇಳಿಬರತೊಡಗಿತು. ಕ್ಷಣಕಾಲ ಲಕ್ಷಕೊಟ್ಟು ಆಲಿಸಿ ಆ ಸ್ವರದತ್ತ ಹೊರಟನು. ಕೆಲದಾರಿಯನ್ನು ನಡೆದ ನಂತರ ಭಾವಿಗೆ ಬಂದು ಮುಟ್ಟಿದ. ಸಂಕೀರ್ತನೆಯ ಮಂಜುಳ ಸ್ವರವು ಸಮೀಪ ದಿಂದಲೇ ಬರುವಂತೆ ಭಾಸವಾಯಿತು. ಸುತ್ತಲೂ ನೋಡಿದ, ಯಾರೂ ಕಾಣಲಿಲ್ಲ. ಭಾವಿಯ ದಂಡೆಯ ಮೇಲೆ ಬಂದು ನಿಂತ. ಆಗ ಸ್ವರವು ಭಾವಿ

ಯೊಳಗಿಂದ ಬರುವದೆಂದು ನಿಶ್ಚಯಿಸಿ ಭಾವಿಯನ್ನು ಪರೀಕ್ಷಿಸಲಾಗಿ ಭಕ್ತ ಜಯದೇವನಿರುವದನ್ನು ಗುರ್ತಿಸಿ ತನ್ನ ಆಳುಗಳಿಂದ ಹೊರಗೆ ತೆಗೆಸಿದನು. ಜಯದೇವನ ರಕ್ತಮಯ ಶರೀರವನ್ನು ನೋಡಿ ಕನಿಕರಪಟ್ಟು ಭಕ್ತರಾಜ, ಹೀಗಾಗಲು ಕಾರಣವೇನೆಂದು ಕೇಳಲು ಜಯದೇವನು ನಿಶ್ಚಲಮನಸ್ಸಿನಿಂದ ಯಾವದೇ ದೇಹಬಾಧೆಯಿಲ್ಲದ ಮನುಷ್ಯನಂತೆ ತಟ್ಟನೆ 'ಇದು ಭಗವಂತನ ಇಚ್ಛೆಯೆಂದು' ಭಗವಂತನನ್ನು ಸ್ಮರಿಸಿ, ಪೂರ್ವಾಪರ ವೃತ್ತಾಂತವನ್ನು ತಿಳಿಸಿದನು. ತಳಮಳಗೊಂಡ ರಾಜನು ಕಾಣಿಕೆ ಕೊಟ್ಟ ವರ್ತಕನನ್ನೂ, ಮೇಣೆ ಹೊತ್ತ ಬೋಯಿಗಳನ್ನೂ ಸಿಕ್ಕಲ್ಲಿಂದ ಹಿಡಿತರಲು ಆಜ್ಞೆಯಿತ್ತನು. ಆಗ ಜಯದೇವನು ನಡುವೆ ಬಾಯಿಹಾಕಿ ರಾಜನ್ ಶಾಂತನಾಗು, ಹಣಕೊಟ್ಟ ವರ್ತಕನು ಯಾವದುರ್ಬುದ್ಧಿಯಿಂದಲೂ ಕೊಟ್ಟಿಲ್ಲ; ಹಣದಾಸೆಗಾಗಿ ಬೋಯಿಗಳು ಹೀಗೆ ಮಾಡಿದ್ದುಂಟು. ಆದದ್ದು ಆಗಿಹೋಯಿತು ಯಾರನ್ನೂ ಹಿಡಿತರಿಸಬೇಡ; ಒಂದುವೇಳೆ ಹಿಡಿತರಿಸಲೇಬೇಕೆಂಬ ಶಾಸನವಿದ್ದರೆ ಆ ಭಗವಂತನನ್ನೇ ತರಿಸು; ಅವನೇ ಅಪರಾಧಿ. ಅವನಿಚ್ಛೆಯಿಂದಲೇ ಆ ವರ್ತಕ ಪಲ್ಲಕ್ಕಿಯಲ್ಲಿ ಹಣವಿಟ್ಟ, ಅವನಿಚ್ಛೆಯಿಂದಲೇ ಆ ಬೋಯಿಗಳು ಹಣ ಅಪಹರಿಸಿದರು, ಅವನಿಚ್ಛೆಯಿಂದಲೇ ನನ್ನ ಅವಯವಗಳು ಹೋದವು. ಕಾರಣ ಅನ್ಯರನ್ನು ಹಿಡಿತರಿಸಿದರೆ ಆಗುವದೇನು; ಕಾರಣ ರಾಜಾಜ್ಞೆಯನ್ನು ಹಿಂತೆಗೆದುಕೊಳ್ಳಿರಿ ಎಂದು ನಿಶ್ಚಯ ಮತ್ತು ನಿರ್ಮಲ ಮನಸ್ಸಿನಿಂದ ಅಂದುಬಿಟ್ಟ. ಜಯದೇವನ ಮಾತಿನಿಂದ ರಾಜನಿಗೆ ವಿಸ್ಮಯವೂ, ಕನಿಕರವೂ ಉಂಟಾಯಿತು. ಭಕ್ತರಾಜ, ನಿನ್ನ ಸಹನಶಕ್ತಿಯು ಅಗಾಧವಾದದ್ದು. ನಿನಗೆ ಕೇಡುಮಾಡಿದವರಿಗೆ ಕೂಡಾ ನೀನು ಕೇಡು ಬಗೆಯಬಾರದೆಂಬ ನಿನ್ನ ಅಂತಃಕರಣಕ್ಕೆ ನನ್ನ ಅನಂತವಂದನೆಗಳು; ಎಂದು ವಂದಿಸಿ ಮೇಣೆ ತರಿಸಿ ಅದರಲ್ಲಿ ಜಯದೇವನನ್ನು ಜಾಗರೂಕತೆಯಿಂದ ಮಲಗಿಸಿ ಅರಮನೆಗೆ ಕರೆದೊಯ್ದನು. ಅಂದಿನಿಂದ ಜಯದೇವನನ್ನು ನಿಜ ರಾಜಗುರುವಿನಂತೆ ಸನ್ಮಾನಿಸುತ್ತಲಿದ್ದನು. ಒಂದುದಿನ ಜಯದೇವನು ತನ್ನ ಪತ್ನಿಯಾದ ಪದ್ಮಾವತಿಯ ಸಮಾಚಾರವನ್ನು ರಾಜನಿಗೆ ತಿಳಿಸಿ ಆಕೆಯನ್ನು ಕರೆಸಿಕೊಳ್ಳಬೇಕೆಂದು ಹೇಳಲು ರಾಜನು ವಿನಯದಿಂದ ಆಲಿಸಿ ಆಕೂಡಲೇ ಮೇಣೆಯೊಡನೆ ಕೆಲ ಸೈನಿಕರನ್ನು ಕಳಿಸಿ ಜಯದೇವರ ಸಮಾಚಾರವನ್ನು ಮಾತಾ ಪದ್ಮಾವತಿಯವರಿಗೆ ತಿಳಿಸಿಕರೆತರಲು ಹೇಳಿದನು.

ಆ ಗುರು ದಂಪತಿಗಳನ್ನು ತನ್ನ ಮಾತಾಪಿತೃಗಳೋಪಾದಿಯಲ್ಲಿ ಸೇವೆ ಮಾಡುತ್ತ, ಪಾರಮಾರ್ಥ ವಿಷಯ ವಿಚಾರಗಳನ್ನು ಅವರಿಂದ ತಿಳಿದುಕೊಳ್ಳುತ್ತಿದ್ದನು. ಅವರ ಅಪ್ಪಣೆಯಿಂದ ನಗರದ ನಾಲ್ಕು ದಿಕ್ಕಿಗೂ ಅನ್ನಛತ್ರಗಳನ್ನಿಟ್ಟು ಸಾಧುಸಂತರಿಗೂ ಅತಿಥಿ ಅಭ್ಯಾಗತರಿಗೂ ಅನ್ನದಾನ ಮಾಡುತ್ತಿದ್ದರು.

ಅತ್ತ ಜಯದೇವನನ್ನು ಅಂಗಹೀನನನ್ನಾಗಿ ಮಾಡಿ ಹಣವನ್ನು ಅಪಹರಿಸಿದ ಆ ಬೋಯಿಗಳು ತಮ್ಮೂರಿಗೆ ಹೋಗಲು ಧೈರ್ಯ ಸಾಲದೆ ಸಾಧುವೇಷ ಧರಿಸಿ ದೇಶಸಂಚಾರ ಮಾಡುತ್ತ ಸಾತ್ವಿಕ ರಾಜನ ರಾಜಧಾನಿಗೆ ಬಂದುಮುಟ್ಟಿದರು. ಜಯದೇವನು ರಾಜನ ಅತಿಥಿಯಾಗಿ ಅಲ್ಲಿಯೇ ಇರುವದನ್ನರಿತು ಅವನ ದರ್ಶನ ಪಡೆಯಬೇಕೆಂದು ನಿರ್ಧರಿಸಿದರು. ಒಂದು ದಿನ ರಾಜನು ಜಯದೇವನ ವಾಸಸ್ಥಾನದಲ್ಲಿರುವದನ್ನು ತಿಳಿದುಕೊಂಡು ಮುಂದಿನ ಪ್ರಯತ್ನಕ್ಕಾಗಿ ಬೇಕಾದ ಧನಧಾನ್ಯಗಳ ಬೇಡಿಕೆಯ ನೆವದಿಂದ ಜಯದೇವನ ನಿವಾಸವನ್ನು ಪ್ರವೇಶಿಸಿ ರಾಜನಿಗೆ ಭೆಟ್ಟಿಯಾದರು. ಆಗ ರಾಜನು ಜಯದೇವನಿಂದ ಪಾರಮಾರ್ಥ ವಿಷಯಗಳನ್ನು ಆಲಿಸುತ್ತಿದ್ದ. ಆ ಕಪಟ ಸಾಧುಗಳು ಜಯದೇವನನ್ನು ನೋಡುತ್ತಲೇ ತಾವು ಕೇಳಬೇಕೆಂದಿದ್ದ ವಿಚಾರ ಮರೆತು ಭೀತಿಯಿಂದ ನಡುಗತೊಡಗಿದರು. ರಾಜನು ಸಾಧುಗಳ ವರ್ತನೆಯಿಂದ ಸಂಶಯಗೊಂಡು ಇವರು ಹೀಗೆ ನಡುಗಲು ಕಾರಣವೇನೆಂದು ಜಯದೇವನನ್ನು ವಿಚಾರಿಸಲು ಜಯದೇವರು ಆ ಸಾಧುಗಳನ್ನು ದಿಟ್ಟಿಸಿನೋಡಿ ಅವರಾರೆಂಬುದನ್ನರಿತುಕೊಂಡರೂ ಅದನ್ನು ರಾಜನಿಗೆ ತೋರ್ಗೊಡದೆ ರಾಜನ್ ಇವರು ಮಹಾವ್ಯಕ್ತಿಗಳು ನಿಮ್ಮಿಂದ ಸಹಾಯ ಸಿಗುವದೋ ಇಲ್ಲೋ ಎಂಬ ಸಂಶಯದಿಂದ ಒಂದೇ ಊರಲ್ಲಿ ಬಹಳ ದಿನಗಳವರೆಗೆ ಇರತಕ್ಕವರಲ್ಲವಾದ್ದರಿಂದ ತಮ್ಮಿಂದ ಸಹಾಯ ಸಿಗದಿದ್ದರೆ ಇಲ್ಲೇ ಇರುವ ಪ್ರಸಂಗ ಬರಬಹುದೇ! ಎಂದು ಭೀತಿಗೊಂಡಿದ್ದಾರೆ. ಕಾರಣ ಅವರಿಗೆ ತಡಮಾಡದೆ ಅವರಿಷ್ಟಾರ್ಥಗಳನ್ನು ಕೊಟ್ಟು ಕಳಿಸಿಕೊಡೆಂದೆನ್ನಲು ರಾಜನು ಜಯದೇವರ ಆಜ್ಞೆಯಂತೆ ಸಾಧುಗಳ ಇಷ್ಟಾರ್ಥ ವಸ್ತುಗಳನ್ನು ಪಲ್ಲಕ್ಕಿಯಲ್ಲಿಟ್ಟು ಅವರನ್ನು ಅದರಲ್ಲಿ ಕುಳ್ಳಿರಿಸಿ ಬೋಯಿಗಳಿಗೆ ಇವರೆಲ್ಲಿಗೆ ಹೋಗುವೆವೆನ್ನುವರೋ ಅಲ್ಲಿಗೆ ಕಳಿಸಿ ಬನ್ನಿರೆಂದು ಹೇಳಿ ಕಳಿಸಿದನು.

ಕಪಟ ಸಾಧುಗಳನ್ನು ಹೊತ್ತು ಒಯ್ಯುತ್ತಿದ್ದ ರಾಜಸೇವಕರು ಅಯ್ಯಾ ಸ್ವಾಮಿಗಳೇ ! ಜಯದೇವರು ಯಾರಿಗೂ ಇಷ್ಟೊಂದು ಮರ್ಯಾದೆ ಮಾಡಿದ್ದು ನಾವು ಈವರೆಗೂ ನೋಡಿರಲಿಲ್ಲ. ಆದರೆ ತಮಗೆ ಇಷ್ಟೊಂದು ಮರ್ಯಾದೆ ಮಾಡಲು ಕಾರಣವೇನೆಂಬುದನ್ನು ತಿಳಿಸುವಿರಾ ! ಎಂದು ಕೇಳಲು ಆ ಕಪಟ ಸಾಧುಗಳು ಸೇವಕರೇ ತಿಳಿದುಕೊಳ್ಳಬೇಕೆಂದು ಆಶಿಪಟ್ಟರೆ ನಾವು ತಿಳಿಸದಿರಬಹುದೇ ! ಕೇಳಿರಿ ಹೇಳುವೆವು ಎಂದೆನ್ನುತ್ತ ಪಲ್ಲಕ್ಕಿಯಿಂದಿಳಿದು ಒಂದೆಡೆ ಕೂತುಕೊಂಡು ಹೇಳತೊಡಗಿದರು. ನಾವು ಮತ್ತು ಜಯದೇವನು ಕೂಡಿಯೇ ಒಬ್ಬ ರಾಜನಲ್ಲಿ ಕೆಲಸ ಮಾಡುತ್ತಿದ್ದೆವು. ಆಗ ಜಯದೇವನು ರಾಣೀವಾಸಕ್ಕೆ ದ್ರೋಹ ಬಗೆದದ್ದರಿಂದ ರಾಜನು ಸಿಟ್ಟುಗೊಂಡು ಜಯದೇವನಿಗೆ ಮರಣದಂಡನೆ ವಿಧಿಸಿ ಶಿರಚ್ಛೇದ ಮಾಡಲು ನಮ್ಮ ಸ್ವಾಧೀನ ಪಡಿಸಿದನು. ಆದರೆ ನಮಗೆ ಜಯದೇವನನ್ನು ಕೊಲ್ಲಲು ಮನಸ್ಸಾಗದ್ದರಿಂದ ಕೇವಲ ಅವನ ಕೈಕಾಲುಗಳನ್ನು ಕತ್ತರಿಸಿ ಜೀವದಾನ ಮಾಡಿದೆವು. ಆ ಉಪಕಾರ ಸ್ಮರಣೆಗೆ ತಂದುಕೊಂಡು ಇಂದು ನಮಗಿಷ್ಟು ಆದರ ಸತ್ಕಾರಗಳನ್ನು ಮಾಡಿದ್ದಾನೆಂದು ಅನ್ನುವಷ್ಟರಲ್ಲಿ ಭಯಂಕರ ಶಬ್ದವಾಗಿ ಭೂಮಿಯು ಬಿರಿಯಿತು. ಆ ಕಪಟ ಸಾಧುಗಳು ಭೂಗರ್ಭವನ್ನು ಸೇರಿದರು. ಈ ಅನರ್ಥವನ್ನು ಕಂಡ ರಾಜಸೇವಕರು ಭಯಗೊಂಡು ಪಟ್ಟಣಕ್ಕೆ ಬಂದು ನಡೆದ ಸಮಾಚಾರವನ್ನು ರಾಜನಿಗೂ ಜಯದೇವರಿಗೂ ಅರುಹಲು ಜಯದೇವನು ವಿಸ್ಮಿತನಾಗಿ ರಾಜನ್ ಆ ಸ್ಥಳಕ್ಕೆ ಹೋಗಿ ಬರಬೇಕೆಂದು ನನಗಿಚ್ಛೆಯಾಗಿದೆ. ನನ್ನ ಸಲುವಾಗಿ ಆ ಮಹನೀಯರಿಗೆ ದುರ್ಗತಿಯೊದಗಿದ್ದರಿಂದ ನಾನು ಮಹಾ ಪಾಪಿಯೆಂದು ವ್ಯಾಕುಲಚಿತ್ತನಾದನು. ರಾಜನು ಜಯದೇವನನ್ನು ಕರಕೊಂಡು ಚಿಕ್ಕ ಪರಿವಾರದೊಡನೆ ಆ ಸ್ಥಳಕ್ಕೆ ಹೋದನು.

ಜಯದೇವರು ಆ ಸ್ಥಳಕ್ಕೆ ಬಂದಕೂಡಲೇ ಪಲ್ಲಕ್ಕಿಯಿಂದಿಳಿದು ಇಬ್ಭಾಗವಾದ ಭೂಮಿಯನ್ನು ಕಂಡು ಅಯ್ಯೋ ಪುಣ್ಯಾತ್ಮರೇ ! ನನ್ನ ವಿಚಾರದಿಂದ ನಿಮಗೀಗತಿಯಾಗಬೇಕೇ ? ನಾನೆಷ್ಟು ಪಾಪಾತ್ಮನು ಎಂದು ಘಟ್ಟಿಯಾಗಿ ಅಳುತ್ತ ತಾನೂ ಆ ಭೂಗರ್ಭದ್ವಾರದಲ್ಲಿ ಬಿದ್ದು ಪ್ರಾಣತ್ಯಾಗಮಾಡಲು ಪ್ರಯತ್ನಿಸಿದನು. ಆದರೆ ರಾಜನು ಬಲವಾಗಿ ಬಿಗಿದಪ್ಪಿ

ದ್ದರಿಂದ ಸಾಧ್ಯವಾಗಲಿಲ್ಲ. ರಾಜನು ಜಯದೇವನನ್ನು ಕುರಿತು- ಭಕ್ತ ರಾಜ, ಆ ಪಾಪಿಗಳಿಗೆ ಆಗಬೇಕಾಗಿದ್ದ ಪ್ರಾಯಶ್ಚಿತ್ತವನ್ನು ಆ ಭಗವಂತನು ಮಾಡಿದರೆ ನಾವು ಅದಕ್ಕೆ ದುಃಖಿಸಬೇಕೆ? ಭಗವಂತನ ಇಚ್ಛೆ ಇರದಿದ್ದರೆ ಭೂಗರ್ಭದಲ್ಲಿ ಮರೆಯಾಗಲು ಸಾಧ್ಯವೇ? ಭಗವಂತನ ಇಚ್ಛೆ ಇಲ್ಲದೇ ಯಾವ ಕಾರ್ಯವೂ ನಡೆಯುವದಿಲ್ಲವೆಂದು ನೀವೇ ಹೇಳಿದ್ದನ್ನು ಇಂದು ನೀವೇ ಮರೆತಿರುವಿರಾ? ಇದು ತಮ್ಮಂಥ ಜ್ಞಾನಿಗಳಿಗೆ ಎಂದೂ ಶೋಭಿಸದು. ಎಂದು ರಾಜನಂದ ಮಾತುಗಳಿಂದ ಜಯದೇವರಿಗೆ ಜ್ಞಾನೋದಯವಾಯಿತು. ನಿಜ ರಾಜನ್ ಎಂದು ನಿಟ್ಟುಸಿರು ಬಿಟ್ಟು ಸುಮ್ಮನಾದ. ರಾಜನು ಜಯದೇವರನ್ನು ಕರೆದುಕೊಂಡು ಪಟ್ಟಣಕ್ಕೆ ಪ್ರಯಾಣ ಬೆಳಸಿದನು.

ಇತ್ತ ಸಾತ್ವಿಕ ರಾಜನ ಅಂತಃಪುರದಲ್ಲಿ ಮಹಾರಾಣಿಯು ತನ್ನ ಸ್ತ್ರೀ ಪರಿವಾರದೊಡನೆ ವಿರಾಮವಾಗಿ ಕುಳಿತುಕೊಂಡು ಮಾತಾಡುತ್ತಿರುವಾಗ ಪಾತೀವೃತ್ಯದ ವಿಷಯ ಚರ್ಚೆಗೆ ಬಂದಿತು. ಆಗ ಮಹಾರಾಣಿಯು ತನ್ನ ಸಹೋದರನ ಸತಿಯು ಸಹಗಮನ ಮಾಡಿದಳೆಂದು ವರ್ಣನೆ ಮಾಡಿ ಹೇಳುತ್ತಿರಲು, ಪದ್ಮಾವತಿಯು ಪತಿಯ ವಿಯೋಗವು ಸಹಿಸಲಾರದ ದುಃಖವೇ ಸರಿ. ಆದಾಗ್ಯೂ ಪತಿ ವಿಯೋಗವಾದಾಕ್ಷಣ ಸತಿಯು, ತನ್ನ ಪ್ರಾಣವನ್ನಾತನಿಗರ್ಪಿಸುವದಕ್ಕಿಂತಲೂ, ಸಹಗಮನ ಮಾಡಿ ಪ್ರಾಣಬಿಡುವದು ಮಹತ್ವದ್ದಲ್ಲವೆನ್ನಲು, ಮಹಾರಾಣಿಯು- ಅದು ನಿಜ ಪದ್ಮಾವತಿ. ಆದರೆ ಯೋಗಸಾಧನೆಯು ಎಲ್ಲರಿಗೂ ಸಾಧ್ಯವಾಗಲಾರದು, ಅದು ಜ್ಞಾನಿಗಳಿಗೆ ಮಾತ್ರ ಸಾಧ್ಯವಾದ ಉನ್ನತ ಮಾರ್ಗವಾದ್ದರಿಂದ ಅಜ್ಞರಿಗೆ ಅದು ಅರಿಯದ ವಿಷಯವಾಗಿರುವದರಿಂದ ಸಹಗಮನವೊಂದೇ ಅವರ ಕೊನೆಯ ಮಾರ್ಗ. ಸಹಗಮನವೂ ಕೂಡಾ ಸಹಜವಾದುದಲ್ಲ. ಪತಿಯ ವಿಯೋಗದಿಂದಾಗುವ ದುಃಖದಿಂದ ಮನಸ್ಸು ಕಠೋರಗೊಂಡು ನಿಶ್ಚಲತ್ವವನ್ನು ಹೊಂದಬೇಕು. ಸಜೀವ ದೇಹವು ಸುಡುವಾಗ ಸಹಿಸಿಕೊಳ್ಳುವ ಸಾಮರ್ಥ್ಯ ಪ್ರಾಪ್ತವಾಗಬೇಕು, ಅಂದರೆ ಸಹಗಮನ ಸಾಧ್ಯ ಪದ್ಮಾವತಿ. ಎಂದು ಮೂಗುಮುರಿದು ಮಾತನಾಡಿ ಅಷ್ಟಕ್ಕೆ ಬಿಡದೆ ಮಹಾರಾಣಿಯು ತನ್ನ ಪರಿಚಾರಿಕೆಯೊಡನೆ ಆಲೋಚಿಸಿ, ಪತಿಯ ವಿಯೋಗದ ಸುದ್ದಿಯಿಂದ

ತಕ್ಷಣವೇ ತನ್ನ ಪ್ರಾಣವನ್ನು ಅರ್ಪಿಸುವಳೋ ನೋಡಿಯೇಬಿಡೋಣವೆಂದು ನಿಶ್ಚಯಿಸಿದಳು.

ಪದ್ಮಾವತಿಯೊಡನೆ ಮಹಾರಾಣಿಯು ಆ ವಿಷಯ ಅಷ್ಟಕ್ಕೆ ಬಿಟ್ಟು ಆ ಮಾತು ಈ ಮಾತುಗಳನ್ನು ಮಾತಾಡುತ್ತ ಕುಳಿತ ವೇಳೆಯಲ್ಲಿ ಸೇವಿಕೆಯೊಬ್ಬಳು ಅಳುತ್ತ ಅಲ್ಲಿಗೆ ಬಂದಳು. ಕಾರಣವೇನೆಂದು ಮಹಾರಾಣಿಯು ಕೇಳಲು ಅಮ್ಮಾ ಬೇಟೆಗೆ ಹೊರಟಿದ್ದ ರಾಜೇಂದ್ರರೂ ಜಯದೇವರೂ ದಾರಿಯಲ್ಲಿ ಬರುವಾಗ್ಗ ಪಲ್ಲಕ್ಕಿಯ ಮೇಲೊಂದು ಕ್ರೂರಮೃಗ ಹಾರಿ ಜಯದೇವರನ್ನು ಕೊಂದುಬಿಟ್ಟಿತು. ಇಗೋ ಗುರ್ತಿಗಾಗಿ ರಕ್ತ ಬಟ್ಟೆ ತಂದಿರುವೆನು ಎಂದಳು. ರಾಣಿಯು ಅಯ್ಯೋ ಎಂತಹ ಪ್ರಮಾದವಾಯಿತು ! ಎಂದೆನ್ನುತ್ತ ಕಪಟ ವೇದನೆಯನ್ನು ತೋರ್ಪಡಿಸಿದಳು. ಕಪಟತ್ವವನ್ನರಿಯದ ಪದ್ಮಾವತಿಯು ಆ ಮಾತುಗಳನ್ನು ನಂಬಿ ಅತ್ಯಂತ ದುಃಖಿತಳಾಗಿ ಪತಿಯ ಪಾದಗಳಲ್ಲಿ ಚಿತ್ತವಿಟ್ಟು ದೇವರನ್ನು ಸ್ಮರಿಸುತ್ತ ಯೋಗಶಕ್ತಿಯಿಂದ ಪ್ರಾಣಬಿಟ್ಟಳು. ಅಲ್ಲಿದ್ದವರೆಲ್ಲರೂ ಗಾಬರಿಗೊಂಡರು. ನಗೆ ಹೊಗೆಯಾಯಿತಲ್ಲಾ ಎಂದು ಮಹಾರಾಣಿಯು ಚಿಂತಿಸತೊಡಗಿದಳು. ಅಷ್ಟಕ್ಕೆ ರಾಜನ ಸವಾರಿ ಅಂತಃಪುರಕ್ಕೆ ಬಂದಿತು. ಅಂತಃಪುರ ಶಾಂತವಿದೆ, ಮೌನ ಗಡಬಿಡಿ ಮುಂದುವರಿದಿದೆ. ಇದನ್ನು ಕಂಡು ರಾಜನು ವಿಸ್ಮಿತನಾಗಿ ಕಾರಣ ಕೇಳಿ ನಡೆದ ಸಂಗತಿಯನ್ನರಿತು ಒಂದು ಮರೆಯಬೇಕೆಂದರೆ ಮತ್ತೊಂದು ಮುಂದೆ ಬಂದಿತಲ್ಲಾ ಎಂದು ಬಹು ವ್ಯಾಕುಲಚಿತ್ತನಾಗಿ, ತನ್ನ ಸತಿಯಿಂದಾದ ತಪ್ಪಿಗೆ ತಕ್ಕ ಪ್ರಾಯಶ್ಚಿತ್ತವೆಂದು ಶಿರಚ್ಛೇದ ಮಾಡಬೇಕೆಂದೆಣಿಸಿ ಒರೆಯಿಂದ ಕತ್ತಿಯನ್ನಿರಿದು ಝಳಪಿಸುತ್ತ ಕಡಿಯಹೋದನು. ಆಗ ರಾಣಿಯು ಭಯಭೀತಳಾಗಿ ಗುರುದೇವ; ನನ್ನನ್ನು ರಕ್ಷಿಸು ಎಂದು ಮೊರೆಹೋದಳು. ಕೋಪಗೊಂಡ ರಾಜನು ಆಗಲೂ ಬಿಡದೆ ರಾಣಿಯನ್ನಿಡದೆಳೆದು ಕಡಿಯಹೋಗಲು ಜಯದೇವನು ತಡೆ, ರಾಜನ್ ! ಶಾಂತನಾಗು ತಡೆ ಎಂದೆನ್ನುತ್ತ ಕೈನೀಡಿ ಏಳಹೋಗಲು, ಕೈಕಾಲುಗಳು ಮೊಳೆತು ಚಟ್ಟನೆದ್ದು ರಾಜನು ಖಡ್ಗವನ್ನೆತ್ತಿದ ಕೈಹಿಡಿದನು. ಅಲ್ಲಿಯವರೆಗೂ ತನಗೆ ಕೈಕಾಲುಗಳು ಬಂದದ್ದೂ ಲಕ್ಷದಲ್ಲಿರಲಿಲ್ಲ. ಪರಮಾತ್ಮನ ಅನುಗ್ರಹದಿಂದ ವಿರೂಪವು ಸುರೂಪವಾಗಿ ಕಂಗೊಳಿಸಿತು. ಆಗ ಎಲ್ಲರೂ ಆಶ್ಚರ್ಯಚಕಿತರಾಗಿ ಶ್ರೀಕೃಷ್ಣಪರಮಾತ್ಮನ

ಸ್ತೋತ್ರದಲ್ಲಿ ಮಗ್ನರಾದರು. ಜಯದೇವನಂತೂ ಸಂಕೀರ್ತನೆಯಲ್ಲಿ ಲೀನನಾಗಿ ಮೈಮರೆತನು. ಸಂಕೀರ್ತನೆಯನ್ನಾಲಿಸಿ ಆನಂದಭರಿತನಾದ ಶ್ರೀಕೃಷ್ಣ ಪರಮಾತ್ಮನು ಪ್ರತ್ಯಕ್ಷನಾಗಿ ದಿವ್ಯದರ್ಶನವನ್ನಿತ್ತನು. ಎಲ್ಲರೂ ಪರಮಾತ್ಮನನ್ನು ಕಂಡು ಆನಂದಭರಿತರಾದರು. ಆಗ ರಾಜನು ಮಾತೆಯಾದ ಪದ್ಮಾವತಿಯ ಪ್ರಾಣದಾನಮಾಡಬೇಕೆಂದು ಬೇಡಿಕೊಳ್ಳಲು ಭಗವಂತನು ರಾಜನ ಬೇಡಿಕೆಯಂತೆ ಪದ್ಮಾವತಿ ದೇವಿಯನ್ನು ಬದುಕಿಸಿಕೊಟ್ಟು ಅಂತರ್ಗತನಾದನು. ಪದ್ಮಾವತಿದೇವಿಯು ಪತಿಯ ಪಾದಗಳಿಗೆ ಸಾಷ್ಟಾಂಗನಮಸ್ಕಾರ ಮಾಡಿದಳು. ರಾಜನು ಆ ಗುರುದಂಪತಿಗಳನ್ನು ಪ್ರತ್ಯಕ್ಷ ಪಾರ್ವತಿ-ಪರಮೇಶ್ವರರಂತೆ ಭಾವಿಸಿ ಸಕಲೋಪಚಾರಗಳಿಂದ ಸೇವೆಮಾಡತೊಡಗಿದನು.

ಇಂತಿರ್ದ ಜಯದೇವನು ಪರಮಭಕ್ತ ಭಾಂಡಾರಿಯಾಗಿ, ಭೂತಕೋಟಿಯಲ್ಲಿ ಪ್ರೀತಿಯುಳ್ಳವನಾಗಿ, ಮಹಾ ಕವೀಂದ್ರನಾಗಿರುವನಲ್ಲದೆ ಗಾಯನ ವಿಶಾರದನೂ ಆಗಿರಲು ಅವನ ಕೀರ್ತಿ ದಶದಿಕ್ಕುಗಳಲ್ಲಿಯೂ ವ್ಯಾಪಿಸಿತು. ತನ್ನ ಮಧುರ ಕಂಠದಿಂದ ಕೂಡಿದ ಸಂಕೀರ್ತನೆಯನ್ನು ಕೇಳುವವರಿಗೆ ಭಕ್ತಿ ವೈರಾಗ್ಯಗಳು ಹುಟ್ಟುವಂತೆ ರಾಗರಸಭರಿತವಾಗಿ ಸಂಕೀರ್ತನೆಯನ್ನು ಹೇಳುತ್ತ, ಪ್ರಚಾರಗೊಳಿಸುತ್ತ ಶಾಂತಿ ಸಂತೋಷಗಳನ್ನು ಹೊಂದುತ್ತ ಭಗವಂತನ ಭಜನೆಯಿಂದ ಪರಮಸಿದ್ಧಿಯನ್ನು ಪಡೆಯುತ್ತ ಕಾಲಕಳೆಯುತ್ತಲಿದ್ದನು.

---

## ೨೫. ದಾಮಾಜಿ ಪಂತರು

ಬೀದರ ರಾಜ್ಯವನ್ನಾಳುತ್ತಿದ್ದ ಮಹಮ್ಮದಿಯ ರಾಜನ ಕಾಲಕ್ಕೆ ದಾಮಾಜಿಪಂಥನೆಂಬ ಜಹಗೀರದಾರನಿದ್ದನು. ಇವನು ಮಂಗಳವೇಡೆಯ ಜಹಗೀರನ್ನು ಪರಿಪಾಲಿಸುತ್ತಿದ್ದನು. ಇವನು ದೈವ ಭಕ್ತನಾಗಿಯೂ, ನ್ಯಾಯನಿಷ್ಠುರನಾಗಿಯೂ ಇದ್ದನಲ್ಲದೆ ಪ್ರಜಗಳ ಸುಖ-ದುಃಖಗಳನ್ನು ವಿಚಾರಿಸಿ ಅವರಿಗೆ ಬೇಕಾದ ಅನುಕೂಲತೆಗಳನ್ನು ಒದಗಿಸಿಕೊಡುತ್ತಿದ್ದನು. ಇಂತಿವನ ರಾಜ್ಯಪರಿಪಾಲನೆಯಿಂದ ಪ್ರಜೆಗಳು ಸುಖವಾಗಿದ್ದರು.

ದಾಮಾಜಿ ಪಂಥರು ದೊಡ್ಡ ಜಹಗೀರದಾರರಾಗಿದ್ದರೂ ಸ್ವಲ್ಪವೂ ಅಧಿಕಾರದ ದರ್ಪ ಇದ್ದಿಲ್ಲ. ಮಹಾ ಸಾಧುಸ್ವಭಾವದವರು, ಮೇಲಾಗಿ ಪಾಂಡುರಂಗನ ಪರಮಭಕ್ತರಾಗಿ ಅನುದಿನವೂ ಅತಿಥಿ ಅಭ್ಯಾಗತರನ್ನು ಅನ್ನ ನೀರುಗಳಿಂದ ಸಂತೈಸುತ್ತಿದ್ದರು.

ಇಂತು ಕಾಲಕಳೆಯುತ್ತಿರುವ ಪಂಥರ ಪರೀಕ್ಷಾರ್ಥವಾಗಿ ಪಾಂಡುರಂಗನು ಸತತ ಎರಡು ವರ್ಷಗಳ ವರೆಗೆ ಆ ಪ್ರದೇಶಕ್ಕೆ ಬರಗಾಲವನ್ನುಂಟುಮಾಡಿದನು. ಮೊದಲನೇ ವರ್ಷವನ್ನು ಜನತೆಯು ಹಾಗೂ ಹೀಗೂ ಸಹಿಸಿಕೊಂಡಿತು, ಇದ್ದ ಬಿದ್ದ ಕಾಳುಕಡಿಗಳನ್ನು ತಿಂದು ಬದುಕಿದರು, ದನಗಳಿಗೆ ಅಲ್ಪಸಲ್ಪ ಇದ್ದ ಹೊಟ್ಟುಸೊಪ್ಪೆಯನ್ನು ಹಾಕಿದರು, ಮುಂದಿನ ವರ್ಷದ ಮೇಲೆ ಆಶೆಯಿಟ್ಟು ಕಾಲಕಳೆದರು, ಆದರೆ ಆ ವರ್ಷವೂ ಮಳೆ ಆಗಲಿಲ್ಲ, ಭೂಮಿಯಲ್ಲಿ ಬೆಳೆಯಿಲ್ಲದಾಯಿತು, ಮನೆಯಲ್ಲಿ ಕಾಳುಕಡಿಗಳಿಲ್ಲದಾಯಿತು, ಹಿತ್ತಲಲ್ಲಿ ಹೊಟ್ಟು ಸೊಪ್ಪೆಗಳಿಲ್ಲದಾಯಿತು, ಇಂಥ ಪರಿಸ್ಥಿತಿಯಿಂದ ಕಂಗೆಟ್ಟರು, ಹೊಟ್ಟೆಗಾಗಿ ಹಾತೊರೆಯತೊಡಗಿದರು, ಗಡ್ಡೆಗೆಣಸುಗಳನ್ನೂ ಗಿಡದ ತಪ್ಪಲುಗಳನ್ನೂ ತಿಂದು ಕೆಲಕಾಲ ಕಳೆದರು. ಆದರೆ ಆ ಗಿಡದ ಸೊಪ್ಪಾದರೂ ಎಷ್ಟು ದಿನಗಳ ವರೆಗೆ ಪೂರೈಸಿತು, ಗಿಡಮರಗಳಲ್ಲಿ ತಪ್ಪಲ ಸಹ ಮುಗಿಯಿತು, ಆಗ ಪ್ರಜೆಗಳು ಹಸಿವಿನಿಂದ ಒಬ್ಬೊಬ್ಬರಾಗಿ ಪ್ರಾಣಬಿಡತೊಡಗಿದರು. ಈ ನಂಗತಿಯನ್ನು ಕಂಡು ದಾಮಾಜಿಪಂಥರು ತಮ್ಮ ಸ್ವಂತ ಧನದಿಂದ ಊರುಗಳಿಗೆ ಅನ್ನಛತ್ರವನ್ನಿಟ್ಟು ಕೆಲದಿನಗಳವರೆಗೆ ಪ್ರಜಗಳನ್ನು ಪ್ರಾಣದಿಂದುಳಿಸಿದರು. ಆದರೆ ದೇಶಕ್ಕೆ ದೇಶವೇ ಬಳಲುತ್ತಿರುವಾಗ, ಆವೆಲ್ಲಜನರಿಗೆ ಅನ್ನ ಪೂರೈಸುವಲ್ಲಿಯೇ ಪಂಥರಹಣಸೂರೆಗೊಂಡಿತು. ದೇಣಿಗೆಯಿಂದಲೂ, ಸಾಲರೂಪದಿಂದಲೂ ಹಣಸಂಪಾದಿಸಿ ಅನ್ನಕ್ಕಾಗಿ ವೆಚ್ಚಮಾಡಿದರು; ಅಷ್ಟರಲ್ಲಿ ಮಳೆಯೂ ಆಯಿತು. ಒಕ್ಕಲಿಗರು ಭೂಮಿಯನ್ನು ಹದಗೊಳಿಸುವಲ್ಲಿ ತೊಡಗಿದರು. ಆದರೆ ಬೀಜಬಿತ್ತಿ ಬೆಳೆ ಕೈಗೆ ಬರಬೇಕಾದರೆ ಇನ್ನೂ ಮೂರು ತಿಂಗಳು ಬೇಕು. ಅಲ್ಲಿಯ ವರೆಗೂ ಹೇಗಾದರೂ ಸಲುಹಬೇಕೆಂದು ಪಂಥರು ನಿರ್ಧರಿಸಿದರು. ತಮ್ಮ ವಶದಲ್ಲಿಯ ಅರಮನೆಯ ಧಾನ್ಯಗಳನ್ನೂ, ಧನವನ್ನೂ ವೆಚ್ಚಮಾಡಿ, ಅನ್ನಛತ್ರಗಳ ಮೂಲಕ ಅನ್ನದಾನವನ್ನು ಮೊದಲಿನಂತೆ ಮುಂದುವರಿಸಿದರು.

ಆದರೆ ಕೆಲಜನ ಪಂತರ ವಿರೋಧಿಗಳಿಗೆ ಸರಿಬರಲಿಲ್ಲ. ಅಂಥವರೆಲ್ಲರೂ ಒಂದುಗೂಡಿ ರಾಜನಿಗೆ ಒಂದು ಪತ್ರ ಬರೆದರು, ಅದರಲ್ಲಿ ಪಂತರು ಅರಮನೆಯ ಖಣಜಗಳನ್ನೂ, ಭಾಂಡಾರದಲ್ಲಿಯ ಧನವನ್ನೂ ಅಪವ್ಯಯ ಮಾಡುತ್ತಿರುವ ಕಾರಣ ಇದನ್ನು ಯೋಗ್ಯ ಚೌಕಸಿ ಮಾಡಿ ಆತನನ್ನು ಶಿಕ್ಷಿಸಬೇಕೆಂದು ಬರೆದುಕೊಂಡರು. ಬಾದಶಹನು ಸುವಿಚಾರಿಯಾಗಿದ್ದರಿಂದ ಮೊದಲು ಸಲದ ಪತ್ರವನ್ನು ಲಕ್ಷಿಸಲಿಲ್ಲ. ಆದರೆ ಪಂತರ ವಿರೋಧಿಗಳು ಅಷ್ಟಕ್ಕೆ ಬಿಡದೆ ಪುನಃ ಒಂದರಮೇಲೊಂದರಂತೆ ಎರಡು ಟಪಾಲುಗಳನ್ನು ಬರೆದರು.

ದೊರೆಯು ಎಷ್ಟೇ ಒಳ್ಳೆಯವನಿದ್ದರೂ ಪರಿವಾರವು ಮಾತುಮಾತಿಗೂ ಸುಳ್ಳು ದುರ್ಬೋದನೆಯನ್ನು ಹೇಳತೊಡಗಿದರೆ, ಕೊನೆಗೊಮ್ಮೆಯಾದರೂ ಕೋಪಗೊಳ್ಳುವನೆಂಬುದು ಅನುಭವಸಿದ್ಧ ಸಿದ್ಧಾಂತ. ಅಂದ ಮೇಲೆ ಬಾದಶಹನು ಆ ವಿರೋಧಿಗಳ ಒಂದರಮೇಲೊಂದರಂತೆ ಬಂದಿದ್ದ ಪತ್ರಗಳನ್ನು ಕಂಡು ಆ ವಿಷಯವಾಗಿ ದಾಮಾಜಿಪಂತರಮೇಲೆ ಕಡು ಕೋಪಗೊಂಡನು. ಕೂಡಲೆ ಸಾವಿರ ಜನ ಸೈನಿಕರನ್ನು ಕರೆದೊಯ್ದು ದಾಮಾಜಿ ಪಂತರನ್ನು ಬಂಧಿಸಿ ತರತಕ್ಕದ್ದೆಂದು ಸೇನಾಪತಿಗೆ ಆಜ್ಞೆ ಮಾಡಿದನು. ಪ್ರಭುವಿನಾಜ್ಞೆಯಂತೆ ಆತನು ಸೈನಿಕರಿಂದದೊಡಗೂಡಿ ಮಂಗಳವೇಡೆಗೆ ಬಂದು ದಾಮಾಜಿ ಪಂತರ ಮನೆಗೆ ಮುತ್ತಿಗೆಯನ್ನು ಹಾಕಿದನು.

ಪಂತರಾಗ ಪಾಂಡುರಂಗನ ಪೂಜೆಯಲ್ಲಿ ನಿರತರಾಗಿದ್ದರು. ಸೇನಾಪತಿಯು ತಾನು ಬಂದ ಸಮಾಚಾರವನ್ನು ಪಂತರ ಸ್ನೇಹಿತನೋರ್ವನ ಮುಂದೆ ಹೇಳಿ ಕಳಿಸಿದಾಗ್ಯೂ ಪಂತರು ಅದನ್ನು ಲಕ್ಷಿಸದೆ ವಿಠ್ಠಲನ ನಾಮಸ್ಮರಣೆಯಲ್ಲಿ ಲೀನರಾಗಿಬಿಟ್ಟರು; ಆಗ ಸೇನಾಪತಿಯು ಕೋಪಗೊಂಡು ಎಲ್ಲಿರುವನು ದಾಮಾಜಿಯು ಎಂದು ಅರ್ಭಟಿಸುತ್ತಾ ಮನೆಯಲ್ಲಿ ನುಗ್ಗಿದನು. ಆಗ ಪಂತರ ಪತ್ನಿಯು ಸೇನಾಪತಿಯ ಬಾಯಿ ಕೇಳಿ ಹೊರ ಬಂದು ಆತನನ್ನು ಕುರಿತು– ಯಾರಪ್ಪಾ ನೀನು ಏಕೆ ಬಂದೆ ಎಂದು ಕೇಳಿದಳು. ಆಗಾತನು ನಾನು ಬಾದಶಹನ ಸೇನಾಪತಿಯು ದಾಮಾಜಿಯನ್ನು ಕಂಡು ಮಾತನಾಡತಕ್ಕದ್ದಿದೆ. ತೀವ್ರ ಆತನನ್ನು ಹೊರಗೆ ಕಳುಹಿಸು ಎಂದನು. ಆಗಾಕೆಯು ಪೂಜೆಯಲ್ಲಿ ಕೂತಿದ್ದಾರೆ. ನೀನಿಲ್ಲಿಯೇ ಕೂತುಕೋ ಪೂಜಾ ಮುಗಿಸಿ ಬರುವರು ಎಂದು ಹೇಳಿದಳು. ಆಗಾತನಲ್ಲಿಯೇ ಒಂದು

ಆಸನದಲ್ಲಿ ಕೂತುಕೊಂಡನು. ಆಗಾಕೆಯು ಪತಿಯ ಬಳಿಗೆ ಹೋಗಿ ಸೇನಾಪತಿಯು ಬಂದ ಸಮಾಚಾರವನ್ನು ತಿಳಿಸಲು ಆಗಾತನು ಕಾರಣವಿಷ್ಟೆ ರಾಜಭಾಂಡಾರದ ಧನ ಧಾನ್ಯಗಳನ್ನು ವೆಚ್ಚಮಾಡಿದ್ದಕ್ಕೆ ಬಾದಶಹನು ಕೋಪಗೊಂಡು ಸೈನ್ಯ ಕಳಿಸಿರಬಹುದು. ನೀನು ನಿಶ್ಚಿಂತೆಯಿಂದಿದ್ದು ಪಾಂಡುರಂಗನ ಸೇವೆ ಮಾಡುತ್ತಿರು. ನಾನು ಬಾದಶಹನಲ್ಲಿಗೆ ಹೋಗಿ ಬರುವೆನು. ಪ್ರಭುಗಳ ಪ್ರಭುವಾದ ಪಾಂಡುರಂಗನಿರುವಲ್ಲಿ ನಮಗೇತರ ಭಯ ಎಂದು ಸತಿಗೆ ಹೇಳಿ ಆಕೆಗೆ ಸಮಾಧಾನ ಹೇಳಿ ಸೇನಾಪತಿಯ ಬಳಿಗೆ ಬಂದು ಆತನನ್ನು ಮಾನಮರ್ಯಾದೆಗಳಿಂದ ಗೌರವಿಸಿ ಮಾತನಾಡಿದನು. ಆಗಾತನು ರಾಜಾಜ್ಞೆಯನ್ನು ತೋರಿಸಲು ಅದನ್ನು ಪಂಡಿತರು ಓದಿನೋಡಿಕೊಂಡು ಒಳ್ಳೇದು ನಿಮ್ಮ ಕಾರ್ಯ ನೀವು ಪೂರೈಸಿ ನಾನು ಬರುವೆನು ಎಂದು ಹೇಳುತ್ತಲೇ ಭಟರು ಆತನ ಕೈಗಳಿಗೆ ಬೇಡಿಯನ್ನು ಹಾಕಿ ಕರೆದುಕೊಂಡು ಸೈನ್ಯದೊಡನೆ ಸೇನಾಪತಿಯು ಹೊರಟನು.

ದಾರಿಯಲ್ಲಿ ಪಂಢರಪುರವು ಹತ್ತಿತು. ಅಲ್ಲಿ ಪಂತರು ಸೇನಾಪತಿಯನ್ನು ಪ್ರಾರ್ಥಿಸಿ ಆತನ ಅನುಮತಿ ಪಡೆದು ನದಿಯಲ್ಲಿ ಸ್ನಾನಮಾಡಿ ಶ್ರೀ ವಿಠ್ಠಲನ ಮಂದಿರಕ್ಕೆ ತೆರಳಿ ದಿವ್ಯ ಮಂಗಳಮೂರ್ತಿಯ ಚರಣದಡಿಯಲ್ಲಿ ಕುಳಿತು ಹೇದೇವಾದಿದೇವಾ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ ನಿನ್ನ ದಿವ್ಯದರ್ಶನವು ಮೋಕ್ಷ ಸಾಮ್ರಾಜ್ಯವನ್ನು ಹೊಂದಿಸತಕ್ಕ ಮಹಾ ವಿಶೇಷವು. ನಿನ್ನ ನಾಮಸ್ಮರಣೆಯು ಸರ್ವಾರ್ಥ ಸಿದ್ಧಿಯು, ತಾಪತ್ರಯವೆಂಬ ಭವರೋಗಕ್ಕೆ ಸಿಲುಕಿ ಪ್ರಭುಸೇವೆಯೆಂಬ ಗೊಂದಲದಲ್ಲಿ ಮುಳುಗಿ ನಿನ್ನ ದರ್ಶನಕ್ಕೆ ಬಾರದಿದ್ದ ನನ್ನನ್ನು ಕ್ಷಮಿಸು. ಕರುಣಾಸಾಗರನಾದ ನೀನು ಪ್ರಯತ್ನಪೂರ್ವಕವಾಗಿಯೇ ನಿನ್ನ ದರ್ಶನಕ್ಕೆ ನನ್ನನ್ನಿಲ್ಲಿಗೆ ಬರಮಾಡಿಕೊಂಡಿ. ನಿನ್ನ ಕಾರುಣ್ಯವನ್ನು ನಾನೆಷ್ಟೆಂದು ಬಣ್ಣಿಸಬಲ್ಲೆ ? ಎಂದು ನುಡಿಯುತ್ತಿರಲು ಕಣ್ಣುಗಳಲ್ಲಿ ಆನಂದಾಶ್ರುಗಳು ತುಂಬಿಕೊಂಡಿರಲು ಹಾಗೆಯೇ ಧ್ಯಾನಪರವಶನಾಗಿ ಮೈಮರೆತನು.

ಇಂತು ಧ್ಯಾನಪರವಶನಾಗಿದ್ದ ದಾಮಾಜಿಯು ತೀವ್ರ ಬಾರದ್ದರಿಂದ ಸೇನಾಪತಿಯು ಕೋಪಗೊಂಡು ಅರ್ಭಟಿಸತೊಡಗಿದನು. ಆ ಸದ್ದನ್ನು ಕೇಳಿ ಪಂತರು ಧ್ಯಾನದಿಂದ ಬಹಿರ್ಮುಖವಾಗಿ ಕಣ್ದೆರೆದು ಮತ್ತೊಮ್ಮೆ ಆ

ದಿವ್ಯ ಮಂಗಳಮೂರ್ತಿಯನ್ನು ಕಣ್ತುಂಬ ನೋಡಿ ನಮಸ್ಕರಿಸಿ ಅಲ್ಲಿಂದ ಹೊರಟು ಸೇನಾಪತಿಯಲ್ಲಿಗೆ ಬಂದರು. ಆಗ ದಾಮಾಜಿ ಸಮೇತ ಸೇನಾ ಸೇನಾಪತಿಯು ಮುಂದೆ ಪ್ರಯಾಣ ಬೆಳೆಸಿದನು.

ಈ ಹೊತ್ತಿಗಾಗಲೇ ಸಕಾಲಕ್ಕೆ ಮಳೆಯು ಸುರಿದದ್ದರಿಂದ ಪೈರು ಸಮೃದ್ಧವಾಗಿ ಬೆಳೆದು ಒಕ್ಕುವ ಸುಗ್ಗಿ ಸಂಭ್ರಮದಲ್ಲಿ ಒಕ್ಕಲಿಗರು ಓಡಾಡುತ್ತಿದ್ದರು. ಎಲ್ಲಿ ನೋಡಿದಲ್ಲಿ ಆನಂದವೇ ಆನಂದ. ಆ ಆನಂದ ಮಬ್ಬಿನಲ್ಲಿ ಕೂಡಾ ದಾಮಾಜಿಪಂಥರನ್ನು ನೆನೆಸದಿರುತ್ತಿರಲಿಲ್ಲ. ಅನ್ನ ಇಲ್ಲದೆ ಸಾಯುತ್ತಿರುವಾಗ ಆ ಮಹಾತ್ಮನಾದ ದಾಮಾಜಿಪಂಥರು ಅನ್ನ ನೀಡದಿದ್ದರೆ ಇಂದಿನ ಆನಂದವನ್ನು ನಾವೆಲ್ಲಿಕಾಣುತ್ತಿದ್ದೆವು ಎಂದು ಕೊಂಡಾಡುತ್ತಿದ್ದರು.

ಇತ್ತ ಪಂಥರನ್ನು ಬಂಧಿಸಿ ಕರೆದೊಯ್ದ ಸುದ್ದಿಯು ವೇಗವಾಗಿ ಎಲ್ಲೆಡೆಯಲ್ಲಿಯೂ ಹಬ್ಬಿತು. ನಿಜಭಕ್ತರ ಕಷ್ಟಗಳನ್ನು ಪರಿಹರಿಸಲು ಪಾಂಡುರಂಗನು ಟೊಂಕಕಟ್ಟಿದನು. ಅಂದೇ ರಾತ್ರಿ ಎಲ್ಲ ಊರುಗಳಲ್ಲಿಯೂ ಮುಂದಾಳಾಗಿದ್ದ ಭಕ್ತರ ಕನಸಿನಲ್ಲಿ ಪ್ರಸನ್ನನಾಗಿ ಭಕ್ತರೆ ನೀವು ಅನ್ನವಿಲ್ಲದೆ ಸಾಯುತ್ತಿರುವ ಸಂದರ್ಭದಲ್ಲಿ ಅನ್ನ ನೀಡಿ ಪ್ರಾಣ ಉಳಿಸಿದ ಮಹಾತ್ಮನನ್ನು ಬಾದಶಹನು ಸರ್ಕಾರದ ಧನಧಾನ್ಯಗಳನ್ನು ವೆಚ್ಚ ಮಾಡಿದ್ದಾನೆಂಬ ಅಪಾದನೆಯಿಂದ ಬಂಧಿಸಿ ಒಯ್ದಿದ್ದಾನೆ. ಈಗ ನೀವು ಅದರ ಪ್ರತ್ಯುಪಕಾರವನ್ನು ಮಾಡುವ ಸುಯೋಗವು ಪ್ರಾಪ್ತವಾಗಿದೆ. ಕಾರಣ ಕೂಡಲೆ ಧನಧಾನ್ಯಗಳನ್ನು ಸಂಗ್ರಹಿಸಿ ಮಂಗಳವೇಡೆಯ ತಳವಾರನಿಗೆ ಒಪ್ಪಿಸಿರಿ. ಎಂದು ಆಜ್ಞೆ ಮಾಡಿದನು. ಅದರಂತೆ ಎಲ್ಲ ಊರುಗಳಲ್ಲಿಯೂ ಎತ್ತುವಳಿ ಪ್ರಾರಂಭವಾಗಿ ಒಂದೇ ದಿನದಲ್ಲಿ ಮಂಗಳವೇಡೆಯ ತಳವಾರನಲ್ಲಿ ಧನಧಾನ್ಯಗಳು ಬಂದು ಬಿದ್ದವು. ಆ ಎಲ್ಲ ಸಂಗ್ರಹವನ್ನು ಒಟ್ಟು ಗೂಡಿಸಿ ಆತನು ಉಗ್ರಾಣದಲ್ಲಿ ಹಾಕಿಸಿ ಲೆಕ್ಕ ಮಾಡಲು ಮೊದಲಿನ ಧಾನ್ಯಸಂಗ್ರಹದ ಇಮ್ಮಡಿಯಾಯಿತು. ರೋಖ ಧನವನ್ನೂ ಒಟ್ಟುಗೂಡಿಸಿ ಲೆಕ್ಕ ಮಾಡಲು ಅದೂ ಮೂಲ ಧನದ ಇಮ್ಮಡಿಯಾಗಿದ್ದಿತು. ಆ ಕೂಡಲೇ ತಳವಾರನು ಬಾದಶಹನಲ್ಲಿಗೆ ತೆರಳಿದನು.

ಅತ್ತ ಬಾದಶಹನು ದಾಮಾಜಿ ಪಂತರನ್ನು ತಂದು ಜೈಲಿನಲ್ಲಿಟ್ಟರೂ ಮುಂದೇನು ಮಾಡಬೇಕೆಂಬ ವಿಚಾರದಲ್ಲಿ ಮಗ್ನನಾದನು. ಆ ಹೊತ್ತಿಗೆ

ಸೇವಕನು ಬಂದು ಮಂಗಳವೇಡೆಯಿಂದೋರ್ವನು ತಮ್ಮ ದರ್ಶನಕ್ಕೆ ಬಂದಿರುವನೆಂದು ತಿಳಿಸಲು ಬಾದಶಹನು ಆತನನ್ನು ಕರೆತರುವಂತೆ ಆಜ್ಞೆ ಮಾಡಿದನು. ಆಗ ತಳವಾರನು ಬಾದಶಹನಲ್ಲಿಗೆ ಬಂದು ತಲೆಬಾಗಿ ವಂದಿಸಿ ಸರಕಾರ ನಾನು ಮಂಗಳವೇಡೆಯ ತಳವಾರನು. ನನ್ನ ಹೆಸರು "ಬಟೋ" ಎನ್ನುವರು. ನಾನು ದಾಮಾಜಿ ಪಂತರ ಊಳಿಗದವನು. ತಮ್ಮ ದರ್ಶನಕ್ಕಾಗಿ ಬಂದಿರುವೆನೆನ್ನಲು ಬಾದಶಹನು ಕಡುಕೋಪಗೊಂಡು ಏಕೆ? ಯಾಕೆ ಬಂದಿರುವಿ ಎಂದನು. ಆಗಾತನು ಸರ್ಕಾರ! ಪ್ರಜೆಗಳು ಬರಗಾಲಪೀಡಿತರಾಗಿ ಅನ್ನವಿಲ್ಲದೆ ಸಾಯುತ್ತಿರುವಾಗ ಅವರ ಪೋಷಣೆಗಾಗಿ ತಮ್ಮ ಸರ್ವ ಸಂಪತ್ತನ್ನೂ ವೆಚ್ಚಮಾಡಿದರು ಊರ ಧನಿಕರಿಂದ ಸಹಾಯ ಪಡೆದರು. ಆದರೂ ಬರಗಾಲ ಹಿಂಗಲಿಲ್ಲ. ಕೊನೆಯ ಉಪಾಯವೆಂದು ಸರಕಾರದ ಧನಧಾನ್ಯಗಳನ್ನು ವೆಚ್ಚಮಾಡಿದ್ದು ನಿಜ. ಆದರೆ ಸರಕಾರದ ಧನಧಾನ್ಯಗಳನ್ನು ವೆಚ್ಚಮಾಡಿದ್ದಕ್ಕಾಗಿ ಅವರನ್ನು ಬಂಧಿಸಿದಿರಿ. ಆದರೆ ಮಹಾತ್ಮರು ಪ್ರಜರ ಪ್ರಾಣ ಉಳಿಸಿದ್ದಕ್ಕಾಗಿ ಅವರಿಗೆ ಯಾವ ಬಹುಮಾನ ಕೊಟ್ಟಿರಿ ? ಪ್ರಜೆಗಳೆಲ್ಲರೂ ಪ್ರಾಣ ಬಿಟ್ಟನಂತರ ನೀವೊಬ್ಬರೇ ಜೀವದಿಂದಿದ್ದು ಏನು ಮಾಡುವಿರಿ ! ಆಗ ನಿಮಗೆ ರಾಜನೆಂದು ಯಾರು ಕರೆಯುತ್ತಿದ್ದರು ? ಪ್ರಜೆಗಳ ಶವಗಳ ಮೇಲೆ ನೀವು ಸುಖದ ನರ್ತನ ಮಾಡುತ್ತಿದ್ದಿರೇನು ? ಎಂದು ಒಂದೇ ಸವನೆ ಸುರಿಸಿದ ಪ್ರಶ್ನೆಗಳ ಸುರಿಮಳೆಯಿಂದ ಬಾದಶಹನ ಬುದ್ಧಿ ಭ್ರಮೆಗೊಂಡು ಕೋಪದಿಂದ ನೀನಾರು ಅದನ್ನು ಕೇಳಲು ? ಓರ್ವ ಕಳ್ಳನ ಸೇವಕನಾದ ನೀನೂ ಒಬ್ಬ ಕಳ್ಳನು. ಎಂದೆನ್ನುತ ಯಾರಿಲ್ಲಿ ಬಂಧಿಸಿರಿ. ಇವನನ್ನು ಎಂದು ಆಜ್ಞೆ ಮಾಡಲು ಸೇವಕರು ಅವನನ್ನು ಬಂಧಿಸಬಂದರು. ಆಗ ಆತನು ಹುಸಿನಗೆಯೊಂದನ್ನು ನಕ್ಕು ಸೇವಕರನ್ನು ಕುರಿತು ತಡೆಯಿರಿ ಮುಟ್ಟಿದರೆ ನೆಟ್ಟಗಾಗಲಿಕ್ಕಿಲ್ಲ ಎಂದು ಹೇಳಿದಾಗಿನ ಆತನ ಕೋಪ ಕಂಡು ಸೇವಕರು ಹೆದರಿ ಹಿಂದೆ ಸರಿದರು. ಆಗ ಆತನು ಬಾಗಿಲಲ್ಲಿದ್ದ ಧನದ ಚೀಲವನ್ನು ಮುಂದೆಸೆದು ತೆಗೆದುಕೋ ನಿನ್ನ ಸರಕಾರದ ದುಡ್ಡನ್ನು. ಧಾನ್ಯಗಳನ್ನು ಉಗ್ರಾಣದಲ್ಲಿ ಹಾಕಿಸಿದೆ. ನೋಡಿಕೊಂಡು ಬರಲು ಯಾರನ್ನಾದರೂ ಕಳಿಸಿಕೊಡು. ಎಂದು ಹೇಳಿದನು. ಆಗ ಬಾದಶಹನು ಆಶ್ಚರ್ಯಚಕಿತ

ನಾಗಿ ಇಷ್ಟೊಂದು ಹಣವೂ ಧಾನ್ಯಗಳೂ ಎಲ್ಲಿಂದ ಬಂದವು ಎಂದು ಕೇಳಲು ಆಗಾತನು ಮಹಾತ್ಮರೂ ದಾನಶೂರರೂ ಆದ ದಾಮಾಜಿ ಪಂತರ ಕೃಪೆಯಿಂದ ಎಂದುತ್ತರಿಸಲು ಬಾದಶಹನು ಅದು ಹೇಗೆಂದು ಕೇಳಲು ಪಂತರ ಮೇಲೆ ಬಂದ ಆಪತ್ತು ತಮ್ಮದೆಂದೇ ಬಗೆದ ಪ್ರಜಾಜನರು ಪ್ರತಿಯೊಬ್ಬರೂ ತಮಗೆ ಶಕ್ಯವಿದ್ದಷ್ಟು ಅವರ ಬಿಡುಗಡೆಗಾಗಿ ಕೊಟ್ಟ ಧನ-ಧಾನ್ಯಗಳು ಎಂದು ಹೇಳಿದಾಗ ಪಂತರ ಯೋಗ್ಯತೆಯ ಅರಿವೂ ಆತನ ಮಹಿಮೆಯ ಪ್ರಭಾವವೂ ಗೊತ್ತಾದವು. ಆಗಾತನು ತಂದಿದ್ದ ಧನವನ್ನು ಉಗ್ರಾಣದಲ್ಲಿದ್ದ ಧಾನ್ಯಗಳನ್ನು ಲೆಕ್ಕಮಾಡಿ ತಕ್ಕೊಳ್ಳುವಂತೆ ಮಂತ್ರಿಗೆ ಆಜ್ಞೆಮಾಡಿದನು. ರಾಜಾಜ್ಞೆಯಂತೆ ಧನವನ್ನೂ ಉಗ್ರಾಣದಲ್ಲಿದ್ದ ಧಾನ್ಯಗಳನ್ನೂ ಲೆಕ್ಕಮಾಡಿಕೊಳ್ಳಲು ಮೊದಲಿಗಿಂತ ಇಮ್ಮಡಿಯಾದವು. ಈ ಸಮಾಚಾರವನ್ನು ಬಾದಶಹನಿಗೆ ತಿಳಿಸಲು ಆತನು ಸರಕಾರಕ್ಕೆ ಸೇರಬೇಕಾಗಿದ್ದ ಧನ ಧಾನ್ಯಗಳನ್ನಷ್ಟೇ ತಕ್ಕೊಂಡು ಹೆಚ್ಚಿನದನ್ನು ದಾಮಾಜಿ ಪಂತರಿಗೆ ಒಪ್ಪಿಸುವಂತೆ ಆಜ್ಞೆ ಮಾಡಿದನು. ಮತ್ತು ಆ ಕೂಡಲೇ ಸ್ವತಃ ತಾನೇ ಜೇಲಿಗೆ ನಡೆದು ಹೋಗಿ ಅಲ್ಲಿದ್ದ ಪಂತರನ್ನು ಕಂಡು ಪಂತರೇ ! ನಿಮ್ಮ ತ್ಯಾಗ ಸೇವೆಗಳು ಅಪಾರವಾದವುಗಳು. ಅರಿಯದೆ ನಿಮ್ಮನ್ನು ಬಂಧಿಸಿದ್ದಕ್ಕಾಗಿ ಕ್ಷಮಿಸಬೇಕು. ಎಂದು ಪ್ರಾರ್ಥಿಸಿಕೊಂಡನು. ಆಗ ಆ ಪಂತರು ಪ್ರಭುಗಳೇ ! ನಾನಾವ ಅಂಥ ಕಾರ್ಯ ಮಾಡಿದ್ದೇನೆ. ನಿಮ್ಮ ಧನ-ಧಾನ್ಯಗಳನ್ನು ನಿಮ್ಮ ಪ್ರಜೆಗಳಿಗೆ ದಾನಮಾಡಿದ್ದೇನೆ. ಅದರಲ್ಲಿ ನನ್ನದೇನಿದೆ ? ಎಂದು ಹೇಳಿ ಸುಮ್ಮನಾದರು. ಬಾದಶಹರು ಪಂತರೇ, ಇನ್ನು ನಿಮ್ಮ ಬಿಡುಗಡೆಯಾಗಿದೆ. ಸರಕಾರಕ್ಕೆ ಸಲ್ಲಬೇಕಾಗಿದ್ದ ಧನ-ಧಾನ್ಯಗಳನ್ನು ನಿಮ್ಮ ಸೇವಕನೂ ನಿಮ್ಮ ಊರವನೂ ಆದ ಬಟೋ ಎಂಬ ತಳವಾರನು ತಂದು ಮುಟ್ಟಿಸಿದ್ದಾನೆ. ಎಂದು ಹೇಳಲು, ಪಂತರು ಬಾದಶಹರ ಆ ಮಾತಿನಲ್ಲಿ ನಂಬಿಗೆಯಾಗದೆ— ಸರಕಾರ ! ನಮ್ಮೂರಲ್ಲಿ ಬಟೋ ಎಂಬ ತಳವಾರನೇ ಇಲ್ಲ. ಮೇಲಾಗಿ ಅವನು ನನ್ನ ಚಾಕರನೆಂದು ಅನ್ನುತ್ತಿರುವಿರಿ. ಆದರೆ ನನ್ನ ಚಾಕರರಲ್ಲಿ ಬಟೋ ಎಂಬ ಹೆಸರಿನವನೇ ಇಲ್ಲ. ಅಂದಮೇಲೆ ನಿಮ್ಮ ಮಾತನ್ನು ನಂಬುವದಾದರೂ ಹೇಗೆ ? ನಿಮ್ಮ ಮಾತಿನ ಅರ್ಥವೇ ನನಗಾಗಲೊಲ್ಲದು ಎಂದು ಹೇಳಲು, ಬಾದಶಹರು

ನಿಜಪಂತರೆ ಸಾದುಗಪ್ಪು ಸುಂದರ ನವತರುಣನಿರುವನು. ಅವನು ಇನ್ನೂ ಮಂತ್ರಿಯ ಬಳಿ ಪಾವತಿ ಪಡೆಯಲು ಇದ್ದರೂ ಇರಬಹುದು. ನಿಮಗೆ ನಂಬಿಗೆಯಾಗದಿದ್ದರೆ ತೋರಿಸುವೆನು ಬನ್ನಿರಿ ಎಂದು ಹೇಳಿ ಪಂತರನ್ನು ಕರಕೊಂಡು ಮಂತ್ರಿಯ ಬಳಿಗೆ ಬಂದು, ಹಣ ತಂದಿದ್ದ ಮಂಗಳವೇಡೆಯ ತಳವಾರನೆಲ್ಲಿರುವನು ಎಂದು ಬಾದಶಹರು ವಿಚಾರಿಸಿದರು. ಮಂತ್ರಿಯು ಆತನು ಪಾವತೀ ಪಡಕೊಂಡು ಆಗಲೇ ಹೊರಟು ಹೋದನು. ಎಂದು ಹೇಳಲು ಆಶ್ಚರ್ಯದ ಆವೇಶವು ಬಾದಶಹರಲ್ಲಿ ತುಂಬಿಕೊಳ್ಳಲು, ಕೂಡಲೇ ಹುಡುಕಿ ಕರೆತನ್ನಿರಿ ಎಂದು ಆಜ್ಞೆ ಮಾಡಿದನು. ಆ ಪ್ರಕಾರ ಮಂತ್ರಿಯು ಅಷ್ಟ ದಿಕ್ಕುಗಳಿಗೂ ಸೈನಿಕರನ್ನು ಕಳುಹಿಸಿದನು. ನಗರದ ಬೀದಿ ಬೀದಿಗಳಲ್ಲಿ ಹುಡುಕಿಸಿದನು. ಆದರೂ ಆತನು ಸಿಗದೆ ಹೋದನು. ಆಗ ಬಾದಶಹನ ತಲೆಯಲ್ಲಿ ಒಂದೇಸವನೆ ವಿಚಾರತರಂಗಗಳು ತೇಲತೊಡಗಿದವು. ಆ ತಳವಾರನು ಅಂದಮಾತಿಗೂ, ಪಂತರಾಡುವ ಮಾತಿಗೂ ಒಂದಕ್ಕೊಂದು ಅರ್ಥವೇ ಇಲ್ಲ. ಪಂತರಂತೂ ಸುಳ್ಳಾಡತಕ್ಕವರಲ್ಲ. ಮತ್ತು ಅವನನ್ನು ಹುಡುಕಿಸಿದರೂ ಅವನು ಸಿಗಲಿಲ್ಲವೆಂದಮೇಲೆ ಇದರ ನಿಜಾಂಶವೇನು ? ಎಂದು ಆಲೋಚಿಸತೊಡಗಿದನು. ಪಂತರು ಇದು ಪರಮಪಾವನ ಮೂರ್ತಿಯಾದ ಪಾಂಡುರಂಗನ ನಾಟಕವೆಂದು ಖಚಿತಗೊಂಡರು. ಆಗ ತುಂಬಿದ ಭಕ್ತಿಯಿಂದ ಭಾವನಾಪರವಶನಾಗಿ ಹೇ ಪರಂಧಾಮಾ, ಕಲ್ಯಾಣಮಯ ಸ್ವರೂಪನೇ, ಪಾಂಡುರಂಗ ಪರಬ್ರಹ್ಮನೇ, ಲೀಲಾವಿಲಾಸಿಯೇ ದೀನನಾದ ನನಗಾಗಿ ನೀನು ತಳವಾರನ ವೇಷ ಧರಿಸಿದೆಯಾ ? ಕಷ್ಟಬಟ್ಟು ಪ್ರಜೆಗಳಿಂದ ಧನ-ಧಾನ್ಯಗಳನ್ನು ಸಂಗ್ರಹಿಸಿ ಸರಕಾರಕ್ಕೆ ಸಲ್ಲಿಸಿದಿಯಾ ? ನನ್ನ ಬಿಡುಗಡೆಗಾಗಿ ನೀನು ಇಷ್ಟೊಂದು ಶ್ರಮಪಟ್ಟೆಯಾ ? ದೇವಾದಿ ದೇವಾ, ಕರುಣಾನಿಧಿಯೇ, ಅನಾಥರಕ್ಷಕಾ ನಿನ್ನ ದಾಸಾನುದಾಸನಾದ ನನ್ನ ಸಲುವಾಗಿ ಅಪೂರ್ವ ವೇಷಭಾಷೆಗಳುಂಟಾದವು ? ಆನಂದಮೂರ್ತಿ ನಿನ್ನ ವೇಷಭಾಷೆಗಳನ್ನು ಕಂಡು ಕುತೂಹಲಗೊಂಡಿದ್ದ ಬಾದಶಹನ ಭ್ರಮೆಯನ್ನು ದೂರಮಾಡಲು ಪ್ರಸನ್ನನಾಗಿ ನಿನ್ನ ಮಂಗಳ ಮೂರ್ತಿಯನ್ನು ತೋರ್ಪಡಿಸಿ, ನಮ್ಮೆಲ್ಲರನ್ನು ಸಂತೋಷಪಡಿಸು. ಎಂದು ಪ್ರಾರ್ಥಿಸಲು ಆಗ ಆ ಪಾವನಮೂರ್ತಿಯು ಭಕ್ತನ ಮೊರೆಯನ್ನು ಕೇಳಿ, ಜಗನ್ಮೋಹನ

ಕರವಾದ ತನ್ನ ದಿವ್ಯ ಮಂಗಳ ರೂಪದಿಂದ ಎಲ್ಲರಿಗೂ ದರ್ಶನವಿತ್ತನು. ಆಗ ಬಾದಶಹನು ಆ ದಿವ್ಯ ಚರಣಕಮಲಗಳಿಗೆ ನಮಸ್ಕರಿಸಿ ನಿಂತುಕೊಂಡು ಆ ಆನಂದರೂಪವನ್ನು ಕಣ್ಣಾರೆ ಕಂಡು ಸಂತೋಷಪಡುತ್ತಿದ್ದನು. ಪಂತರು ಆತನನ್ನು ಸ್ತುತಿಸುತ್ತ ಆನಂದಪರವಶರಾಗಿದ್ದರು. ಆಗ ದೇವಾದಿದೇವನು ಎಲ್ಲರನ್ನೂ ಒಮ್ಮೆ ಕರುಣಾಕಟಾಕ್ಷದಿಂದ ನೋಡಿ ಭಕ್ತ ಶಿರೋಮಣಿಯಾದ ದಾಮಾಜಿಪಂತರಿಗಾಗಿ ಬಟೋ ಎಂಬ ತಳವಾರನ ವೇಷ ಧರಿಸಿ ಹಣ ತಂದು ಕೊಟ್ಟವನು ನಾನೇ. ಆತನ ಅಸಾಮಾನ್ಯ ಧೈರ್ಯವೂ, ಭೂತದಯೆಯೂ ನನ್ನ ಮೆಚ್ಚಿಗೆ ಪಡೆದವು. ಈ ಬಾದಶಹನಮೂಲಕವಾಗಿ ನೀವೆಲ್ಲರೂ ಇಂದು ನನ್ನ ದರ್ಶನ ಪಡೆದಿರಿ. ಭಕ್ತರಿಗಾಗಿ ಎಂಥ ಹೀನ ಕಾರ್ಯಗಳನ್ನು ಕೂಡ ಮಾಡಬಲ್ಲೆನು, ಎಂದು ಹೇಳಿ, ಎಲ್ಲರಿಗೂ ಆಶೀರ್ವದಿಸಿ ಅಂತರ್ಗತನಾದನು. ಆಗ ಬಾದಶಹನು ಪಂತರ ಚರಣಗಳಿಗೆರಗಿ, ಪೂಜ್ಯನೇ ! ಇಂದು ನಿನ್ನ ಪುಣ್ಯ ವಿಶೇಷದಿಂದ ಶ್ರೀ ಪರಮಾತ್ಮನ ದರ್ಶನವಾಯಿತು. ನೀನು ಧನ್ಯನು. ನಾನು ಇನ್ನು ನಿನ್ನ ಸೇವಕನು, ಈ ಅನಿತ್ಯವಾದ ಪ್ರಪಂಚದ ಲಂಪಟದಲ್ಲಿರಲು ನನಗೆ ಎಳ್ಳಷ್ಟೂ ತೃಪ್ತಿ ಇಲ್ಲ, ಇದರಿಂದ ಬಿಡುಗಡೆಹೊಂದಿಸತಕ್ಕ ಭಾರ ನಿನ್ನದು ಎಂದು ಬಿನ್ನವಿಸಲು, ಪಂಥರು ಆತನಿಗೆ ತಾರಕ ಮಂತ್ರೋಪದೇಶವನ್ನು ಮಾಡಿ ಆಶೀರ್ವದಿಸಿದರು. ದೊರೆಯು ಅಂದಿನಿಂದ ಪಾರಮಾರ್ಥ ವಿಚಾರಶೀಲನಾಗಿ ಶ್ರೀ ಪರಂಧಾಮನ ಸಾನಿಧ್ಯವನ್ನು ಹೊಂದಿದನು. ದಾಮಾಜೀಪಂಥರು ಸಾವಿರಾರು ಜನರನ್ನು ಭಗವದ್ಭಕ್ತರನ್ನಾಗಿ ಮಾಡಿ, ಶ್ರೀ ವಿಠ್ಠಲನ ಭಜನೆಯನ್ನು ಜನರಲ್ಲಿ ಪ್ರಸಾರ ಮಾಡಿ, ಸತಿಯೊಂದಿಗೆ ಪಾಂಡುರಂಗನ ಪರಮ ಸನ್ನಿಧಿಯನ್ನು ಸೇರಿದರು.

**ಮುಗಿದುದು**

## —: ನಮ್ಮ ಕೆಲವು ಪ್ರಕಟನೆಗಳು :—

| | |
|---|---|
| ಪಂಚತಂತ್ರ | ೩=೧೦ |
| ಬೆಡಗಿನ ವಚನಗಳು | ೩=೨೦ |
| ಹರಿದಾಸರ ಕಥೆಗಳು | ೨=೦೦ |
| ಜಾನಪದ ಗೀತೆಗಳು | ೧-೫೦ |
| ಪುರಂದರದಾಸರ ಪದಗಳು | ೧=೫೦ |
| ತೆನ್ನಾಲಿ ರಾಮಕೃಷ್ಣನ ಕಥೆಗಳು | ೧ ೫೦ |
| ವೇದದೊಳಗಿನ ಕಥೆಗಳು | ೧-೫೦ |
| ಪ್ರಭುದೇವರ ವಚನಗಳು | ೧-೫೦ |
| ಹಾತಿಮತಾಯಿ ಕಥೆಗಳು | ೧=೫೦ |
| ಸ್ತ್ರೀ ನೀತಿ ಕಥೆಗಳು | ೧ ೫೦ |
| ಕಲ್ಯಾಣದ ಕ್ರಾಂತಿಕಾರರು | ೧-೫೦ |
| ಜಾನಪದ ಕಥೆಗಳು | ೧=೫೦ |
| ಬೀರಬಲ್ಲನ ಕಥೆಗಳು | ೧-೫೦ |
| ೬೩ ಶಿವಶರಣರ ಕಥೆಗಳು | ೧=೫೦ |
| ಅರೇಬಿಯನ್ ನೈಟ್ಸ್ ಭಾಗ ೧ | ೧=೫೦ |
| ಅರೇಬಿಯನ್ ನೈಟ್ಸ್ ಭಾಗ ೨ | ೧ ೫೦ |
| ರತ್ನಮಂಜರಿ | ೧-೫೦ |
| ಹಿತೋಪದೇಶ | ೧=೫೦ |
| ಯೋಗಾಸನ ಹಾಗೂ ಬ್ರಹ್ಮಚರ್ಯ | ೧ ೫೦ |
| ಭಟ್ಟಿ ವಿಕ್ರಮಾದಿತ್ಯನ ಕಥೆಗಳು | ೧=೫೦ |
| ಕನ್ನಡ-ಇಂಗ್ಲೀಷ ಟೀಚರ | ೧=೫೦ |
| ಕನ್ನಡ-ಹಿಂದಿ ಸ್ವಯಂಬೋಧೆ | ೧ ೫೦ |
| ಹಸ್ತ ಸಾಮುದ್ರಿಕ | ೧ ೫೦ |
| ಗುರು ಚರಿತ್ರೆ | ೧ ೫೦ |
| ಬೇತಾಳನ ಕಥೆಗಳು | ೧ ೫೦ |
| ಮಕ್ಕಳ ಕಥೆಗಳು | ೧ ೫೦ |
| ಬಸವಣ್ಣನವರ ವಚನಗಳು | ೧ ೫೦ |
| ಶಿವಪುರಾಣ ಕಥಾವಳಿ | ೧=೫೦ |
| ಇಸೋಪನ ಕಥೆಗಳು | ೧-೫೦ |
| ಭಾಗವತದಲ್ಲಿಯ ಶೃಂಗಾರ ಕಥೆಗಳು | ೧=೫೦ |
| ಶಿವಲೀಲಾಮೃತ | ೧ ೫೦ |
| ಸರ್ವಜ್ಞನ ವಚನಗಳು | [illegible] |
| ಪೌರಾಣಿಕ ಪ್ರಣಯ ಕಥಾವಳಿ | [illegible] |
| ಗುಲ್‌ಬಕಾವಲಿ ಕಥೆಗಳು | [illegible] |
| ರಾಮಕೃಷ್ಣ ಪರಮಹಂಸ | [illegible] |
| ಕನ್ನಡ ಟೀಚರ | ೨-೦೦ |

**ಸಿಟಿ ಬುಕ್ ಸ್ಟಾಲ್, ಹುಬ್ಬಳ್ಳಿ.**